# ನಾಡಕೋಗಿಲೆ





ಶ್ರೀ ಗುರುಸ್ವಾಮಿ ಕಲಿಕೇರಿ ಕೃತ.

1967 ] [ ಬೆಲೆ:- ೨-೦೦

# ಪ್ರಕಾಶಕರ ಮಾತು

ಈ ಗ್ರಂಥದಲ್ಲಿ.................. ಸಾಹಿತ್ಯ ಹೊನಲಾಗಿ ಹರಿದಿ ವಿದ್ವತ್‌ದ ಪ್ರದರ್ಶನವಾಗಿದೆ. ಶ್ರಿಂಗಾರ; ಕರುಣ, ದುಃಖ ಮುಂತಾ ನವರಸಗಳ ದಿವ್ಯ ಸಾಕ್ಷಾತ್ಕಾರವಾಗಿದೆ.

ಮೊದಲಿನಿಂದ ಕೊನೆಯವರೆಗೂ ಓದುಗರ ಕುತೂಹಲ ಕೆರ ಸುವ ಈಗ್ರಂಥ– ರಸಿಕರಿಗೆ ರಸದೂಟ; ಬಡಿಸುವ ಬೃಹದ್ ಗ್ರಂ ವಾಗಿ ಸಾಹಿತ್ಯ ಪ್ರಪಂಚಕ್ಕೆ ಎಡೆಯಾಗಿದೆ. ಸಹೋದರ ಶ್ರೀ ಗುರು ಸ್ವಾಮಿ ಸಂಗೀತ ವಿಶಾರದರಾಗಿದ್ದಂತೆ ಸಾಹಿತ್ಯ ಪ್ರಪೂರ್ಣವೆಸ್ನು ...ನದಿಂದ ತಿಳಿಯ ಪಡಿಸಿದ್ದಾರೆ.

—ಪ್ರಕಾಶಕರು

# ಕನ್ನಾಡಕೋಗಿಲೆ

( ಪಂ. ಪುಟ್ಟರಾಜರ ಪರಿಚಯಾತ್ಮಕ ಗದ್ಯಗ್ರಂಥ )



ಪ್ರಕಾಶಕರು:-
ಶಿವಶರಣರಾದ
ಶ್ರೀ ಶಿವಣ್ಣ ಹಾಗೂ ಶಿದ್ದಣ್ಣ
ಗಾಣಿಗೇರ, ಕೋಡಬಾಳ



ಲೇಖಕರು:-
ಶ್ರೀ ಗುರುಸ್ವಾಮಿ. ಕಲಿಕೇರಿ.

1967 ]  [ ಬೆಲೆ. ೨-೦೦

ಪ್ರಕಾಶನ ಸ್ಥಲ:-

**ಶಿವಾನುಭವ ಮಂಟಪ, ಕೋಡಬಾಳ.**



★

ಪ್ರಥಮ ಮುದ್ರಣ ೧೦೦೦ ಪ್ರತಿ.



ಪ್ರಕಾಶಕರು:-

ಶಿವಶರಣರಾದ

**ಶ್ರೀ ಶಿವಂಣ ಹಾಗೂ ಶಿದ್ದಂಣ ಗಾಣಿಗೇರ, ಕೋಡಬಾಳ**





ಮುದ್ರಕರು

**ಶ್ರೀ ಶಿದ್ಧೇಶ್ವರ ಪ್ರೆಸ್, ಗದಗ.**

**ತಾ. ೧೨—೫—೧೯೬೭.**



(ಕನ್ನಾಡ ಕೋಗಿಲೆ) ಚರಿತ್ರ ನಾಯಕರಾದ
ಶ್ರೀ ವೇ|| ಪಂ. ಪುಟ್ಟರಾಜ ಕವಿ, ಗವಾಯಿಗಳು. ( ಸೀತಾರ ವಾದನದಲ್ಲಿ)



ಶ್ರೀ ವೇ|| ಪಂ. ಪುಟ್ಟರಾಜ ಕವಿ. ಗವಾಯಿಗಳು.
ಸಾರಂಗಿ ವಾದನದಲ್ಲಿ

K. B. Goudar.

— ಶ್ರೀ ಸಿದ್ಧಲಿಂಗ ಪ್ರಸೀದ. —

# ಶ್ರೀಮನ್ನಿರಂಜನ ಪ್ರಣವಸ್ವರೂಪಿ ಮಹಾಂತ ಸ್ವಾಮಿಗಳು ಸವದಿ ಅವರ ಮುನ್ನುಡಿ.

"ಕನ್ನಾಡ ಕೋಗಿಲೆ" ಎಂಬ ಈ ಪುಸ್ತಕಕ್ಕೆ ಮುನ್ನುಡಿ ಯೊಂದು ನಾಲ್ಕು ಮಾತುಗಳನ್ನು ಬರೆಯಲು ನಮಗೆ ಬಹು ಸಂತೋಷವೆನಿಸುತ್ತದೆ.

ಪ್ರಜ್ಞಾಚಕ್ಷು ಪಂ. ಪುಟ್ಟರಾಜ ಗವಾಯಿಗಳವರ ಜೀವನ ತುಂಬು ಜೀವನ. ಅವರಿಗು ನಮಗು ಬಹುದಿನಗಳಿಂದಲೂ ಒಂದು ಬಾಂಧವ್ಯ ಬೆಳೆದು ಬಂದಿದೆ. ಅದು ಅಂತಃಕರಣ ಬಾಂಧವ್ಯ. ಮಧುರ ಭಾಂಧವ್ಯ.

ಪರಮ ಪೂಜ್ಯ ಲಿಂ. ಹಾನಗಲ್ಲ ಕುಮಾರ ಮಹಾ ಶಿವ ಯೋಗಿಯ ಕೃಪೆಯಿಂದ ಕನ್ನಡ ನಾಡಿನ ಅದೇಕೆ ಭುವನದ ಭಾಗ್ಯ ವಿಶೇಷತೆಯಿಂವ ರಸಋಷಿ ಪಂ.ಪುಟ್ಟರಾಜರು ಒಬ್ಬ ಮಹಾ ಕವಿಯು "ಬಹುತರ ಕೋಟಿ ಜನಗಳೊಳಾರ್ಜಿಸಿ ದುತ್ತಮ ಪುಣ್ಯ ದೇಳ್ಗೆ ಯಿಂದ" ವಿಶ್ವದ ಭಾಗ್ಯ ವಿಶೇಷದಿಂದ ಉದಯವಾಗುತ್ತಾನೆ.

ಕನ್ನಡ ಸಾಹಿತ್ಯಕ್ಕೆ ಅವರ ಕಾಣಿಕೆ ಅತ್ಯಮೌಲ್ಯವಾದುದು ಅಸದೃಶವಾದುದು. ಕವಿಯಾಗಿ ಕಲಾರಾಧಕರಾಗಿ ಜನಮನದ ವೀಣೆ ಯನ್ನು ಅವರು ಮಿಡಿದರು. ವಿಜಯನಗರ ಸಾಮ್ರಾಜ್ಯದ ಪತನಾ ನಂತರ ಕನ್ನಡ ನಾಡು ಪರಕೀಯರ ಪ್ರಭಾವಕ್ಕೆ ಒಳಗಾಗಿ ಗಾಡಾಂ ದಕಾರದಲ್ಲಿ ಮುಳುಗಿದ್ದಿತು. ನಿಶಯ ನೀರವತೆಯಲ್ಲಿ ಮುಳುಗಿದ ನಾಡನ್ನು ಎಚ್ಚರಿಸುವ ಮಹತ್ಕಾರ್ಯವನ್ನು ಕವಿವೃಂದ ಕಾಲಕಾ-

ಲಕ್ಕೆ ಮಾಡುತ್ತ ಬಂದಿದೆ. ಅಂತಹರಲ್ಲಿ ಪಂ. ಪುಟ್ಟರಾಜಗವಾಯಿಗಳವರ ಸ್ಥಾನ ಗುರುತರವಾದುದು. ಅವರ ಕಾವ್ಯಗಳ ರಸಾಸ್ವಾದನೆ ಮಾಡದ ಕನ್ನಡಿಗರಿಲ್ಲ.

ಸಾಹಿತ್ಯದೇವಿಯ ಆರಾಧಕರಾದ ಪಂ. ಪುಟ್ಟರಾಜ ಗವಾಯಿಗಳವರು ೬೫ ಗ್ರಂಥಗಳನ್ನು ರಚಿಸಿದ್ದಾರೆ. ಅವರ ಕಾವ್ಯ ಸಂಕಲನಗಳು ಕಾವ್ಯಶ್ರೀಯ ಮಂಗಲಹಾರದಂತಿವೆ. ನಾಟಕಕಾರರಾಗಿ ವಿಮರ್ಶಕರಾಗಿ, ಪ್ರಬಂಧಕಾರರಾಗಿ, ಕತೆಗಾರರಾಗಿ ಕನ್ನಡ ಸಾಹಿತ್ಯದ ಶ್ರೀಮಾಲಿಕೆಯನ್ನು ಹೆಚ್ಚಿಸಿದ್ದಾರೆ. ತಿಳಿಪಿನ ತೆನೆಗಳನ್ನು ತೆಕ್ಕೆ ಮಾಡಿಕೊಟ್ಟಿದ್ದಾರೆ. ಸಾಹಿತ್ಯದ ಯಾವದೇ ಪ್ರಕಾರವನ್ನು ಬರೆಯಲು ಪಕ್ರಮಿಸಿದರೆ ಅದನ್ನು ಪರಿಪೂರ್ಣವಾಗುವಂತೆ ನೋಡಿಕೊಳ್ಳುವದು ಪಂ. ಪುಟ್ಟರಾಜ ಕವಿಗಳ ವೈಶಿಷ್ಟ್ಯವಾಗಿದೆ. ಅಂತೆಯೇ ಅವರ ಸಾಹಿತ್ಯ ಮೇರು ಸದೃಶ ಕೃತಿಗಳಾಗಿ ಗೋಚರಿಸುತ್ತಿವೆ. "ಅಕ್ಕಮಹಾದೇವಿಯ" ಕಾವ್ಯವನ್ನು ಇಲ್ಲಿ ಸ್ಮರಿಸಬಹುದು ಈ ಮಹಾಕಾವ್ಯ ಸೃಷ್ಟಿಯಿಂದ ಕನ್ನಡಿಗರ ಹಿರಿಮೆ ಹೆಮ್ಮೆಗಳ ಚಿರಸ್ಥಾಯಿಯಾಗಿವೆ. ಪಂ. ಪುಟ್ಟರಾಜ ಕವಿಗಳು ಕನ್ನಡ ಸಾಹಿತ್ಯವನ್ನು ಅಂಗವಿರಿಸಿಕೊಂಡಂತೆ ಹಿಂದಿ, ಸಂಸ್ಕೃತ ಸಾಹಿತ್ಯ ಸಾಗರದಲ್ಲಿಯೂ ಈಜಾಡಿದ್ದಾರೆ. ಅಲ್ಲಿಂದ ಅನರ್ಘ್ಯ ಗ್ರಂಥರತ್ನಗಳನ್ನು ಹೊರತೆಗೆದು ಭಾರತೀಯರಿಗೆ ಮಹದುಪಕಾರ ಮಾಡಿದ್ದಾರೆ. ನಾಲ್ಕಾರು ವರುಷದ ಸುಧೀರ್ಘ ತಪಸ್ಸಿನ ಫಲವಾಗಿ ರಾಷ್ಟ್ರಭಾಷೆಯಲ್ಲಿ ಜಗಜ್ಯೋತಿ ಶ್ರೀ ಬಸವಮಹಾನುಭಾವನ ಬೃಹತ್ ಕಾವ್ಯವನ್ನು ಪ್ರಪಂಚದ ಕಾಣಿಕೆಯಾಗಿ ನೀಡಿದ್ದಾರೆ. ಅವರು ಆಧುನಿಕ ವ್ಯಾಸಮಹರ್ಷಿಗಳಾಗಿ ಪರಿಣಮಿಸಿರುವರು. ಸಂಸ್ಕೃತದಲ್ಲಿ ಶ್ರೀಮತ್ ಕುಮಾರ ಗೀತಾ ಎಂಬ ವಿಶ್ವಸಿದ್ಧಾಂತ ಪ್ರತಿಪಾದಕ ಧಾರ್ಮಿಕ ಗ್ರಂಥವನ್ನು ಬರೆದು ಉಪಕರಿಸಿದ್ದಾರೆ.

ಅವರ ಪುಸ್ತಕಗಳನ್ನೋದಿ ತಿಳಿವಿನ ಬೆಳಕನ್ನು ಕಂಡ ಜನ ಲಕ್ಷಾವಧಿಯಾದರೆ ಅವರ ಅನುಕರಣೀಯವಾದ ನಿರರ್ಗಳವಾದ ನಿತಾಂತ ಮನೋಹರವಾದ ಕೀರ್ತನೆ, ಪ್ರವಚನ, ಉಪನ್ಯಾಸಗಳನ್ನು ಕೇಳಿ ಆನಂದಿಸಿದ. ಅರಿವಿನ ಅರಕವನ್ನು ತುಂಬಿಕೊಂಡಜನ ಗಣನೆಗೆ ನಿಲುಕದಂತಿಹುದು.

ಸಾಹಿತ್ಯ ಸೇವಾ ಸಕ್ತರಾದ ಪಂ. ಪುಟ್ಟರಾಜ ಕವಿಗಳು ಸಂಗೀತ ಸಾಹಿತ್ಯದಲ್ಲಿಯೂ ನೈಪುಣ್ಯತೆಯನ್ನು ಪಡೆದು, ಗಾಯನಾಚಾರ್ಯರಾಗಿದ್ದಾರೆ. ಪರಿಪೂರ್ಣ ವಾಗ್ಗೇಯಕಾರರಾಗಿದ್ದಾರೆ. ಅವರು ಅಲೌಕಿಕ ಪುರುಷರಾಗಿದ್ದಾರೆ. ಮಹಾನುಭಾವಿಗಳಾಗಿದ್ದಾರೆ ಇದಲ್ಲದೆ ಅವರಲ್ಲಿ ಮಹಾಪಾಂಡಿತ್ಯ, ಉಜ್ವಲ ಶಿವಯೋಗ ಸಾಧನೆ ಇವುಗಳ ಅನುಪಮ ಸಂಗಮವು ಮೈವೆತ್ತಿ ನಿಂತಿದೆ.

ಈ ಚರಿತ್ರೆಯಲ್ಲಿ ಬರುವ ಕೆಲವು ವಿಚಾರಗಳು ವಿನೂತನವಾಗಿವೆ. ಪಂ. ಪುಟ್ಟರಾಜ ಗವಾಯಿಗಳವರ ಮೇಲಿನ ಪೂಜ್ಯಭಾವನೆಯಿಂದ ಬರೆದಿರುವದರಿಂದ ಭಾಷೆಯು ಹೊರಸೂಸಿ ಬಂದಿವೆ. ಚರಿತ್ರ ನಾಯಕರ ಬಗ್ಗೆ ತೆಗೆದ ಉದ್ಗಾರಗಳು ಲೇಖಕರ ವಿಶಾಲ ಹೃದಯದ ದ್ಯೋತಕಗಳಾಗಿವೆ. ಅವರ ನಿಜವಾದ ಸಂಗತಿಯನ್ನು ತಿಳಿಸತಕ್ಕವುಗಳೂ ಆಗಿರುತ್ತವೆ.

ಉತ್ಸಾಹಿ ತರುಣ ಸಾಹಿತಿ ಕಲಕೇರಿ [ಕವಿಕೇರಿ] ಯ ಗದ್ದುಗೆ ಮಠದ ಶ್ರೀಗುರುಸ್ವಾಮಿಯವರು ಗಣ್ಯ ಸಾಹಿತ್ಯ ಕಾರ್ಯವನ್ನು ಮಾಡಿದ್ದಾರೆ. ಕನ್ನಡಿಗರಿಗೆ ಒಬ್ಬ ಅದ್ವಿತೀಯ ಕನ್ನಡಜ್ಯೋತಿಯ ಪರಿಚಯ ಮಾಡಿಕೊಟ್ಟು ಕೃತಾರ್ಥರಾಗಿದ್ದಾರೆ. ಮುಂಬಯಿ ಗಂಧರ್ವ ಮಹಾ ವಿದ್ಯಾನಿಲಯದ "ಸಂಗೀತ ವಿಶಾರದ" ರಾಗಿ ಅವರು "ಜೀವನ ಕವನ" ಎಂಬ ಸಂಕಲನವನ್ನು ಸಂಪಾದಿಸಿದ್ದಾರೆ.

"ಗದುಗಿನ ಗಾನಯೋಗಿ" "ಪ್ರಗತಿಯ ಪಥ" ಎಂದು ಚರಿತ್ರೆಯನ್ನು ಬರೆದಿದ್ದಾರೆ. "ಗೆಳೆತನ" "ಯೌವನ" "ಮದುವೆಯ ಮಂಟಪ" ಮೊದಲಾದ ನಾಟಕಗಳನ್ನು ಪ್ರಕಟಿಸಿದ್ದಾರೆ. ಅವರು ಬರೆದ ಈ ಚರಿತ್ರೆಯಲ್ಲಿ ಅಲ್ಲಲ್ಲಿ ಸಾಂಪ್ರದಾಯಿಕವಾಗಿದ್ದರೂ ಅದರಲ್ಲಿ ಒಂದು ಭಾವನಾಮಯ ಶೈಲಿ ಹಾಗೂ ವಿವೇಚನೆಯ ಆಕರ್ಷಕ ಗುಣವಿದೆ. ನಿಮ್ಮ ಸಾಹಸ ಸ್ತುತ್ಯವಾಗಿದೆ.

ಪಂ. ಪುಟ್ಟರಾಜ ಗವಾಯಿಗಳವರ ಪರಿಸರದಲ್ಲಿ ಬೆಳೆದು ಬಂದ ಹಾಗೂ ನಮಗೆ ಅತ್ಯಂತ ಆತ್ಮೀಯರಾದ ಕಲಕೇರಿಯ ಗದ್ದುಗೆ ಮಠದ ಶ್ರೀಗುರುಸ್ವಾಮಿಯವರಿಂದ ಇನ್ನು ಹೆಚ್ಚಿನ ಸಾಹಿತ್ಯ ಸೇವೆ ಸಲ್ಲಲಿ ಎಂದು ಹೃದಯಾರೆ ಹಾರೈಸುತ್ತೇವೆ.

.... ಸಿರಿಗನ್ನಡಂ ಗೆಲ್ಗೆ ....

ಮುಕ್ಕಾಂ ನವಿಲುಗುಂದ
ತಾ. ೨೫-೪-೧೯೭೭.

ಶ್ರೀಮನ್ನಿರಂಜನಪ್ರಣವ ಸ್ವರೂಪಿ
ಮಹಾಂತ ಸ್ವಾಮಿಗಳವರು ಸವದಿ.



—॥ ಶ್ರೀಗುರು ಬಸವಲಿಂಗಾಯ ನಮಃ ॥—

## ಪ್ರಕಾಶಕರ ಪರಿಚಯ

ಪುಟ್ಟರಾಜ ಗುರುಗಳ ಶಿಷ್ಯವೃಂದದ ಶಿರೋಮಣಿ, ಶಿವಭಕ್ತ ಶಿಖಾಮಣಿಯೆನಿಸಿದ ಶಿವಣ್ಣನೆಂಬ ನಾಮದ ಸದ್ಭಕ್ತ, ಹಾವೇರಿ ತಾಲೂಕ ಕೋಡಬಾಳದಲ್ಲಿ ಪೂಜ್ಯಗುರುಗಳವರಿಂದ ಬಸವಪುರಾಣದ ಪ್ರವಚನವನ್ನು ತಮ್ಮ ಗ್ರಾಮದೊಳಗೆ ಸ್ವಗ್ರಹದಲ್ಲಿ ಸ್ವಂತ ಖರ್ಚಿನಿಂದ ಎಡಬಿಡದೆ ಮೂರುವರ್ಷ ಮೂರುಮೂರು ತಿಂಗಳವರೆಗೆ ಹಚ್ಚಿಸಿ ತನ್ನಗ್ರಾಮದ ಹಾಗೂಸುತ್ತಲಿನಗ್ರಾಮಗಳ ಜನತೆಯನ್ನು ಶ್ರವಣ ಭಾಗಿಗಳನ್ನಾಗಿ ಮಾಡಿ ಭಕ್ತಿಯ ಬೀಜವನ್ನೂರಿದ ಮಹಾಸದ್ಭಕ್ತ, ಅವನ ಜೀವನದ ಸಂಕ್ಷಿಪ್ತ ಪರಿಚಯವನ್ನು ಓದುಗರ ಮುಂದೆ ಇಡಲು ಪ್ರಯತ್ನಿಸುವೆ.

**ಜನನ:-** ಶಿವಣ್ಣನು ಹುಟ್ಟಿದುದು ೧೯೩೫ ಜನವರಿ ತಿಂಗಳು ಎರಡೆರಂದು ತಂದೆ ರೇವಣೆಪ್ಪ, ತಾಯಿ ಫಕೀರಮ್ಮ ವೀರಶೈವ ಧರ್ಮದ ಸುಸಂಸ್ಕೃತ ದಂಪತಿಗಳ ಉದರದಿಂದ ಕೋಡಬಾಳ ಗ್ರಾಮದಲ್ಲಿ ಈ ಈರ್ವ ದಂಪತಿಗಳ ಉದರದಿಂದಲೇ ಮುಗ್ಧ ಮಹಾ ಸದ್ಭಕ್ತ ಶಿದ್ದಣ್ಣನೆಂಬ ನಾಮದ ಹಿರಿಯ ಮಗನೊಬ್ಬನಿದ್ದ 'ಈರ್ವ ಸದ್ಭಕ್ತರಿಂದ ಧಾರ್ಮಿಕ ಕಾರ್ಯಗಳು ಎಡಬಿಡದೆ ಜರಗಿದ ವಿಷಯ ವಿಚಿತ್ರವಾದವುಗಳು ಇವೆ. ಚಿಕ್ಕವನಾದ ಶಿವಣ್ಣ ಮೂರು ತಿಂಗಳಕೂಸು ಇದ್ದಾಗ ಅವನ ದುರದೃಷ್ಟದೃಷ್ಟಿಯಮೇಲೆ!ಹಾಯ್ದು ಒಂಟಿಗಣ್ಣಿನವನಾಗಿ ಉಳಿದ ತಾಯಿ ಫಕೀರಮ್ಮ ಕೂಸಿನ ಲಾಲನೆ ಪಾಲನೆಯಲ್ಲಿ ನಿಷ್ಕಾಳಜಿ ಇಲ್ಲದೆ ಕಾರ್ಯಮಾಡುತ್ತಿದ್ದರೂ ಮಗುವಿಗೆ ಕಣ್ಣುಬೇನೆ ಬಂದು ಎರಡೂ ಕಣ್ಣನ್ನು ಮುಚ್ಚಿ ಕಣ್ಣಿಗೆ ಅರಿ ಬಂದವು ಎಂಟು ದಿನಗಳ ಮೇಲೆ ಅವನ ದೈವದ ಬಲತ್ಕಾರದ ಬಲದಿಂದ ಬಲಗಣ್ಣಿಗೆ ಅರಿ ಹರಿದು ಬಯಲಾಯಿತು ಎಡಗಣ್ಣು ಮಾತ್ರ ಅರಿಯ ಕೈಯಲ್ಲಿ ಸಿಕ್ಕು ಗುಡ್ಡಿ ಸಿಪ್ಪಿಯಂತಾಗಿ ದೃಷ್ಟಿಯನ್ನು ಅರಿಯದಂತಾಗಿ ಒಂಟಿ ಗಣ್ಣಿನ ಬಂಟನಾಗಿ ಉಳಿದ.

ಮೂರು ವರ್ಷದವನಾಗಲು ತಂದೆಯನ್ನು ಕಳೆದುಕೊಂಡು ತಾಯಿಯೊಬ್ಬಳ ಪಾಲಪೋಷಣೆಯಲ್ಲಿ ಬೆಳೆದು ಬಂದು ಆರು ವರ್ಷ ತುಂಬಲು ಶಿಕ್ಷಣ ಕೋಡಬಾಳ ಕ. ಗಂ. ಶಾಲೆಯಲ್ಲಿ ಮಾತ್ರ ಭಾಷೆಯಾದ ಕನ್ನ

ದಲ್ಲಿ ಪ್ರಾರಂಭವಾಯಿತು. ಕನ್ನಡ ನಾಲ್ಕನೆ ತರಗತಿಗೆ ಕಲಿವಿಕೆಗೆ ಕಂಟಕ ಬಂತು. ಹಳ್ಳಿಯ ಶಾಲೆಯಾದ ಕೋಡಬಾಳದಲ್ಲಿ ಇದ್ದ ತರಗತಿಗಳ ಅಷ್ಟು ಮುಂದಿನ ಅಭ್ಯಾಸಕ್ಕಾಗಿ ಪರಊರಿಗೆ ಹೋಗಬೇಕಿತ್ತು. ಚಿಕ್ಕವಯಸ್ಸು ಮತ್ತು ಸಂಗಡಿಗರಿಲ್ಲದ ಮೂಲಕ ಶಿಕ್ಷಣಕ್ಕೆ ಶರಣು ಹೊಡೆದು ಮನೆಯಲ್ಲಿ ಉಳಿದು ಬಿಟ್ಟ.

ಮನೆಯಲ್ಲಿದ್ದು ಕಾಲಹರಣ ಮಾಡುವದು ಮನಸ್ಸಿಗೆ ಬಾರದ ಮೂಲಕ ಸಂಗೀತದ ಅಭ್ಯಾಸ ಮಾಡಲು ವೇ|.ವೀರಯ್ಯನವರು ಮರೋಳ ಇವರಲ್ಲಿ ಸೇರಿ ಸಂಗೀತ ಅಲ್ಪಜ್ಞಾನವನ್ನು ಪಡೆದು ಮನೆಗೆ ಮರುಳಿದ ಏಕೆಂದರೆ ಸ್ವಾಮಿಗಳು ಒಂದೇ ಕಡೆ ನೆಲೆಸಿರವೆ ಟೂರಿಂಗ ಮಾಡುತ್ತಿದ್ದುದರಿಂದ ಅದು ಅವರ ಮನಸ್ಸಿಗೆ ಬಾರದೆ ಅಲ್ಲಿಂದ ಕಾಲ್ದೆಗೆಯ ಬೇಕಾಯಿತು.

ಮುಂದೆ ಆ ಸಂಗೀತದ ರುಚಿ ಮನೆಯಲ್ಲಿರಗೊಡದೆ ಸಂಗೀತದ ಆಗರ ವೆನಿಸಿದ ನಮ್ಮ ಪೂಜ್ಯ ಗುರುಗಳ ವೀರೇಶ್ವರ ಪುಣ್ಯಾಶ್ರಮ ವಾಸಿಗಳಾದರು. ಅಲ್ಲಿ ಸಂಗೀತದ ಅಭ್ಯಾಸವನ್ನು ಮುಂದೊರಿಸಿ ಆಚಾರ ವಿಚಾರ ನಡೆ ನುಡಿ ಅರಿತು ಪೂಜ್ಯ ಗುರುಗಳ ಆಶೀರ್ವಾದಪಡೆದು ತವರೂರಾದ ಕೋಡಬಾಳಕ್ಕೆ ಬಂದರು. ಮನೆಯಲ್ಲಿ ನಡೆದುಬಂದ ಮೇಟಿಯ ಉದ್ಯೋಗದಲ್ಲಿ ತೊಡಗಲು ವೃಷ್ಟಿಯ ಅಭಾವದಿಂದಲೋ ಮುಂದಿನ ಸಮಾಜ ಕಾರ್ಯಕ್ಕಾಗಿಯೋ ಅವರನ್ನು ಮನೆಯಿಂದ ದೈವ ಹೊರಗೆಳೆಯಿತು. ಗುರುವಿನ ಆಶೀರ್ವಾದ ಹೊತ್ತು ಹೊರ ಹೊರಟರು.

ತಾವು ಪಡೆದ ಸಂಗೀತದಿಂದ ಹಳ್ಳಿಯಲ್ಲಿ ನಾಟಕಗಳನ್ನು ಕಲಿಸ ತೊಡಗಿದರು. ಹಳ್ಳಿಯ ನಾಟಕಗಳು ಆರ್ಥಿಕ ದೃಷ್ಟಿಯಿಂದ ಕುಂಠಿತ ವಾಗಲು ಅವುಗಳ ಕಂಟಕವನ್ನು ತಮ್ಮ ಸ್ವಂತ ಹಣವನ್ನು ವ್ಯಯಮಾಡಿ ದೂರೀಕರಿಸಿ ರಂಗಭೂಮಿಯ ಮೇಲೆ ಕಲಿಸಿದ ನಾಟಕವನ್ನು ಪ್ರದರ್ಶಿಸಿ ಕೀರ್ತಿಶಾಲಿಗಳಾದರು. ತಾನು ತನ್ನ ಉದರ ಪೋಷಣೆಗಾಗಿ ಈ ವೃತ್ತಿ ಯನ್ನು ಕೈಕೊಂಡಿರಲಿಲ್ಲ. ಪಗಾರವಿಲ್ಲದೆ ಅವರಲ್ಲಿ ಊಟವನ್ನೂ ಕೂಡಾ ಮಾಡದೆ ಸ್ವಂತದ ಹಣ ಖರ್ಚುಮಾಡಿ ಕಲೆಯನ್ನು ಬೆಳಗಿಸಲು ಪ್ರಯತ್ನ ಪಟ್ಟು ಹತ್ತು ಹದಿನೈದು ಕಡೆ ಈ ರೀತಿ ಪ್ರಯತ್ನಿಸಿ ಕಲಾ ಪ್ರೇಮಿಯೆನಿಸಿ ದರು.

ಮನೆಯಲ್ಲಿ ತಾಯಿ ಅಣ್ಣ ಅವರು ಇವರ ಲಗ್ನದ ಬಗ್ಗೆ ವಿಚಾರಿಸಿ ತಮ್ಮ ಅಕ್ಕನ ಮಗಳಾದ ಶೀಲ ಸಂಪನ್ನೆಯಾದಶಿವಲಿಂಗವ್ವನೊಂದಿಗೆ ಧರ್ಮ ಪದ್ಧತಿಯ ಪ್ರಕಾರ ಲಗ್ನ ಸಮಾರಂಭ ಜರುಗಿತು. ಅದೇ ಕಾಲಕ್ಕೆ ಬಡವರ ಅನೇಕ ಲಗ್ನಗಳು ಜರಗಿ ಸಮಾರಂಭ ಬಹಳ ವಿಜೃಂಭಣೆಯಿಂದ ನಡೆಯಿತು. ತಾಸಿನ್ನು ಸಂಸಾರಿಕನಾದ್ದರಿಂದ ದುಡಿದು ಸಂಪಾದಿಸಬೇಕೆಂದು ವ್ಯವಹಾರ ದಲ್ಲಿ ಕಾಲಿಟ್ಟನು. ಮನೆಯವರಿಂದ ಎರಡು ಸಾವಿರ ರೂಪಾಯಿ ಪಡೆದು ಕಿರಾಣಿ ಅಂಗಡಿಯನ್ನು ಸ್ಥಾಪಿಸಿದ ೧೯೪೮ರ ಅಗಷ್ಟ ತಿಂಗಳದಲ್ಲಿ.

ವ್ಯವಹಾರದಲ್ಲಿ ಅನ್ಯಾಯ ಮೋಸ ಮರೆಗಳಿಲ್ಲವೆ ಸರಳ ಮನಸ್ಸಿನಿಂದ ಪೇಟೆಯ ಪ್ರಕಾರ ಯೋಗ್ಯ ಧಾರಣೆಯನ್ನು ತೆರೆದು ಗಿರಾಕಿಗಳ ಪ್ರೀತಿಗೆ ಪಾತ್ರರಾಗಿ ವ್ಯವಹಾರವನ್ನು ಬೆಳೆಯಿಸಿಕೊಂಡು ಬಂದರು. ತನ್ನ ತಕ್ಕಡಿ ತನ್ನನ್ನು ಮುಂದೊರೆಸಿತೆಂಬ ಭಾವನೆಯ ಭಕ್ತಿ ಬೆಳೆದು ಕಾರ್ತಿಕ ಶುದ್ಧ ಪ್ರತಿಪದೆಯ ದಿನ ಮಹಾಲಕ್ಷ್ಮಿ ಹಾಗೂ ಸರಸ್ವತಿ ಪೂಜಾ ಸಮಾರಂಭ ವಿಜೃಂಭಣೆಯಿಂದ ನಡೆಯ ತೊಡಗಿತು ಅದೇ ಕಾಲಕ್ಕೆ ಕೀರ್ತನೆ ಭಜನೆ ಗಣಾರಾಧನೆಗಳು ಬೆಳಗಿನ ವರೆಗೆ ಮೊಳಗುತ್ತಿರುತ್ತವೆ. ಈ ಭಕ್ತಿಗೆ ಶ್ರೀ ಲಕ್ಷ್ಮಿ ಮಾತೆಯು ಒಲಿದು ಧನ ಸಂಗ್ರಹವಾಯಿತು. ಅದೇ ಹಣದಿಂದ ಮರೋಳ ಗ್ರಾಮದಲ್ಲಿ ಒಂದು ಜಮೀನನ್ನು ಖರೀದಿ ಮಾಡಲಾಯಿತು. ಸದರ ಜಮೀ ನಿನ ತಾಬಾ ಕಾಲಕ್ಕೆ ತಮ್ಮ ಗ್ರಾಮದ ಎಲ್ಲ ಗಳೇಗಳ ಬಸವಣ್ಣನ ಪಾದಸ್ಪರ್ಶ ವಾಗಲೆಂದು ನೂರಾರು ಗಳೇಗಳ ಉಳಿಗತನ ಜರಗಿ ಸಮಸ್ತ ರೈತರ ಅಲ್ಪೋ ಪಹಾರ ಅಲ್ಲಿಯೇ ಜರಗಿ ಜನರ ಪ್ರೇಮ ತನ್ನಮೇಲೆ ಎಷ್ಟಿದೆ ಎಂಬುದನ್ನು ಕಂಡುಕೊಂಡ ಆಜಮೀನ ಒಂದು ವರ್ಷದ ಉತ್ಪನ್ನ ಕೈಗೆ ದೊಯುತ್ತಿತ್ತು ಸದರ ಜಮೀನಿನಲ್ಲೇ ವಿಸ್ತಾರವಾದ ಮಂಟಪವನ್ನು ನಿರ್ಮಿಸಿ ಸುತ್ತಲಿನ ಕಲೆಗಾರರನ್ನು ಕೂಡಹಾಕಿ ಕಲೆಯನ್ನು ಪ್ರದರ್ಶಿಸಿ ಹೊಲದಲ್ಲಿಯ ಬನ್ನಿಯಗಿ ಡಕ್ಕೆ ಕಟ್ಟೆಯ ಕಟ್ಟಿಸಿ ಶೃಂಗರಿಸಿ ಶೀರಿ ಕುಪ್ಪಸ ಉಡಿಸಿ ಮುತ್ತೈದೆಯರಿಂದ ಮುತ್ತಿನಾರತಿ ಮಾಡಿಸಿ ಮಹಾಗಣಾರಾಧನೆ ಮಾಡಿ ಅನ್ನದಾನ ಶೂರನೆಂದು ಹೆಸರು ಪಡೆದ ಈ ಎಲ್ಲ ಮಹಾಕಾರ್ಯಗಳಿಗನುಗುಣವಾಗಿ ವರ್ತಿಸುತ್ತಿದ್ದ ಅವರಣ್ಣ ಶಿದ್ದಣ್ಣ

ಶಿದ್ದಣ್ಣ ಮುಗ್ಧ ಸ್ವಭಾವದ ಮುಗ್ಧ ಭಕ್ತ ನಮ್ಮ ಶಿವು ನಮ್ಮ ಮನೆಯ ಭಾಗ್ಯ ದೇವನೆಂದು ಭಾವಿಸಿದನಲ್ಲದೆ ಮನೆಯ ಎಲ್ಲ ವ್ಯವಹಾರದ ಹೊಣೆಯನ್ನು ಹೊರಿಸಿ ತಾನು ನಿಶ್ಚಿಂತನಾಗಿ ತಮ್ಮನ ಎಲ್ಲ ಕಾರ್ಯದ ರೂಪರೇಷೆಯನ್ನು ನಿರ್ಮಿಸಿ ಕಾರ್ಯಕ್ಷೇತ್ರಕ್ಕೆ ಇಳಿಯುತ್ತಿದ್ದರು ಸರ್ವ ಬಂಧು ಬಳಗ ಸಮೂಹ.

ಇವರ ಮನೆತನ ಒಂದು ಮಹಾರಥವೆಂದು ಭಾವಿಸಿದರೆ ಆರಥದ ಮುಂದಿನ ಬಲದಗಾಲಿ ಶಿದ್ದಣ್ಣ ಎಡದಗಾಲಿ ಶಿವಣ್ಣ ರಥದ ಹಿಂದಿನ ಗಾಲಿಗಳೆಂದರೆ ಬಲದಗಾಲಿ ಶಿದ್ದಣ್ಣನ ಧರ್ಮಪತ್ನಿ ವೀರಮ್ಮ ಎಡದಗಾಲಿ ಶಿವಣ್ಣನ ಧರ್ಮಪತ್ನಿ ಶಿವಲಿಂಗಮ್ಮ ಈ ನಾಲ್ಕು ಗಾಲಿಗಳಿಂದೊಡಗೂಡಿದ ಮಹಾರಥ ಎಳ್ಳಷ್ಟು ಹೊಯ್ದಾಡದೆ ದಡಿಕೆಗೆ ಮುಗ್ಗರಿಸದೆ ಮುನ್ನುಗ್ಗುತಿದೆ ಧಾರ್ಮಿಕ ಕಾರ್ಯಗಳಿಗಾಗಿ, ಸಂಸಾರದ ಮುತ್ತಿದ್ದರೂ ಕುಂಬಾರ ಹುಳದಂತಿಹುದು ಈ ಎರಡೂ ಜೋಡಿ ಸಂಸಾರಿಗಳ ನಾಲ್ಕೂ ವ್ಯಕ್ತಿಗಳ ಮನ ಇದಕ್ಕನ್ನಬೇಕು ಸರಿ ಜೋಡಿಗಳೆಂದು ಎತ್ತು ಎರಿಗೆ ಎಳೆದರೆ ಕೋಣ ಕೆರೆಗೆಳೆದಂತಾದರೆ ಉಳಿಗತನ ನಡೆಯುವದೆಂತು ಎತ್ತಿಗೆ ಎತ್ತು ಜೋಡಿ ಕೋಣಗೆ ಕೋಣ ಜೋಡಿ ಇಜ್ಜತಿಯಾದರೆ ವಿಜಯವೆಂತು.

ಶಿದ್ದಣ್ಣನ ಹಿರಿಯ ಮಗ ರೇವಣೆಪ್ಪ ಈರ್ವಹಿರಿಯರ ವಚನ ಪಾಲಕನಾಗಿ ಪಾವನವಾದ ಮೇಟಿಯ ಉದ್ಯೋಗದಲ್ಲಿ ನಿರತನಾಗಿದ್ದ ಶಿವಣ್ಣ ಅವನ ತಾರುಣ್ಯವನ್ನು ಕಂಡು ಮಗನ ಕಲ್ಯಾಣದ ಬಗ್ಗೆ ಶಿದ್ದಣ್ಣನನ್ನು ವಿಚಾರಿಸಲಾಗಿ ನಿನ್ನ ವಿಚಾರವೇ ನನ್ನ ವಿಚಾರ ನಿನಗೆ ಸರಿ ಕಂಡಲ್ಲಿ ನನಗೂ ಸರಿ ಎಂದು ಉತ್ತರ ವಿತ್ತು ಶಿವಣ್ಣ ಆ ಉತ್ತರವನ್ನು ಹೊತ್ತು ಉತ್ತಮ ಕನ್ನೆಯನ್ನು ಆಯ್ದು ಹತ್ತೊಂಭತ್ತನೂರಾ ಐವತ್ತೆಂಟು ಎಪ್ರೀಲ ತಿಂಗಳು ಓಂಭತ್ತರಂದು ಲಗ್ನ ಸಮಾರಂಭ ಮಿತಿ ಗೊತ್ತಾಯಿತು.

ಲಗ್ನದ ಪೂರ್ವ ತಯಾರಿಗಾಗಿ ಗ್ರಾಮದ ತರುಣರ ಬಳಗ ತಮ್ಮನೆಯ ಬದುಕ ಬಾಳ್ವೆಗಳನ್ನು ಬದಿಗೊತ್ತಿ ಮೂರು ತಿಂಗಳವರೆಗೆ ನಡಕಟ್ಟಿ ನಿಂತಿದ್ದರು ಶಿವಣ್ಣನವರಿಗಂತೂ ಕುಂತರೂ ನಿಂತರೂ ಮಲಗಿ ನಿದ್ದೆ ಹೋದರೂ ಬುದ್ಧಿಗೆ ವಿಶ್ರಾಂತಿ ಇಲ್ಲದೆ ವಿಚಾರದಲ್ಲಿ ತಲ್ಲೀನರಾಗಿ ತಯಾರಿಯ ತಳದಿಂದ ತುತ್ತ ತುದಿಯವರೆಗೂ ಹಣೆರ ಇಣಕಿ ನೋಡುತ್ತಿತ್ತು ಮನದ ಮುಂದಾಲೋಚನೆ

ದೊಡ್ಡ ಸಮಾರಂಭ ಜನ ಸಂದಾಯ ಮೀತಿಮೀರಿ ನಿಂತರೆ ಆಗ ಮಿಡಕ ಬೇಕಾದೀತೆಂದು ಬಂದವರ ಹೋಪವರನ್ನು ವ್ಯವಸ್ಥೆಯ ತಯಾರಿಗಾಗಿ ವಿಚಾರಿಸುತ್ತಿತ್ತು ಅವರ ಆದರದ ಆತಿಥ್ಯದೊಂದಿಗೆ.

ಒಂದು ತಿಂಗಳು ಮಿತಿ ಮುಂದಿರುವಾಗಲೆ ಮನೆಯ ಮುಂದಿನ ವಿಸ್ತಾರವಾದ ಬಯಲನ್ನು ಸ್ವಚ್ಛಗೊಳಿಸಿ ಒಂದು ಎಕರೆಯಷ್ಟು ಸ್ಥಳವನ್ನು ತಯಾರಿ ಮಾಡಿಟ್ಟು ಮಂಟಪದ ಸಾಮಗ್ರಿಗಳನ್ನು ಮುಂದಿಯುನ್ನು ಕೇಳಿ ಕೂಡಿಡುವದು ಕೊನೆಗೆ ಮುಟ್ಟಿಸುವದು ಕಠಿಣವಾದ ಕಾರ್ಯವೆಂದು ಅರಿತು ಎರಡು ಟ್ರಕ್ ಜಂತಿಯನ್ನು ವಿಕ್ರಯಿಸಿ ಹಗ್ಗ ಕಾತಿ ಬಿಸುರಿನ ಚಾಪಿ ಮೊದಲುಮಾಡಿ ಹುಬ್ಬಳ್ಳಿಯ ಜಾಣ ಮಂಟಪ ತಯಾರಿಕೆಗೆ ಕಂಟ್ರಾಕ್ಟಕೊಟ್ಟರು.

ಇಷ್ಟು ದೊಡ್ಡ ಪ್ರಮಾಣದ ಮಂಟಪಕ್ಕೆ ದೀಪದ ವ್ಯವಸ್ಥೆ ಸರಿಯಾದ ರೀತಿಯಿಂದಾಗಲೆಂದು ಡೈಯಿಮನ್ ಮಿಶನ್ ಒಂದನ್ನು ತರಿಸಿ ಸಾವಿರಾರು ವಿದ್ಯುದ್ದೀಪಗಳಿಂದ ಮಂಟಪವನ್ನು ಸಿಂಗರಿಸಲಾಗಿತ್ತು. ಈ ದೃಶ್ಯ ನೋಟಕ್ಕೆ ಮನೋಹರವಾಗಿ ಪ್ರೇಕ್ಷಕರನ್ನು ಮುಗ್ಧಗೊಳಿಸುವಂತಿತ್ತು. ಈ ರೀತಿ ವ್ಯವಸ್ಥೆಗೆ ಅನುಕೂಲವಾದ ಸ್ಥಳ ಒಂದು ಕಾದಿತ್ತು. ಮನೆಯ ಎದುರಿಗೆ ವಿಸ್ತಾರವಾದ ಬಯಲು ಮನೆಯು ಕೂಡಾ ಊರ ಹೊರಗಿದ್ದ ಒಂದು ಆಯ ಕಟ್ಟಿನ ಸ್ಥಳದಲ್ಲಿಯೇ ಅಂತೂ ಎಲ್ಲ ಅನುಕೂಲತೆಗಳು ತಾನಾಗಿ ಒದಗಿ ಬಂದಿದ್ದವು.

ಸಂಯುಕ್ತ ಕರ್ನಾಟಕ ಪೇಪರಿನಲ್ಲಿ ಜಾಹಿರಾತ ಮೂಲಕ ವೀರಶೈವ ಸಮಾಜದ ವಧುವರರ ಮಾಂಗಲ್ಯಧಾರಣ ಮಾಡಿಕೊಡುವದಾಗಿ ಮತ್ತು ಜಂಗಮ ವಟುಗಳ ದೀಕ್ಷಾ ಸಂಸ್ಕಾರವನ್ನು ಮಾಡಿಕೊಡುವದಾಗಿ ಇಟ್ಟುಕೊಂಡಿದೆ ಎಂಬ ಸುದ್ದಿ ನಾಡಿನ ಮೂಲಿಮೂಲಿಗೂ ಹರಡಿ ಕೂಡಿದವು. ಹತ್ತು ಮಾಂಗಲ್ಯಧಾರಣದ ವಧುವರರ ಸಮೂಹ ಅರವತ್ತೊಂಬತ್ತು ಜನ ಜಂಗಮ ವಟುಗಳ ಬಳಗ ಧೀಕ್ಷಾ ಸಂಸ್ಕಾರಕ್ಕಾಗಿ ಸೇರಿದವು ಆಗ ಶಿವಣ್ಣನವರೆಂದರು. ನಮ್ಮ ಸಮಾಜದ ಅರವತ್ತೊಂಬತ್ತು ಮಂದಿ ಶಿವಶರಣರಿಗನು ಗುಣವಾಗಿ ಕೂಡಿದ ಜಂಗಮ ವಟುಗಳು ಆ ಶರಣರಿಗೆ ಸಮಾನರಾದವರೆಂದು ಉದ್ಗಾರ ತಗೆದರು.

ಪ್ರಶಿದ್ಧ ವಾದನಕಾರರ ಭಜಂತ್ರಿ ಮೇಳ ವೈಸೂರಿನ ಡೋಲು ವಿವಿಧ ವಾದ್ಯದೊಂದಿಗೆ ಬೀಗರು ಎದುಗೊಳ್ಳುವ ಕಾರ್ಯಕ್ರಮ ಒಳ್ಳೆಯ ವಿಜೃಂಭಣೆಯಿಂದ ಜರುಗಿತು. ಈ ಕಾರ್ಯಕ್ರಮದಲ್ಲಿಯ ಜನಸಂದಣಿ ಕಿಕ್ಕಿರಿಸದ್ದು ಕಂಡು ಬೀಗರ ಬಳಗ ದಂಗುಬಡಿದು ತಮ್ಮ ಬಳಗವನ್ನು ಹೊಂದಿಟ್ಟು ಕೊಂಡು ಬೀಡಿಕೆಯ ಮನೆಯನ್ನು ಹೊಂದುಬೇಕಾದರೆ ಅಂದಿನ ಬಬ್ಬಾಟ ಹೋಳಿ ಹುಣ್ಣಿವೆ ಹಬ್ಬದ ದೃಶ್ಯವನ್ನು ತರುವಂತಿತ್ತು.

ಮರುದಿನ ಮುಂಜಾನೆ ಗುಗ್ಗಳ ಕಾರ್ಯಕ್ರಮ ನಾಡಿನ ಪ್ರಶಿದ್ಧ ವಚನ ಕಾರರ ಇಪ್ಪತ್ತು ಜನ ಪುರುವಂತರ ಮೇಳದೊಂದಿಗೆ ಮದುವೆಯ ಮನೆಯಿಂದ ಗುಗ್ಗಳ ಹೊರಹೋಯಿತು. ಪುರವಂತರ ವೀರಗೇಕಿಯ ಆರ್ಭಟ ಆರು ಚಮಾಳಗಳ ಜಣ ಜಣಾಟ ಪುರುವಂತರ ಒಡಪುಗಳ ವಾಕ್ಯದ ತಾಕಲಾಟ ಜನಗಳ ತಿಕ್ಕಾಟ ಮೇಲಿನಿಂದ ಬಿಸಿಲಿನ ಕಾಟ ಇವೆಲ್ಲವುಗಳಿಂದ ಪ್ರತಿ ಯೊಬ್ಬನ ಹಣೆಯಮೇಲೆ ಬೆವರಿನ ಹನಿಗಳ ಹರಿದಾಟ ಅಂತೂ ಒಂದುವರಿ ಘಂಟೆಗೆ ಗುಗ್ಗಳ ಕಾರ್ಯ ಮುಕ್ತಾಯಗೊಂಡಿತು.

ಈ ಸಮಾರಂಭಕ್ಕೆ ಇಪ್ಪತ್ತು ಸಾವಿರದಷ್ಟು ಜನ ಸಂದಾಯ ವಿತ್ತೆಂದು ಹೇಳಬಹುದು. ಇಷ್ಟು ಜನ ಸಂದಾಯಕ್ಕೆ ಊಟದ ವ್ಯವಸ್ಥೆಗೆ ಸರಿಯಾದ ಕ್ರಮ ಕೈಕೊಳ್ಳಲಾಗಿತ್ತು. ಒಂದು ಪ್ರತ್ಯೇಕವಾದ ಶಡ್ಡನ್ನು ನಿರ್ಮಿಸಿ ಸಾವಿರಾರು ಜನ ಒಮ್ಮೆಲೇ ಊಟಕ್ಕೆ ಕೂಡ್ರುವಂತೆ ವ್ಯವಸ್ಥೆ ಮಾಡಲಾಗಿತ್ತು. ಅಡಿಗೆಯ ಮೇಳದ ಹದಿನಾರು ಜನರ ಗುಂಪು ವೇಳೆಗೆ ಸರಿಯಾಗಿ ಪಾಕ ತಯಾರಿಸಿ ಬಡಿಸುವ ಮೇಳದವರಿಗೆ ಕೊಡಲಾಗುತ್ತಿತ್ತು. ಗದ್ದಲವಿಲ್ಲದೆ ಶಾಂತರೀತಿಯಿಂದ ಆರೋಗಣೆಯ ಕಾರ್ಯ ಸಾಗಿತ್ತು

ಬೇಸಿಗೆಯ ದಿನ ಸಿಹಿಊಟ ಜನತೆಯು ಬಾಯಾರಿ ಬಳಲಬಾರದೆಂದು ಒಂದು ಸೋಡಾ ಫ್ಯಾಕ್ಟರಿಯನ್ನು ಸಾರ್ವಜನಿಕವಾಗಿ ನಿರ್ಮಿಸಲಾಗಿತ್ತು. ಬೀಗರು, ಪ್ರೇಕ್ಷಕರು, ಹುಡುಗರು, ಮುದಕರಿಗೂ ಮುಕ್ತದ್ವಾರವಿತ್ತು. ಫ್ಯಾಕ್ಟರಿಯ ಮುಖಂಡ ಬಾಟ್ಲೆಯಲ್ಲಿ ಆಕ್ಸಿಜನ್ ವಾಯು ತುಂಬಿ ತುಂಬಿ ಸಾಕು ಬೇಕಾಗಿ ಸೋಡಾ ಕೇಳಿದವರಿಗೆ ಫ್ಯಾಕ್ಟರಿಯನ್ನು ತಿರುವಲು ಹಚ್ಚುತ್ತಿದ್ದ ಇಳಿಹೊತ್ತಿನವರೆಗೂ ಈ ಕಾರ್ಯ ನಡೆದು ಸಂಜೆ ಐದು ಘಂಟೆಗೆ ಮುಕ್ತಾಯ ಗೊಂಡಿತು. ಅಂದೇ ರಾತ್ರಿ ೧೦ಂಟು ಘಂಟೆಗೆ ಪೂಜ್ಯ ಗುರುಗಳ ಹಾಗೂ ಅವರ

ಶಿಷ್ಯವೃಂದದವರಿಂದ ಸಂಗೀತ ಕಾರ್ಯಕ್ರಮ ಒಂದು ಎಲ್ಲಮ್ಮನ ನಾಟಕ ಕೀರ್ತನೆಗಳು ಜರುಗಿ ಕಾರ್ಯಕ್ರಮ ಮುಕ್ತಾಯ ಗೊಂಡವು. ಆ ಮೇಲೆ ರಾತ್ರಿಯ ಗಣಾರಾಧನೆ ಬೆಳತನಕ ಧೀಕ್ಷಾ ವಟುಗಳಿಗೆ ಬಟ್ಟೆಯನ್ನು ಕೊಟ್ಟು ಕ್ಷ್ಯಾವಿ ಮಾಡಿಟ್ಟುಕೊಳ್ಳಲು ತಿಳಿಸಲಾಗಿತ್ತು-

ಬೆಳಗು ಹರಿಯುತ್ತಲೆ ಜಂಗಮ ವಟುಗಳ ಧಿಕ್ಷಾಕಾರ್ಯ ಶ್ರೀ. ಮ. ಘ. ಚ. ಶಾಂತವೀರ ಮಹಾಸ್ವಾಮಿಗಳು ಸಿಂದಗಿ ಪಟ್ಟಾಧ್ಯಕ್ಷರಿಂದ ಜರುಗಿತು. ಅಂದೇ ಮುಂಜಾನೆ ಹನ್ನೊಂದು ಘಂಟೆಗೆ ಸರಿಯಾಗೆ ಮಾಂಗಲ್ಯ ಧಾರಣ ಕಾರ್ಯ ನಂತರ ಮಹಾಗಣಾರಾಧನೆ ಸಾಯಂಕಾಲ ಐದುವರಿ ಘಂಟೆಗೆ ಎಲ್ಲ ಜಂಗಮ ವಟುಗಳ ಮೆರವಣಿಗೆಯು ಒಳ್ಳೇ ವಿಜೃಂಭಣೆಯಿಂದ ನಡೆಯಿತು. ರಾತ್ರಿ ಸಂಗೀತ ಕಾರ್ಯಕ್ರಮ ಕೀರ್ತನೆಗಳು

ರಾತ್ರಿ ಹನ್ನೆರಡು ಘಂಟೆಗೆ ವಧುವರರ ಮೆರವಣಿಗೆಯ ಕಾರ್ಯ ಆ ದೃಸ್ಯದ ವರ್ಣನೆಯನ್ನು ಮಾಡಲು ಎನ್ನ ಲೆಕ್ಕಣಿಕೆಗೆ ಶಕ್ತಿ ಸಾಲದು ಮದ್ದು ಮಸಿಗಳ ಹಾರಾಟ ವಾದ್ಯಗಳ ಅರ್ಭಾಟ ಚೂರಮರಿಗಳ ತೂರಾಟ. ಜನರ ಗುಜು ಗುಜು ತಾಕಲಾಟ ಅಂತೂ ಬೆಳತನಕ ಕಾರ್ಯಕ್ರಮ ಆ ಮೇಲೆ ಬೆಳಗಿನ ಉಪಹಾರ ಅದು ಒಂದು ಊಟದ ರೀತಿಯಲ್ಲಿ ಜರುಗಿ ಮುಕ್ತಾಯ ವಾಯಿತು. ಈ ಮಹಾಕಾರ್ಯ ಮಾಡಿ ಸುತ್ತಲಿನ ನಾಡಿನ ಜನಪರಿಚಿತನಾದ ಈದಕ್ಕಿಂತೂ ಮಹತ್ತರವಾದ ಧಾರ್ಮಿಕ ಕಾರ್ಯ ಒಂದು ಕಾಯ್ದು ಕುಳಿತಿತ್ತು. ಅದೇ ಶ್ರೀಮದ್ ಬಸವ ಪುರಾಣ ಪ್ರವಚನ, ಧರ್ಮದ ತಿರುಳನ್ನು ತಿಳಿಮಕೊಳ್ಳಬೇಕೆಂದು ಪೂಜ್ಯಗುರುಗಳನ್ನು ವಿಚಾರಿಸಲಾಗಿ ಗುರುಗಳು ಈ ರೀತಿ ಅಪ್ಪಣೆಕೊಟ್ಟರು. ಬಸವಪುರಾಣದಲ್ಲಿ ಅನೇಕ ಶರಣರ ಚರಿತ್ರೆಗಳು ಬರುತ್ತವೆ. ಅವರು ಮಾಡಿದ ಭಕ್ತಿಯ ಕಾರ್ಯದಿಂದ ಧರ್ಮ ತಿರುಳು ತಿಳಿಯುತ್ತದೆ. ಅದು ಮಹಾಪುರಾಣ ಹಚ್ಚಿಸಬೇಕಾದರೆ ಅದನ್ನೇ ಹಚ್ಚಿಸಿ ಶ್ರವಣ ಭಾಗಿಯಾಗಿ ಭಕ್ತಿಯ ಮರ್ಮವನ್ನು ಅರಿಯಿರೆಂದರು. ಆಗ ಶಿವಣ್ಣನವರು ಅದು ನಿಮ್ಮ ಅಮೃತವಾಣಿಯಿಂದ ಜರುಗಬೆಕೆಂದು ಹೇಳಲಾಗಿ ಶಿವಣ್ಣನ ಭಕ್ತಿಯ ಅಡಕೊತ್ತಿನಲ್ಲಿ ಶಿಕ್ಕ ತಾವು ನಿರುಪಾಯರಾಗಿ ಒಪ್ಪಿಗೆಯನ್ನು ಇತ್ತರು.

ಗುರುಗಳ ಒಪ್ಪಿಗೆ ಸಿಕ್ಕಮೇಲೆ ತಡಮಾಡದೆ ಶಿವಾನುಭವ ಮಂಟಪವನ್ನು ನಿರ್ಮಿಸಿ ೧೯೬೫ರ ಫೆಬ್ರುವರಿ ತಿಂಗಳು ೧೯ರಂದು ಪುರಾಣ ಪ್ರವಚನ ಪ್ರಾರಂಭವಾಯಿತು, ಅದು ಭೀಮಕವಿ ವಿರಚಿತ ಶ್ರೀಮದ್ ಬಸವ ಪುರಾಣ ಇದು ಮೂರುತಿಂಗಳವರೆಗೆ ಪದ್ಧತಿ ಪ್ರಕಾರ ಕ್ರಿಯಾಮೂರ್ತಿಗಳ ಪಾದ ಸಮ್ಮುಖದಲ್ಲಿ ಪ್ರತಿನಿತ್ಯ ಜರುಗಿ ಶ್ರವಣ ಭಾಗಿಗಳಾದವರಿಗೆ ದಾಸೋಹಂಭಾವಿಯಾದ ಬಸವಣ್ಣನ ದಾಸೋಹದಂತೆ ಇಲ್ಲಿಯೂ ಕೂಡಾ ದಾಸೋಹವನ್ನು ನಿರ್ಮಿಸಿ ಬಸವ ಪ್ರಸಾದವನ್ನು ದೊರಕುವಂತೆ ವ್ಯವಸ್ಥೆ ಮಾಡಲಾಗಿತ್ತು.

ನಾಡಿನ ಮೂಲೆ ಮೂಲೆಗಳಿಂದ ಜನ ಕಿತ್ತು ಬರುತ್ತಿತ್ತು. ಬಸವ ಪುರಾಣದ ಪ್ರವಚನಕ್ಕಾಗಿ ಪೂಜ್ಯಗುರುಗಳ ಅಮೃತವಾಣಿಯಿಂದ ಬಸವತತ್ವ ಹೊರ ಹೊಮ್ಮುತ್ತಿತ್ತು. ಆ ರಸವನ್ನು ಸವಿದು ಎಷ್ಟೋ ಜನ ಭಕ್ತಿವಂತರಾದರು ಪುರಾಣದ ಮಹಾಮಂಗಲದ ವೇಳೆಯಲ್ಲಿ ವೀರಶೈವ ಧರ್ಮದ ವಧುವರರ ಮಂಗಾಲ್ಯಧಾರಣ ಕಾರ್ಯ ಹಾಗೂ ಜಂಗಮ ವಟುಗಳ ಧೀಕ್ಷಾ ಸಂಸ್ಕಾರ ನಡೆಯುವವೆಂಬ ಸುದ್ದಿ ನಾಡಿನ ತುಂಬೆಲ್ಲ ಹರಡಿ ನಾಲ್ವತ್ತೈದು ಲಗ್ನಗಳು ಹಾಗೂ ನೂರಾ ಇಪ್ಪತ್ತೈದು ಜಂಗಮ ವಟುಗಳು ಸೇರಿ ಶಿವಾನುಭವ ಮಂಟಪದಲ್ಲಿ ಮಾಂಗಲ್ಯಧಾರಣಕಾರ್ಯ ಸಂಸ್ಕಾರದ ಕಾರ್ಯಜರುಗಲ್ಪಟ್ಟವು. ಏಕಾದಶ ಮಂಟಪ ಪೂಜಾ ಸಮಾರಂಭದೊಂದಿಗೆ ಪುರಾಣ ಮಹಾ ಮಂಗಲವಾಯಿತು. ಆಗ ಪೂಜ್ಯ ಗುರುಗಳು ಶಿವಣ್ಣನವರಿಗೆ ಪುತ್ರಸಂತಾನ ಆಶೀರ್ವಾದ ಮಾಡಿ ತಮ್ಮ ಆಶ್ರಮಕ್ಕೆ ದಯಮಾಡಿಸಿದರು.

ಶಿವಣ್ಣನವರಿಗೆ ಮನಸ್ಸಿನಲ್ಲಿ ಮತ್ತೊಂದು ವಿಚಾರಬಂದು ಮೂರು ವರ್ಷಗಳವರೆಗೆ ಬಸವ ಪುರಾಣ ಪ್ರವಚನ ಜರುಗಬೇಕು. ಎಂಬ ಸಂಕಲ್ಪದಂತೆ ಎರಡನೆ ಪುರಾಣದ ತಯಾರ ಕಾರ್ಯ ಪ್ರಾರಂಭವಾಗಿ ೧೯೬೬ ನೇ ಫೆಬ್ರುವರಿ ತಿಂಗಳ ೨೮ರಂದು ಮತ್ತೆ ಸಿಂಗೀರಾಜ ವಿರಚಿತ ಬಸವ ಪುರಾಣ ಪ್ರವಚನ ಮೊದಲಿನ ಪದ್ಧತಿ ಪ್ರಕಾರ ಪ್ರಾರಂಭವಾಗಿ ಮಹಾಮಂಗಲದ ವೇಳೆಯಲ್ಲಿ ಮೊದಲಿನ ಪದ್ಧತಿಯಂತೆ ಮ್ಯಾಂಗಲ್ಯಧಾರಣ ದೀಕ್ಷಾಸಂಸ್ಕಾರ ಕಾರ್ಯ ಜರಗುವವೆಂಬ ಸುದ್ದಿ ಹರಡಿ ಹದಿನೆಂಟು ವಧು-ವರ ಬಳಗ ಇಪ್ಪತ್ತೆರಡು ಜಂಗಮ ವಟುಗಳು ಸಂಸ್ಕಾರ ಹೊಂದಿ ಮಹಾಮಂಗಲ ಮುಕ್ತಾಯ

ಗೊಂಡು ಪೂಜ್ಯ ಗುರುಗಳು ಶಿವಣ್ಣನವರಿಗಿತ್ತ ಪುತ್ರ ಸಂತಾನದ ಆಶೀರ್ವಾದದ ಫಲವನ್ನು ಪ್ರತ್ಯಕ್ಷಕಂಡು ಆ ಮಗುವಿಗೆ ತಮ್ಮ ಗುರುಗಳ ನಾಮಕರಣವನ್ನೇ ಮಾಡಿರೆಂದು ಅಪ್ಪಣೆಮಾಡಿ ಮಗುವಿಗೆ ಪಂಚಾಕ್ಷರಿಯೆಂದು ಕರೆದು ತಮ್ಮ ಆಶ್ರಮಕ್ಕೆ ದಯಮಾಡಿಸಿದರು.

ಸಂಕಲ್ಪದಂತೆ ಮೂರನೆ ಬಸವಪುರಾಣ ಶ್ರವಣದ ಪ್ರಾರಂಭ ೧೯೬೭ ಫೆಬ್ರುವರಿ ತಿಂಗಳು ಹನ್ನೆರಡರಂದು ಪುಟ್ಟರಾಜ ಕವಿ ವಿರಚಿತ ಹಿಂದೀ ಬಸವ ಪುರಾಣ ಪ್ರವಚನ ಪದ್ಧತಿಯ ಪ್ರಕಾರ ಚಾಚೂ ತಪ್ಪದಂತೆ ಪ್ರಾರಂಭವಾಯಿತು. ಈ ಪುರಾಣದಲ್ಲಿ ತಮ್ಮ ಆಶೀರ್ವಾದದಿಂದ ಜನಿಸಿದ ಶಿವಣ್ಣನವರ ಮಗು ಪಂಚಾಕ್ಷರಿಯ ಬಾಲದಾಟ ಪಾಟಗಳು ಮಂಟಪದ ತುಂಬೆಲ್ಲ ನಡೆಯುತ್ತಿದ್ದುದನ್ನು ಕಂಡು ಪೂಜ್ಯಗುರುಗಳು ಮುಗಳು ನಗೆಯಿಂದ ತಮ್ಮಾನಂದವನ್ನು ವ್ಯಕ್ತಪಡಿಸುತ್ತಿದ್ದರು. ಪುರಾಣ ಮಹಾಮಂಗಲದ ಕಾರ್ಯದಲ್ಲಿ ಚಾಚೂ ತಪ್ಪದಂತೆ ಪೂರ್ವತಯಾರಿಯ ಕಾರ್ಯ ನಡೆದಿತ್ತೆಂಬಲ್ಲಿಗೆ ಈ ಬರಹಕ್ಕೆ ಮುಕ್ತಾಯ ಮಾಡುವೆ.

ಬಸಪ್ಪ ಪುಟ್ಟಪ್ಪ ಮಾಡಳ್ಳಿ ಶಾಳಾ ಮಾಸ್ತರ.





ಪುರಾಣ ಶ್ರವಣ ಧುರೀಣರಾದ

**ಶ್ರೀ ಶಿವಣ್ಣನವರು ಗಾಣಿಗೇರ, ಕೋಡಬಾಳ**



"ಕನ್ನಾಡಕೋಗಿಲೆ" ಲೇಖಕರಾದ

**ಶ್ರೀ ಗುರುಸ್ವಾಮಿ ಕಲಿಕೇರಿ**

ಸಂಗೀತವಿಶಾರದ

## — ಲೇಖಕನ ನಲ್ಮನುಡಿ. —

ಸಾಹಿತ್ಯ ಸಾರ್ವಭೌಮರೂ, ಸಂಗೀತ ಸಮ್ರಾಟರೂ, ಉಭಯಗಾಯನ ವಿಶಾರದರೂ, ಉಭಯವಾದನ ಕಂಠೀರವರೂ, ತ್ರಿಭಾಷಾಕವಿವರ್ಯರೂ, ನಾಟ್ಯಕವಿಚಕ್ರವರ್ತಿಗಳವರೂ, ಕನ್ನಡ ನಾಟ್ಯ ಸಂಘದ ಅಧ್ಯಕ್ಷರೂ, ಲಲಿತಕಲಾ ಪಾರಂಗತರೂ, ಮೈಸೂರ ಸಂಗೀತ ನಾಟಕ ಅಕ್ಯಾಡೆಮಿಯವರಿಂದ ಸನ್ಮಾನಿತರೂ, ಮಾಜಿ ರಾಷ್ಟ್ರಪತಿ ಬಾಬುರಾಜೇಂದ್ರ ಪ್ರಸಾದರಿಂದ ಸತ್ಕಾರಿತರೂ, ಸಮಾಜ ಸೇವಾ ಧುರೀಣರೂ, ಅಂಧ ಅನಾಥರ ದೇವರೂ, ಗುರು-ಲಿಂಗ ಜಂಗಮಪ್ರಿಯರೂ, ಲಿಂಗಪೂಜಾ ದುರಂಧರರೂ ಆದ ಗುರುವರ್ಯ ಪಂ-ಡಿತ ಪುಟ್ಟರಾಜ ಕವಿಗವಾಯಿಗಳವರ ಜೀವನವನ್ನು ಬರೆದು ನಾಡಿಗೆ; ನಾಡಿನ ಜನಾಂಗಕ್ಕೆ ತಿಳಿಯ ಪಡಿಸಬೇಕೆಂಬುದು ಬಹುದಿನಗಳಾಸೆ........ ಈ ಆಶೆಯ ಶೃತಿ ನನ್ನ ಮನದಲ್ಲಿ ಮುಲ್ಲಯುದ್ಧದ ಚಿತ್ರ ಚಿತ್ರಿಸುತಿತ್ತು. ಆ ಸಮಯದಲ್ಲಿ. ಅಂದರೆ:- ೧೯೬೫ ರಂದು ಕೋಡಬಾಳ ಪುರಾಣ ಓದಲಿಕ್ಕೆ ಬಂದಾಗ,- ಶಾಲಾ ಶಿಕ್ಷಕಿಯರೂ, ಸಾಹಿತ್ಯ ಗ್ರಾಹಕರೂ ಆದ ಶ್ರೀ **ಅಕ್ಕಮ್ಮನವರು ಕೊಡಗೌಡರ್ ನೆಗಳೂರ** ಅವರು ಪೂಜ್ಯ ಗುರುಗಳ ಪವಿತ್ರ ಜೀವನವನ್ನು ಬರೆಯಬೇಕ್ರೆಪಾ ! ಎಂದು ನನಗೆ ಹೇಳಿದಾಗ, ಮನದಲ್ಲಿಯ ನನ್ನಾಶೆಯ ಶೃತಿಗೆ ಮತ್ತಷ್ಟು ಸ್ಫೂರ್ತಿ ಬಂದಿತೇ ವಿನಃ ಕೃತಿರೂಪ ರಂಗಕ್ಕೆ ಬರಲಿಲ್ಲ. ಹಾಗೇ ಕೆಲವು ದಿನಗಳುರುಳಿದವು.

ಒಮ್ಮೆ ನೆಗಳೂರಲ್ಲಿ ನನ್ನ ಸಂಗೀತ ಪ್ರೋಗ್ರಾಮಿತ್ತು. ಪ್ರೋಗ್ರಾಮಿಗಾಗಿ ಬಂದಾಗ ನನ್ನ ಭೆಟ್ಟಿಗಾಗಿ ಕೋಡಬಾಳದ ಪೋಲೀಸ ಪಾಟೀಲರಾದ ಶ್ರೀ ಮುರಿಗಿಗೌಡರು ಹಾಗೂ ತೆಲಗಿ ಚನ್ನಪ್ಪನವರು ಕೂಡಿ ಬಂದಿದ್ದರು-ನೆಗಳೂರಿಗೆ. ಆಗ ಆ ಮಾತು ಈ ಮಾತು ಆಡುತ್ತಾ ಆನಂದದಿಂದ ಕುಳಿತು ಹಿಂದಿನ ಸ್ನೇಹವನ್ನು ಜ್ಞಾಪಿಸಿಕೊಳ್ಳುತ್ತಿರುವಾಗ- ಶ್ರೀಗುರು ಪುಟ್ಟರಾಜರ ವಿಷಯ ಬಂದಿತು; ಗುಣಗಾನ ಸುರು ಆಯಿತು. ಕಂಣಿಲ್ಲದ ಪುಟ್ಟರಾಜರು ನಾಡಿನ ಕಂಣಾಗಿದ್ದಾರೆ. ಅವರ ಜೀವನ ಶ್ರೀ ಜೀವನ ಸಂಜೀವನ. ಗುರುಗಳ ಈ ಪವಿತ್ರ ಜೀವನ ನಾಡಿಗೆ ಗುರ್ತಾಗಿದೆ. ಇನ್ನೂ ಹೆಚ್ಚೆಚ್ಚಾಗಿ ಗುರ್ತಾ

ಗಬೇಕು....... ಕಾರಣ....... ಸ್ವಾಮಿಗಳೇ! ನೀವು ಸಂಗೀತಗಾರರಿದ್ದಂತೆ ಸಾಹಿತ್ಯಗಾರರು ಇದ್ದೀರಿ. ಆದ್ದರಿಂದ ಶ್ರೀಗುರು ಪುಟ್ಟರಾಜರ ಬಗ್ಗೆ ಒಂದು ಗ್ರಂಥ ಬರೆದರೆ ನಮಗೂ, ನಮ್ಮ ನಾಡಿನ ಜನತೆಗೂ ಮಹದುಪಕಾರವಾಗುತ್ತದೆ, ಎಂದು ಮುರಿಗಿಗೌಡರು ಹಾಗೂ ಚನ್ನಬಸಪ್ಪಪವರು ಅಂದರು. ಅವರುಗಳು ಈಮಾತು ಅಂಪಾಗ ಮತ್ತೆ ನನ್ನ ಮನದ ಶೃತಿ ಎಚ್ಚೆತ್ತು ನಿಂತಿತು...............

ಶ್ರೀಗುರು ಪುಟ್ಟರಾಜರ ಬಗ್ಗೆ ನಾನು ಬರೆಯುವದೆಂದರೆ ಬೆಕ್ಕು ಮುಗಿಲಿಗೆ ಹಾರಲು ಸಾಹಸ ಮಾಡಿದಂತಾಗುತ್ತದೆ. ಪವಾಡಪುರುಷರಾದ ಪುಟ್ಟರಾಜ ತಂದೆಯ ಜೀವನ ಚಿತ್ರಿಸುವ ಸಾಮರ್ಥ್ಯ ನನ್ನ ಲೇಖನಿಗಿದೆಯೆ? ಎಂದು ನಾನಂದಾಗ....... ಇದೆ....... ನಿಮ್ಮ ಲೇಖನಿಯಿಂದ ಶ್ರೀಗುರುವಿನ ಜೀವನ ಸಾಹಿತ್ಯವಾಗಿ ಹರಿದುಬಂದರೆ ಸೊಗಸಾಗಿರುತ್ತದೆ, ಎಂದು ಮುರಿಗಿ-ಗೌಡರು ಅಂದರು. ಅದೇ ಸಮಯಕ್ಕೆ ಅಲ್ಲಿಗೆ ದಯಮಾಡಿಸಿದ ಶ್ರೀ ಮ. ಘ. ಚ. ನೆಗಳೂರ ಹಿರೇಮಠದ ಪಟ್ಟದ ಸ್ವಾಮಿಗಳೂ ಕೂಡಾ ಶ್ರೀ ಮುರಿಗಿಗೌಡರ ಹಾಗೂ ಶ್ರೀ ತೆಲಗಿ ಚನ್ನಪ್ಪನವರ ಹಾಡಿಗೆ ತಾಳ ಹಾಕಿದರು. ಆಗ ನೋಡೋಣ ಶ್ರೀಗುರುವಿನ ಪ್ರೇರಣೆಯಿದ್ದರೆ ನಿಮ್ಮಾಶೆ ಕೃತಿಯಲ್ಲಿ ಬರುತ್ತದೆ ನನ್ನ ಲೇಖನಿಯಿಂದ ಎಂದು ನಾನಂದೆ...........

೧೯೬೭ ರಲ್ಲಿ ಪುಟ್ಟರಾಜರಿಂದ ಹಿಂದೀ ಬಸವ ಪುರಾಣ ಪ್ರವಚನಕ್ಕಣಿಯಾಯಿತು. ಕೊಡಬಾಳದ ಶ್ರೀ ಸಾಹುಕಾರ ಶಿವಂಣನವರಿಂದ ಪುರಾಣ ಓದುವದಕ್ಕಾಗಿ ಶ್ರೀ ಶಿವಂಣನವರ ಆಶೆಯ ಮೇರೆಗೆ ನಾನು ಬಂದಿದ್ದೆ. ಆವಾಗ ಮತ್ತೆ ಶ್ರೀ ಗುರು ಪುಟ್ಟರಾಜರ ವಿಷಯ ಮಾತನಾಡುತ್ತ ಕುಳಿತಾಗ.......

ಸ್ವಾಮಿಗಳೇ! ನೀವು ಅಜ್ಜಾ ಅವರ (ಪುಟ್ಟರಾಜರ) ಚರಿತ್ರೆ ಬರೆಯಿರಿ. ಅದರ ಪ್ರಕಾಶದ ಭಾರ ನಾನು ಹೊರುತ್ತೇನೆ. ಎಂದು ಶ್ರೀಮಾನ್ ಗಾಣಿಗೇರ ಶಿವಂಣನವರು.ಅಂದರಶ್ರೀ ಶಿವಂಣನವರ ಈ ಅಭಿಪ್ರಾಯಕ್ಕೆ ಶ್ರೀ ಮಾಡಳ್ಳಿ ಬಸಪ್ಪ ಮಾಸ್ತರರು ಕೂಡಾ ಅವಸರದ ಅಭಿಪ್ರಾಯನಿ ೞಡಿದರು– ಇಷ್ಟು ಜನರ ಪ್ರೊತ್ಸಾಹ ಸಿಕ್ಕಾಗ ನನ್ನ ಮನದಲ್ಲಿದ್ದ ಶೃತ ಸುಮ್ಮನೆ ಕೂತಿತೇ ಕೃತಿ ರಚನೆಗೆ ಶಿದ್ಧವಾಯಿತು........... ಶ್ರೀಗುರು ಪುಟ್ಟರಾಜರ ದಿವ್ಯ ಜೀವನವನ್ನು ಶ್ರೀಗುರು ಪಂಚಾಕ್ಷರಿಯೇ ಬರೆಸಿಕೊಳ್ಳಬೇಕು! - ಎಂದು ಮನದಲ್ಲಿ

ಸಂಕಲ್ಪಿಸಿದೆ..... ಆಗಲಿ.... ತಮ್ಮೆಲ್ಲರಾಶೆಯೇ ನನ್ನಾಶೆ ಶ್ರೀ ಗುರುವಿನ ಚರಿತ್ರೆ ಬರೆಯುತ್ತೇನೆ. ಎಂದು ನಾನಂದಾಗ ಅಲ್ಲಿದ್ದ ಎಲ್ಲ ಜನರು ಆನಂದ ತುಂದಿಲರಾದರು.

ಚರಿತ್ರೆ ಬರೆಯುವದು ನಿಶ್ಚಯವಾತೇನೋ ಸರಿ. ಚರಿತ್ರೆ ಬರೆಯುವದು ಹೇಗೆ ? ಗುರುಗಳಾದ ಪುಟ್ಟರಾಜರು ತಮ್ಮ ಗುಣಗಾನಕ್ಕೆ ಸೊಪ್ಪು ಹಾಕುವರಲ್ಲ; ಗುಣಗಾನ ಮಾಡಿದವರಿಗೆ ಸೇರುವವರೂ ಅಲ್ಲ ಅಂದಾಗ ನಾನು ಅವರ ಚರಿತ್ರೆ ಬರೆದರೆ ಖಂಡಿತ ನನ್ನ ಮೇಲೆ ಸಿಟ್ಟಾಗುತ್ತಾರೆ. ಗುರುಗಳು ಸಿಟ್ಟಾದರೆ ನನಗೆ ಕಲ್ಯಾಣ ವಾಗಬಹುದೆ? ಗುರುವಿಗೆ ತಿಳಿಸದೆ ಈ ಕಾರ್ಯಕ್ಕೆ ತೊಡಗಿದರೆ ಗುರುದ್ರೋಹ ಾಡಿದಂತಾಗುವದಿಲ್ಲವೆ? ಆತ್ಮಪ್ರಸ್ತುತಿಗೆ ಸೇರುತ್ತಿಲ್ಲ ಗುರು ಪುಟ್ಟರಾಜರು ಅನ್ನುವದು ನನಗೆ ಮನಗಂಡ ವಿಷಯ. ಹಿಂದೆ ನಾನೊಮ್ಮೆ ಅವರ ಬಗ್ಗೆ ಒಂದು ಪದ್ಯ ಬರೆದು ತೋರಿಸಿದ್ದೆ. ಆವಾಗ ಸಿಟ್ಟಗೆದ್ದು ಅನಿಷ್ಟಾ! ನನ್ನ ಬಗ್ಗೆ * ಪದ್ಯ ಬರೆದಿರುವಿಯಲ್ಲ ನಾನೇನು ಮಹಾತ್ಮನೆ? ಶ್ರೀಗುರು ಕುಮಾರೇಶನ ಬಗ್ಗೆ,ಶ್ರೀ ಪಂಚಾಕ್ಷರೇಶದೇವನ ಬಗ್ಗೆ ಪದ್ಯ ಬರಿ, ಈಗ ಬರೆದಿರುವ ಪದ್ಯ ಹರಿದು ಹಾಕು ಎಂದು ಬೈದರು..... ಆವಾಗ ನಾನು ಬರೆದ ಪದ್ಯದ ಹಾಳೆ ಕಸದ ಬುಟ್ಟಿ ಸೇರಿತು. ಅಂದಾಗ ಈಗ ಅವರ ಚರಿತ್ರೆ ಬರೆದರೆ ಆನಂದ ಪಡಬಹುದೆ ?.... ಗುರುಗಳು ಸಿಟ್ಟಾಗತಾರೆ ? ಹೇಗೆ ಬರೆಯಲಿ ?.... ಅವರ ಆಶೆಯ ವಿರುದ್ಧ ಈಕಾರ್ಯ ಮಾಡಿದರೆ ಒಂದು ರೀತಿಯಿಂದ ಗುರುದ್ರೋಹ ಮಾಡಿದಂತಾಗುತ್ತದೆ ?.... ಏನು ಮಾಡಲಿ ? ಎಂದು ಗೊಂದಲದಲ್ಲಿ ಬಿದ್ದಾಗ............

ಗುರುವಿಗೆ ತಿಳಿಸದೆ ಅವರ ಚರಿತ್ರೆ ಬರೆಯುವದರಿಂದ ಗುರುದ್ರೋಹದ ಶಾಪ ತಟ್ಟಿದರೂ ಚಿಂತಿಲ್ಲ; ಗುರುಸ್ತೋತ್ರದ ಪುಣ್ಯ ಲಭಿಸುತ್ತದೆ, ಅಷ್ಟೇ ಅಲ್ಲ ಗುರುದ್ರೋಹದ ಶಾಪದ ಕಟ್ಟನ್ನು ಕತ್ತರಿಸುತ್ತದೆ. ಆದ ಕಾರಣ ನೀನು ಅಂಜದೆ ಉತ್ಸಾಹಿಯಾಗಿ ಶ್ರೀ ಗುರುವಿನ ಚರಿತ್ರೆ ಬರಿ ! ಎಂದು ನನ್ನ ಮನರಾಜ ಅಪ್ಪಣೆ ಮಾಡಿದ. ಆವಾಗ ನನಗೆ ಧೈರ್ಯಬಂದಿತು. ಗುರು ಪುಟ್ಟರಾಜರಿಗೆ ಗುತ್ತಾಗದಂತೆ ಚರಿತ್ರೆ ಬರೆಯಲು ತೊಡಗಿದೆ. ಇದಕ್ಕೆ ಶ್ರೀ

---

* ಗುರುಗಳಿಗೆ ಅತೀ ಸಿಟ್ಟನಲ್ಲಿ ಬರುವ ದೊಡ್ಡ ಬೈಗಳ ಅಂದರೆ ಅನಿಷ್ಟ. ಕತ್ತೆ ನನಮಗ, ಅನಿಷ್ಟನನ ಮಗ.

ಶಿವಶರಣರಾದ **ಗಾಣಿಗೇರ ಶಿವಂಣನವರು,** ಶ್ರೀ ಬಸಪ್ಪ ಮಾಸ್ತರ ಮಾಡಳ್ಳಿ, ಶ್ರೀ ಶಿವಬಸಯ್ಯನವರು ಹಿರೇಮಠ, ಶ್ರೀ ಸಿದ್ದಂಣನವರು ಗಾಣಿಗೇರ, ಮುಂತಾದ ಕೋಡಬಾಳದ ನಾಗರಿಕರು ಪ್ರೋತ್ಸಾಹಿಸಿ ದರು. ನನ್ನೀ ಗ್ರಂಥ ಲೇಖನಕ್ಕೆ ಶ್ರೀ ವೇ. ಶಿವಯೋಗಿ ಶಾಸ್ತ್ರಿಗಳು ದೇವಗಿರಿ, ಶ್ರೀ ಅಕ್ಕಮ್ಮನವರು ನೆಗಳೂರ, ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಹಿರೇ-ಮಲ್ಲೂರ್, ಶ್ರೀ ಸೂಹೇದರ ಚನ್ನವೀರ ಬನ್ನೂರ್. ಶ್ರೀ ಬಸವಲಿಂಗಯ್ಯ ಸ್ವಾಮಿ ಚಿತ್ತರಗಿ, ಶ್ರೀ ಶಿವಮೂರ್ತಿಸ್ವಾಮಿ ದೇವಗಿರಿ, ಶ್ರೀ ವೀರಭದ್ರ ಶಾಸ್ತ್ರಿಗಳು ಕುರುಬಗೊಂಡ, ಶ್ರೀ ಈಶ್ವರ ಮೋರಗೇರಿ, ಶ್ರೀ ಫಕೀರಯ್ಯನವರು ಹಿರೇಮಠ, ಶ್ರೀ ಪಂಚಯ್ಯನವರು ಹಿರೇಮಠ ನೆಗಳೂರ, S. S. ಮಿಂಚಿನಾಳ, ಇತ್ಯಾದಿ ಶಿಷ್ಯ ಪ್ರಶಿಷ್ಯರು ಸಹಾಯಕರಾಗಿದ್ದಾರೆ, ಸಹಕರಿಸಿದ್ದಾರೆ.

ಪುಣ್ಯ ಪುರಷರೂ; ಪುರಾಣಪುರುಷರು ಆದ ಶ್ರೀ ಪಂ. ಪುಟ್ಟರಾಜರನ್ನು "ಕನ್ನಾಡ ಕೋಗಿಲೆ" ಯ ಪಾತ್ರದಲ್ಲಿ ಕಂಡು ಈ ಗ್ರಂಥ ಬರೆದು ಓದುಗರ ಮುಂದಿಟ್ಟದ್ದೇನೆ. ಹಿರಿದಾದ ಸಾಹಿತ್ಯ ಸೇವೆಯಲ್ಲಿ ಈ ನನ್ನ ಅಳಲೀ ಸೇವೆ ( ಕನ್ನಾಡಕೋಗಿಲೆ ) ಯು ಶಾರದಾ ತಾಯಿಯ ಅಡಿಗೆ ಮುಡುಪಾಗಿದೆ ಈ ನನ್ನ ( ಗ್ರಂಥ ) ಓದುಗರ ಮನ ಸೂರೆಗೊಂಡರೆ ನಾನು ಕೃತಾರ್ಥ, ನನ್ನ ಶ್ರಮ ಸತ್‌ಪಾತ್ರ.

ಅತೀತವಾದ; ಅನಂತವಾದ ಶ್ರೀಗುರು ಪುಟ್ಟರಾಜರ ಜೀವನ ಸಂಪೂರ್ಣ ಮುಗಿದಿಲ್ಲ. ಈಗ ಬರೆದಿರುವ ೫೩. ವರುಷದ ಶ್ರೀ ಗುರುವಿನ ಜೀವನದ ಘನತೆಯನ್ನು ಈ "ಕನ್ನಾಡ ಕೋಗಿಲೆ" ಯಲ್ಲಿ ಚಿತ್ರಿಸಿದ್ದೇನೆ.– ಓದುಗರು ಈ ನನ್ನ ಗ್ರಂಥಕ್ಕೆ ಪ್ರೋತ್ಸಾಹಿಸಿದಲ್ಲಿ, ನಾನು ಬದುಕಿವುಳಿದಲ್ಲಿ ಮುಂದಿನ ಜೀವನವನ್ನೂ ಕೂಡಾ ಬರೆಯಬೇಕೆಂಬಾಶೆಯುಳ್ಳವನಾಗಿದ್ದೇನೆ.

ಪ್ರವಚನ ಪಟುಗಳೂ, ಲಿಂಗಪೂಜಾ ಧುರೀಣರೂ, ಸಮಾಜಸೇವಾ ತತ್ಪರರೂ, "**ಅಭಿನವ ಚನ್ನಬಸವಂಣ**" ರೆಂಬ ಬಿರುದಾಂಕಿತರೂ ಆದ **ಶ್ರೀ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳು ಸವದೀ(ನವಿಲುಗುಂದ)** ಅವರುಗಳು ನನ್ನೀಕೃತಿಗೆ "ಮುನ್ನುಡಿ" ಬರೆದು ಆಶೀರ್ವದಿಸಿದ್ದಾರೆ. ಅವರಡಿ ದಾವರೆಗಳಿಗೆ ಅನಂತ ಪ್ರಣಾಮಗಳನ್ನು ಅರ್ಪಿಸದಿರಲಾರೆ.

ಪಂಡಿತಾಗ್ರಣಿ, ಕೀರ್ತನಕೇಸರಿ, ನಾಟ್ಯ ಕಲಾ ( ಕವಿ ) ಸೂರಿಗಳಾದ

ಶ್ರೀ ಪಂ. ಗಂಗಾಧರ ಶಾಸ್ತ್ರೀಗಳು ಚಿತ್ತರಗಿ ಅವರು ಹಿರಿಯಣ್ಣನಾಗಿ ಹಾರೈಕೆ ಬರೆದು ಹರಿಸಿದ್ದಾರೆ. ಅವರಿಗೆ ವಂದಿಸದೆ ಅವಂದಿಗನಾಗಲಾರೆ.

ತಂದೆತೀರಿದ ತಬ್ಬಲಿಯಾದ ನನ್ನನ್ನು ತಂದೆಯಂತೆ ಪ್ರೀತಿಯಿಂದ ಕಂಡು, ನನಗೆ ವಿದ್ಯಾಭ್ಯಾಸ ಮಾಡಿಸಿ; ಸದಾ ನನ್ನ ಪ್ರಗತಿಗಾಗಿ ಶ್ರಮಿಸುತ್ತಿರುವ ನನ್ನ ಒಡಹುಟ್ಟಿದ ಅಣ್ಣಂದಿರಾದ ಶ್ರೀ ವೇ. **ಮಡಿವಾಳಯ್ಯಸ್ವಾಮಿ ಗದ್ದಿಗಿ-ಮಠ** ಅವರಿಗೆ ಕೃತಜ್ಞತೆಗಳನ್ನರ್ಪಿಸದೆ ಕೃತಘ್ನನಾಗಲಾರೆ.

ಸದ್‌ಭಕ್ತಶೀಲರೂ, ಗುರುಲಿಂಗ ಜಂಗಮ ಪ್ರಿಯರೂ ೩ ವರುಷ ಬಸವ ಪುರಾಣ ಹಚ್ಚಿಸಿದ ಶ್ರೇಷ್ಠ ಉದಾರಿಗಳೂ, ದಾನವಂತರೂ, ಶಿವಶರಣರೂ ಆದ **ಶ್ರೀ ಶಿವಣ್ಣ ಹಾಗೂ ಶಿದ್ದಣ್ಣ ಗಾಣಿಗೇರ ಕೋಡಬಾಳ** ಅವರು ನನ್ನೀ ಕೃತಿಗೆ ಪ್ರಕಾಶಕರಾಗಿ ಮಹದುಪಕಾರ ಮಾಡಿದ್ದಾರೆ, ಅವರಿಗೆ ನಾನು ವಂದನೆಗಳನ್ನು ಅರ್ಪಿಸದೆ ಸಿಂದಿಗನಾಗಲಾರೆ.

ಸರಳ ಹೃದಯದವರಾದ ಶ್ರೀ **ಬಸಪ್ಪ ಮಾಸ್ತರು ಕೋಡಬಾಳ ಶ್ರೀ ಅಕ್ಕಮ್ಮನವರು ರೊಡಗೌಡರ ನೆಗಳೂರ** ಹಾಗೂ ಇತ್ಯಾದಿ ಗುರು ಬಂಧುಗಳೂ ಸ್ನೇಹಿತರೂ ನನ್ನ ಗ್ರಂಥ ಲೇಖನಕ್ಕೆ ಪ್ರೋತ್ಸಾಹಿಸಿದ್ದಾರೆ. ಅವರೆಲ್ಲರಿಗೂ ನಾನು ಋಣಿಯಾಗದೆ ದುರ್ಗುಣಿಯಾಗಲಾರೆ.

ಕರಡು ಪ್ರತಿಗಳನ್ನು ಶ್ರಮದಿಂದ ತಿದ್ದಿ ಪ್ರಿಂಟಿಗೆ ಅಣಿಮಾಡಿದ **ಶ್ರೀ· ವೇ. ಶಿವಮೂರ್ತಿಶಾಸ್ತ್ರಿಗಳು ಹಿರೇಮಠ ಹಿರೇಮಲ್ಲೂರ** ಅವರಿಗೂ ಹಾಗೂ ಪ್ರಿಂಟಿನ ಕಾರ್ಯದಲ್ಲಿ ನಿಷ್ಠೆಯಿಂದ ದುಡಿದ ಸಹೋದರ **ಶ್ರೀ ಚನ್ನ-ವೀರ ಬನ್ನೂರ** ಅವರಿಗೆ ನನ್ನ ನೆನಕೆ ಸಲ್ಲಿಸದೆ ಅಣಕೀಯಾಗಲಾರೆ.

ಶ್ರಮವಹಿಸಿ ಕೃತಿಯನ್ನು ಶುದ್ಧವಾಗಿ ಪ್ರಿಂಟಮಾಡಿದ **ಶ್ರೀ ಸಿದ್ಧೇಶ್ವರ ಮುದ್ರಣಾಲಯದ** ಮಾಲಕರಿಗೂ ಹಾಗೂ ಅಚ್ಚುಕೂಟದವರಿಗೂ ನಾನು ಹಾರ್ದಿಕಗಳನ್ನರ್ಪಿಸದೆ ವಂಚಿತನಾಗಲಾರೆ.

ಇನ್ನು ಕೊನೆಯದಾಗಿ — ನನ್ನ ಈ ಕೃತಿಯನ್ನು ಓದಿ ಆನಂದಿಸಿ; ಮುಂಬರುವ ನನ್ನ ಕೃತಿಗಳಿಗೆ ಪ್ರೋತ್ಸಾಹಿಸುವ ಸಾಹಿತ್ಯ ಪ್ರೇಮಿಗಳಿಗೆ; ಓದುಗರಿಗೆ, ಅಭಿವಂದಿಸಿ ಲೆಕ್ಕಣಿಕೆಯಿಂದ ಕಕ್ಕುವ ಅಕ್ಕರಗಳ ಒಕ್ಕಣಿಕೆಗೆ ಚುಕ್ಕೆಯನ್ನಿಡುವೆ.

ಸಾಹಿತಿಗಳ ಶಿಸು.

**ಗುರುಸ್ವಾಮಿ ಕಲಿಕೇರಿ.**

# ಕನ್ನಾಡ ಕೋಗಿಲೆ

( ಪಂ. ಪುಟ್ಟರಾಜರ ಪರಿಚಯಾತ್ಮಕ ಗದ್ಯಗ್ರಂಥ )

ಪ್ರಕಾಶಕರು:-
ಶಿವಶರಣರಾವ
ಶ್ರೀ ಶಿವಣ್ಣ ಹಾಗೂ ಶಿದ್ದಣ್ಣ
ಗಾಣಿಗೇರ, ಕೋಡಬಾಳ

ಲೇಖಕರು:-
ಶ್ರೀ ಗುರುಸ್ವಾಮಿ ಕಲಿಕೇರಿ.

ಪ್ರಕಾಶನ ಸ್ಥಲ:-
**ಶಿವಾನುಭವ ಮಂಟಪ, ಕೋಡಬಾಳ.**



ಪ್ರಥಮ ಮುದ್ರಣ ೧೦೦೦ ಪ್ರತಿ.



ಪ್ರಕಾಶಕರು:-
ಶಿವಶರಣರಾದ
ಶ್ರೀ ಶಿವಂಣ ಹಾಗೂ ಶಿದ್ದಂಣ ಗಾಣಿಗೇರ, ಕೋಡಬಾಳ



ಪ್ರಕಾಶನದಿನ;-
ಬಸವ ಜಯಂತಿ ವೈಶಾಖ ಶು|| ೩
ತಾ. ೧೨—೫—೧೯೬೭

1967 ]  [ ಬೆಲೆ. ೨-೦೦

# ಅರ್ಪಣ



ಧರ್ಮಾವತಾರಿಯಾಗಿ, ಧರ್ಮದುದ್ಧಾರಕನಾಗಿ, ಗುರುಲಿಂಗ ಜಂಗಮ
ಪ್ರೇಮಿಯಾಗಿ, ಜಗದ, ಜನರ ಸ್ವಾಮಿಯಾಗಿ, ದ್ವಿತಿಯ ಶಂಭು
ವಾಗಿ, ಗುರುವಾಗಿ, ಗುರುವಿನ ಗುರು ಪರಮ ಗುರುವಾಗಿ
ಮೆರೆದಮರನಾದ ವೀರಶೈವಜ್ಯೋತಿ, ಜಗಜ್ಯೋತಿ
ಭಗವಾನ್ ಶ್ರೀ ಶ್ರೀ ಶ್ರೀ. ಬಸವೇಶ್ವರನ
ದಿವ್ಯಪಾದ ಸನ್ನಿಧಿಗೆ

ಫಲಹಾರೇಶ್ವರ ಗ್ರಂಥ ಗಿಡದಿಂದ ಫಲಬೀರಲನುವಾದ

ದ್ವಿತೀಯ ಪುಷ್ಪ

# ಕನ್ನಾಡ ಕೋಗಿಲೆ

ಗುರುಸ್ವಾಮಿ ಕಲಿಕೇರಿ

ಗ್ರಂಥ ಸಿಗುವ ಸ್ಥಳ:-
ಶ್ರೀ ಶಿವಂಣ ಗಾಣಿಗೇರ
ಮು|| ಕೋಡಬಾಳ. ○ ಪೋ|| ನೆಗಳೂರ. ○ ತಾ|| ಹಾವೇರಿ.
ಜಿ:- ಧಾರವಾಡ.

ಶ್ರೀ ಗುರುಸ್ವಾಮಿ ಕಲಿಕೇರಿ, ಗದ್ದಿಗಿಮಠ.
ಪೋಸ್ಟ ಮುಕ್ಕಾಂ } ಕಲಿಕೇರಿ
ತಾ:- ಸಿಂದಗಿ ● ಜಿ:- ಬಿಜಾಪೂರ

ವಿರೇಶ್ವರ ಪುಣ್ಯಾಶ್ರಮ, ಗದಗ. ಜಿ:- ಧಾರವಾಡ.

◉ ಶ್ರೀ ಗುರು ಪ್ರಸನ್ನ ◉

## — ಕವಿ ಪರಿಚಯ —

ಕನ್ನಾಡ ಕೋಗಿಲೆಯೆನ್ನೋದುವ ಮೊದಲು ಕಲಿಕೇರಿಕವಿಗೆ ಗಳ ಪರಿಚಯುವನ್ನು ಸ್ವಲ್ಪಾದರೂ ಅರಿಯಬೇಕು ಯಾಕಂದರೆ "ಕವಿ ಯೇ ಸರ್ವರೊಳುತ್ತಮಂ" ಎಂಬ ಸುಭಾಷಿತನ ಉಕ್ತಿಯಂತೆ ಕವಿಯು ಅಗ್ರಸ್ಥಾನ ಪಡೆದಿರುತ್ತಾನೆ. ಎಲ್ಲರಿಗೂ ಶ್ರೇಷ್ಠನಾಗಿರುತ್ತಾನೆ. ಅಂದಾಗ ಅಂಥವರ ಚರಿತ್ರೆಯನ್ನು ತಿಳಿಯುವದು ಓದುಗರ ಮೊದಲಿನ ಕರ್ತವ್ಯ.

ಮನುಜರ ಮೇಲೆ ಕನಿಷ್ಠರ ಮೇಲೆ ।
ಸಾಪವರ ಮೇಲೆ ತನತನಗಿಂದ್ರಚಂದ್ರ
ರವಿಕರ್ಣ ದಧೀಚಿಯಂದ ಪೊಗಳಿದ್ದರು
ಮಾನವಾನೀನಹರ್ನಿಶಂ॥

ಪೋಗಳು ಅರ್ಜಿಸು, ಕಡುಸೋಂಸಿನ ಪೆಂಪಿನ, ಹಂಪೆಯೊಳಲ್ಲದನಂ ಎಂಬ ಹರಿಹರನ ಅಗ್ಗಳಿಕೆ ಗುರುವರನಿಂದ ಸಂಪೂರ್ಣ ತಿಳಿದಿರುವ ಕಲಕೇರಿಯುವರು ಸಾಯುವವರ ಮೇಲೆ, ಮನುಜರ ಮೇಲೆ ಚರಿತ್ರೆಯನ್ನು ಬರೆದು ಹೊಗಳುವ ಗೋಜಿಗೆ ಹೋಗದೇ ದೇವಮಾನವರಾಗಿರುವ ಜಗದ್ವಂದ್ಯರಾಗಿರುವ ಪೂಜ್ಯ ಪುರುಷರಾಗಿರುವ ಗುರುಗಳ ಪಂ. ಪುಟ್ಟರಾಜರ, ಸಾಗರೋಪಾನಿಯಾಗಿರುವ ಅವರ ಜೀವನ ಚರಿತ್ರೆಯನ್ನು ಈ ಕಿರಿಹೊತ್ತಿಗೆಯಲ್ಲಿ ಕರಿಯು ಕನ್ನಡಿಯೊಳಗಿರುವಂತೆ ಎಂಬ ಬಸವಮಹಾತ್ಮನ ಉಕ್ತಿಯಂತೆ ತಮ್ಮ ಬುದ್ಧಿ ಚಾತುರ್ಯದಿಂದ ಹೆಣೆದಿರುವ ಶ್ರೀ ಗುರುಸ್ವಾಮಿ ಕಲಕೇರಿಯವರು. ಕನ್ನಾಡಿನ ವಿಜಾಪೂರ ಜಿಲ್ಲೆಯಲ್ಲಿ ಒಂದಾಗಿರುವ ಕಲಕೇರಿ ಗ್ರಾಮದಲ್ಲಿ ಗದ್ದುಗೆಮಠದ ಶ್ರೀ ಕಾಶಯ್ಯಸ್ವಾಮಿ

ಪರಮ್ಮ ಎಂಬ ಶ್ರೇಷ್ಠ ದಂಪತಿಗಳುದರದಲ್ಲಿ ೧೯೪೧ನೇ ಇಸ್ವಿಯಲ್ಲಿ ಜನ್ಮತಾಳಿದರು. ಚಿಕ್ಕವರಿರುವಾಗಲೇ ಇವರು ಮುಕ್ಕಣ್ಣನನ್ನು ಒಲಿಸುವ ಅಕ್ಕರೆಯ ನುಡಿಗಳನ್ನುಕೇಳಿ ದಕ್ಕಾಗುತ್ತಿದ್ದರು ಜನಗಳು. ಇದನ್ನರಿತ ಇವರ ತಂದೆ-ತಾಯಿಗಳು ಸ್ವಗ್ರಾಮದಲ್ಲಿಯೇ ಪ್ರಾಥಮಿಕ ಶಿಕ್ಷಣಕ್ಕೆ ಕಳಿಸಿದರು. ಕುಶಲಾಗ್ರಬುದ್ಧಿಯುಳ್ಳ ಕಲಕೇರಿಯುವರು ಸ್ವಲ್ಪ ದಿನಗಳಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದರು. ಮುಲ್ಕಿಪರೀಕ್ಷೆಯಲ್ಲಿ ಸಿಂದಗಿ ಕೆಂದ್ರಕ್ಕೇನೆ ಚತುರ್ಥಸ್ಥಾನ ಪಡೆದು ತಮ್ಮೂರಿನ ಶಾಲೆಗೆ ಪ್ರಥಮಸ್ಥಾನದಲ್ಲಿ ೧೯೫೫ರಲ್ಲಿ ಪಾಸಾದರು. ಇಷ್ಟರಲ್ಲಿಯೇ ಇವರ ತಂದೆಯವರು ಶಿವಾಧೀನರಾಗಿದ್ದರು. ಮಾತೃ ವಾತ್ಸಲ್ಯ ಹಾಗು ಅಣ್ಣನ ಅವಿರತಪ್ರೇಮದಿಂದಲೇ ಇವರು ಮುಂದಡಿ ಇಡ ಬೇಕಾಯಿತು.

ಚಿಕ್ಕಂದಿನಲ್ಲಿಯೇ ತಮ್ಮ ಸುಮಧುರ ಕಂಠದಿಂದ ಭಕ್ತಿಯ ಗೀತೆಗಳನ್ನು ರಾಷ್ಟ್ರಗೀತೆಯನ್ನು ಮನರಂಜನೆಯ ಕವನಗಳನ್ನು ಹಾಡಿ ಜನರ ಮನಸ್ಸನ್ನು ಆಕರ್ಷಣಗೊಳಿಸುತ್ತಿದ್ದರು.

ಅದರಂತೆ ಪದಪದ್ಯಗಳನ್ನು ದೇವಸ್ತೋತ್ರಗಳನ್ನು ಮಾಡಿ ಹಾಡುವದು ಇವರ ಜನ್ಮ ಸಂಸ್ಕಾರವೇ ಆಗಿತ್ತು. ಇದನ್ನರಿತ ಇವರ ಅಣ್ಣಂದಿರಾದ ಮಡಿವಾಳಯ್ಯನವರು ಇವರನ್ನು ಸಂಗೀತ ಸಾಹಿತ್ಯ ಮಹಾವಿದ್ಯಾಲಯವೆಂದು ಹೆಸರು ಪಡೆದಿರುವ ಗದುಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮಕ್ಕೆ ಕಳುಹಿದರು,

ಮೊದಲೇ ಚುರುಕುಬುದ್ಧಿಯುಳ್ಳ ಕಲಕೇರಿಯವರು ಪುಟ್ಟರಾಜ ಕೃಪಾಕಟಾಕ್ಷ ದಿಂದ ಸಂಗೀತ ಹಾಗು ಸಾಹಿತ್ಯದ ಅಧ್ಯಯನ ದಿನೇದಿನೇ ಬೆಳೆಯತೊಡಗಿತು.

ಗುರುಗಳಿಂದ ಷಡಕ್ಷರ ಕವಿ !! ವಿರಚಿತ ಶಬರ ಶಂಕರ ವಿಳಾಸದ ಅಧ್ಯಯನವು ಇವರ ಕವಿತ್ವಕ್ಕೆ ಮಾರ್ಗದರ್ಶನವಾಯಿತು. ಅಂತೂ ಸ್ವಲ್ಪದಿನದಲ್ಲಿಯೇ ಸಂಗೀತ "ವಿಶಾರದ" ಪರೀಕ್ಷೆಯಲ್ಲಿ

ವಿಶೇಷ ಶ್ರೇಣಿಯನ್ನು ಗಳಿಸಿದರು. ಸಾಹಿತ್ಯ ಅಧ್ಯಯನಕ್ಕಿಂತ ಸಂಗೀತವೇ ಇವರಿಗೆ ಮುಖ್ಯವಾಗಿದ್ದು, ಗುರುಗಳು ಬರೆಸುತ್ತಿರುವ ಅನೇಕ ಕಾವ್ಯಗಳ ರಸಪಾನದಿಂದ ಸಾಹಿತ್ಯವೂ ಸ್ವಾಭಾವಿಕವಾಗಿ ಕಲಿತಿತು.

ಅಂತೆಯೇ ಇವರು ಈ ಮೊದಲು ಪರಮಗುರುಗಳ ಜೀವನ ಕವನವೆಂಬ ಮಾಲೆ (ಪುಸ್ತಕ) ಯನ್ನು ಗುರುಗಳಿಗೆ ಅರ್ಪಿಸಿದರು ಇನ್ನೂ ಗೆಳೆತನ, ಯೌವ್ವನ, ಮದುವೆ ಮಂಟಪ ಮಂತಾದ ನಾಟಕಗಳನ್ನು ಕರ್ಮಜ್ಞಾನಕಗ್ಗ ವೆಂಬ ಮತ್ತೊಂದು ಗ್ರಂಥವನ್ನು ಒಳ್ಳೆ ಅಚ್ಚುಮೆಚ್ಚಾಗಿ ಜನರ ಮನಸ್ಸನ್ನೂ ಆಕರ್ಷಿಸುವವು.

ಇದನ್ನೆಲ್ಲವನ್ನು ತಿಳಿದ ಪೂಜ್ಯಗುರುಗಳಾದ ಪುಟ್ಟರಾಜರು ಇವರನ್ನು ವೀರೇಶ್ವರ ಪುಣಾಶ್ರಮದ ಅಧ್ಯಾಪಕರನ್ನಾಗಿ ೧೯೬೩ರಲ್ಲಿ ನೇಮಿಸಿದರು. ಇಲ್ಲಿಇವರು ಅತ್ಯುತ್ತಮ ರೀತಿಯಲ್ಲಿ ಎರಡು ವರ್ಷ ಸೇವೆಸಲ್ಲಿಸಿ ಗುರುಗಳ ಆಶೀರ್ವಾದಕ್ಕೆ ವಿದ್ಯಾರ್ಥಿಗಳ ಪ್ರೀತಿಗೂ ಪಾತ್ರರಾದರು. ಇವರಅಧ್ಯಾಪಕತ್ವದಲ್ಲಿದ್ದಾಗ ವೀರೇಶ್ವರ ಪುಣ್ಯಾ-ಶ್ರಮಕ್ಕೆ ಭಾರತದ ಪ್ರಖ್ಯಾತ, ಶಹನಾಯಿ ವಾದಕರಾದ ಬಿಸ್ಮಿಲ್ ಖಾನ್ ಮತ್ತು ವಾಯಿಲನ್ ವಾದಕರಾದ, ಶ್ರೀ ಗಜಾನನರಾವ ಜ್ಯೋಶಿ ಮೊದಲಾದ ವಾದಕರ ಸಂದರ್ಶನ ಸತ್ಕಾರಗಳು ನಡೆದವು ಮತ್ತು೧೯೬೭ರಲ್ಲಿ ಪುಣಾಆಕಾಶವಾಣಿ ಕೇಂದ್ರದವರು ಇವರನ್ನು'ಎ' ಕ್ಲಾಸಿನಲ್ಲಿ ಆರಿಸಿರುವದು ನಮ್ಮೆಲ್ಲರಿಗೂ ಹೆಮ್ಮೆಯನಿಸಿದೆ; ಇದರಂತೆ ಇವರ ಪ್ರಕಾಶ ಎಲ್ಲೆಡೆಗೆ ಹಬ್ಬಲಿ. ಮತ್ತು ತಮ್ಮ ಜೀವನ ಸಾರ್ಥಕ ಮಾಡಿಕೊಳ್ಳಲು ಕನ್ನಾಡ ಕೋಗಿಲೆಯನ್ನು ಬರೆದ ಕಲಕೇರಿ ಯವರು ಕವಿಪರಿಚಯ ಬರೆಯುವ ಸೇವೆ ಒದಗಿಸಿ ಕೊಟ್ಟದ್ದಕ್ಕಾಗಿ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ತಾ: ೨೮-೪-೬೭.
ಹಿರೇಮಲ್ಲೂರ.

ಶ್ರೀ ವೇ|| ಶಿವಮೂರ್ತಿ ಸ್ವಾಮಿ
ಹಿರೇಮಠ.

## ಭಾರತದ ಹೆಬ್ಬೊಟ್ಟು

# ಪೃಟ್ಟರಾಜರ ಹುಟ್ಟು

ಏಶಿಯಾ ಖಂಡದ ಗಂಡುಮೆಟ್ಟು, ಬಂಧುರದ ಬೆಟ್ಟು, ಶ್ರೀ ಝೇಂಕಾರದ ಜುಟ್ಟು, ಗಾಂಭೀರ್ಯದ ಗುಟ್ಟು, ಭಾರತ. ಕಾನನದ ಕೆಂಗನಸು, ಸ್ವಾನುಭವದ ಸವಿನೆನಸು, ಸಾರ್ಥಕ್ಯದ ಹುಮ್ಮಸ್ಸು ಭಾರತದ ತೇಜಸ್ಸು ಓಜಸ್ಸು.

ಹಿಮನಗ ಜಾತೆ ಮನು ಸಖನಿಗಾಗಿ ಬಿಮ್ಮಾನದ ತಪಸ್ಸಾಚರಿಸಿ ಸುಮ್ಮಾನದಲಿ ಓಲೈಸಿ, ಸುಮನೋಹರ ಕಾಮಹರನನ್ನು ಒಲಿಸಿ, ನೆಲಿಸಿ ಪೂಜಿಸಿದ; ಪೆರ್ಮೆಯದ ನಿರ್ಮಲಪಾದ ಹಿಮಾಲಯದಿಂಪೊಡಗೂಡಿದ್ದು ಈ ಭಾರತ.

ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಕಣ್‌ಗಗೋಚರವಾಗಿ ಕಂಗೊಳಿಸಿ, ಗಂಗಾ ಜಮುನಾ ಬ್ರಹ್ಮಪುತ್ರೆಯರಿಗೆ ಜನ್ಮವಿರಿಸಿ, ಮಹಿಮಾನ್ವಿತದ ಬಾನಮಂದಿರದಲ್ಲಿ ಚಂದಿರನಂತೆ ಸುಂದರವಾಗಿ ಬಾಳಿದೆ; ಬಾಳಿ ಬದಕಿದೆ; ಬದುಕಿ ಬೆಳಗಿದೆ ಈ ನಮ್ಮ ಭಾರತ.

ಶ್ರೀ ಕೃಷ್ಣ ಪರಮಾತ್ಮನು ಧರ್ಮಸುದ್ಧಾರಕ್ಕಾಗಿ ದೇಶಸುದ್ಧಾರಕ್ಕಾಗಿ ದಶಾವತಾರ ತಾಳಿದ ಪವಿತ್ರದೇಶ ಸಚಿತ್ರ ಕೋಶಭಾರತದೇಶ.

ಖಗಮೃಗಗಳಿಂದ ನಗಗಳಿಂದ, ಖಣಿಗಳಿಂದ ಮಣಿಗಳಿಂದ, ಗಿರಿಗಳಿಂದ ಜರಿಗಳಿಂದ, ಪಕ್ಷಿಗಳಿಂದ ದಕ್ಷಿಗಳಿಂದ, ಋಷಿಗಳಿಂದ ಋಷಿಗಳಿಂದ, ಕಲಿಗಳಿಂದ ಕಲೆಗಳಿಂದ, ಖನಿಜಗಳಿಂದ ವನಜಗಳಿಂದ, ಕಾಡುಗಳಿಂದ ಗೂಡುಗಳಿಂದ, ತಪಸಿಗಳಿಂದ, ಸ್ವಪಸಿಗಳಿಂದ, ಸುತತ್ವಜ್ಞರಿಂದ ಪವಿತ್ರಜ್ಞರಿಂದ ಕೂಡಿದ ಕೂಟ ರಾರಾಜಿಸುವ ರಾಷ್ಟ್ರ ಭಾರತ ರಾಷ್ಟ್ರ ಶ್ರೇಷ್ಠ.

ಬುದ್ಧ ಮಹಾವೀರರುದಿಸಿದ ತಾಣ, ಶೂರದಾಸ ತುಲಸಿಗಳ ತ್ರಾಣ, ಮೀರ್ ಜ್ಞಾನೇಶ್ವರ ತುಕಾರಾಮರ ಪ್ರಮಾಣ, ಕರ್ಣಾರ್ಜುನ ಭೀಷ್ಮ ದ್ರೋಣರ ವೀರತನದ ಕೃಪಾಣ ನಮ್ಮೀ ಹಿಂದುಸ್ಥಾನ.

ಅಜ್ಞಾನದ ಕತ್ತು ಕತ್ತರಿಸಿ ಸುಜ್ಞಾನದ ಬಿತ್ತಿ ಬಿತ್ತರಿಸುವಸತ್ಯಮಿ ಥ್ಯಗಳ ಇತ್ಯಾರ್ಥ ತಿಳಿಸಿ, ನಿತ್ಯಾರ್ಥ ಭೋಧಿಸುವ ಶಿದ್ಧಾಂತ ಶಿಖಾಮಣಿ, ಕುರಾನ, ಭಗವದ್‌ಗೀತಾ, ರಾಮಾಯಣ, ಮಹಾಭಾರತ, ನಿಜಗುಣಶಾಸ್ತ್ರಭೋಧೆ ಮೊದಲಾದ ಉದ್‌ಗ್ರಂಥಗಳ ಉಗಮಸ್ಥಾನ ಹಿಂದುಸ್ಥಾನ.

ಸೌರಾಷ್ಟ್ರೇ ಸೋಮನಾಥಂಚ, ಶ್ರೀ ಶೈಲೇ ಮಲ್ಲಿಕಾರ್ಜುನಂ ।
ಉಜ್ಜೈಯಿನಾಂ ಮಹಾಕಾಲಂ ಓಂಕಾರ ಮಮಲೇಶ್ವರಂ ॥
ಪರಲ್ಯಾಂ ವೈಜ್ಯನಾಥಂಚ ಡಾಕಿನ್ಯಾಂ ಭೀಮ ಶಂಕರಂ ।
ಸೇತು ಬಂಧೇತು ರಾಮೇಶಂ ನಾಗೇಶಂ ದಾರುಕಾವನೆ ॥
ವಾರಣಶ್ಯಾಂಚು ವಿಶ್ವೇಶಂ ತ್ರ್ಯಂಭಕಂ ಗೌತಮೀತಟೆ ।
ಹಿಮಾಲಯೇತು ಕೇದಾರಂ ಘೃಶೃಣೇಶಂಚ ಶಿವಾಲಯೇ ॥
ಏತಾನಿ ಜ್ಯೋತಿರ್ಲಿಂಗಾನಿ ॥।

ಈ ರೀತಿ ೧೨ ಜ್ಯೋತಿರ್ಲಿಂಗಗಳು ಸುಪ್ರಸಿದ್ಧಗಳಾದ ಪ್ರವಿತ್ರಸ್ಥಾನ ಹಿಂದುಸ್ಥಾನ. ಪಂಚಾಚಾರ್ಯ ಶಂಕರಾಚಾರ್ಯ ಪೈಗಂಬರ ಠಾಕೂರ, ನಾನಕ; ಟಿಳಕ; ನವರೋಜಿ; ಗೋಕಲೆ; ಮೊದಲಾದ ಪವಾಡಪುರುಷರ ವುಸಿರಿನ ಕುಸು ರಾಗಿ, ಮಹಿಮೆಯ ಮಿಡಿಯಾಗಿ, ಜಗದೀಶನ ಜಡಿಯ ನಾಗ ಹೆಡಿಯಂತೆ, ತ್ಯಾಗ ಕಿಡಿಯಂತೆ, ಬೆಳಕು ಬೀರಿದ ಸೀಮಿ ಭರತಭೂಮಿ.

ಅನಂತ ದಶಕಗಳಿಂದ ಪರರ ದಬ್ಬಾಳಿಕೆಗೆ ಇಂಬುಗೊಟ್ಟು ಪರತಂತ್ರದ ಸಂಕೋಲೆಗಳಿಂದ ವಿಲಕ್ಷಣವಾಗಿ ಕೊರಗಿ; ಮರುಗಿ ಪರದಾ ಸ್ಯದಲ್ಲಿ ಬಳಲುವ ಭಾರತೀಯರಿಗೆ, ಸ್ವಾಭಿಮಾನದ ಪಾಠಕಲಿಸಿ, ದೇಶಾಭಿ ಮಾನದ ಪೀಠದರ್ಥ ಭೋಧಿಸಿ, ತನ್ನ ಸ್ವಾರ್ಥವೇದನೆಗೆ ತಿಲಾಂಜಲಿಯನ್ನಿ ರಿಸಿ, ಪರಾರ್ಥ ಸಾಧನೆಗೆ ಜೀವವನ್ನೇ ಮುಡುಪಾಗಿರಿಸಿ ಹೋರಾಡಿ, ಬೋರಾಡಿ, ಪರರನ್ನು ತಿಂದು ಪೌರುಷದಲಿ ಮೆರೆವ ಪರದೇಶದ ಕುನ್ನಿಗಳಿಗೆ ಕಾಲಿಗೆ ಬುದ್ಧಿ ಹೇಳಿಸಿ, ದೇಶದಲ್ಲಿ ಅಸಹಕಾರ ಅಶಾಂತಿ ಅತಂತ್ರತೆಗಳನ್ನು ಅಳುಕಿಸಿ, ಸಹಕಾರ ಶಾಂತಿ ಸ್ವತಂತ್ರತೆಗಳ ಬೀಜ ನಾಟಿಸಿ, ಫಲಕಂಡು ವುಂಡು ಎಲ್ಲರಿಗೂ ವುಣಿಸಿದ ಪೂಜ್ಯ ಗಾಂಧೀಜಿಯವರು ಬಾಳಿದ ಪುಣ್ಯಭತ್ರ ಗಣ್ಯ ಕ್ಷೇತ್ರ ಈ ಭಾರತ.

ಜನಸೇವೆಯೇ ಜನಾರ್ದನನ ಸೇವೆಯೆಂದು ಜಡದೇಹ ವಿರುವವರೆಗೂ ದುಡಿದು ದುಡಿದು ಹಣ್ಣಾಗಿ ಮಡಿದು ಮಣ್ಣಲ್ಲಿ ಬೆರೆತು ಭಾರತಾಂಬೆಯ ಮುಡಿಗೇರಿದ ಮಲ್ಲಿಗೆಯಂತೆ ಪರಿಶೋಭಿಸುವ ಜವಾಹರಲಾಲ ನೆಹರೂ, ಲಾಲಾಬಹದ್ದೂರ ಶಾಸ್ತ್ರಿ, ಸುಭಾಸ್‌ಚಂದ್ರ ಭೋಸ್, ವಲ್ಲಭಭಾಯಿ ಪಟೇಲರಂಥ ಮಹಾದೇಶಪ್ರೇಮಿಗಳನ್ನು ಪಡೆದ ಭರತಭೂಮಿ ನಿಜವಾಗಿಯೂ ಬಣ್ಣಿಸುವಂಥಾದ್ದು; ಮನ್ನಿಸುವಂಥಾದ್ದು.

ಭವಸಾಗರವನ್ನು ದಾಟಲು ಭವಬಂಧ ನಾರಿಯನ್ನು ನೆರೆನಂಬಿ. ಪಾರಮಾರ್ಥದ ಅರುಣನನ್ನು ಹೊರಡಿಸಿ, ಜಗದ ಅಜ್ಞಾನಂಧಃಕಾರವನ್ನು ತೊಲಗಿಸಿ, ಜ್ಞಾನದ ರವಿಯನ್ನು ಭುವಿಗಿತ್ತ ಮಹಾನುಭಾವರಾದ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ, ಅರವಿಂದರಂಥ ಹಲವಾರು ಅಭವಿಗಳನ್ನು ಹೆತ್ತು ಹೊತ್ತು ಸಾಕಿಸಲಹಿದ ಭಾರತಮ್ಮನ ಹೃದಯ ಭಾಗ್ಯೋದಯ; ಶಿವಸದಯ.

ಈ ಪವಿತ್ರತಮ ಭಾರತಮ್ಮನ ದೇಹಾವಯಗಳಂತೆ ಉತ್ತರಪ್ರದೇಶ, ಮಧ್ಯಪ್ರದೇಶ, ಮಹಾರಾಷ್ಟ್ರ, ಬಂಗಾಲ, ಮಲೆಯಾಳ, ಆಂದ್ರ, ಕೇರಳ, ಮುಂತಾದ ಪ್ರದೇಶಗಳು ನಮ್ಮ ಕಣ್ಣ ಮುಂದೆ ಶೋಭಾಯಮಾನವಾಗಿದೆ.

ಇದರಲ್ಲಿ ದಕ್ಷಿಣ ಪ್ರದೇಶವೆಂಬುದು ಭಾರತವ್ವನ ಬಲಭುಜವಂತೆ ಒಪ್ಪಿದೆ. ಇದರಲ್ಲಿ ಕೆಲವು ಪ್ರಾಂತಗಳು ಬಲಭುಜದ ಕಿರಿ ಬೆರಳಿನಂತೆ ಉಂಗುರ ಬೆರಳಿನಂತೆ ನಡು ಬೆರಳಿನಂತೆ ತೋರ ಬೆರಳಾಗಿ ಪರಿಗಣಿಸಿದಂತೆ; ನಮ್ಮ ಕನ್ನಡ ನಾಡು ಹೆಬ್ಬೆರಳಿ ( ಹೆಬ್ಬೊಟ್ಟೆ ) ನಂತೆ ಬಂಧುರವಾಗಿ ಬಲಾಢ್ಯವಾಗಿ ಬಿಗುಮಾನದಿಂದ ಬೆಳೆದು ಬೆಳೆದಿದೆ ಶೋಭಾಯಮಾನವಾಗಿದೆ.

ಕನ್ನಾಡು ಚಿನ್ನಾಡು ಚೆನ್ನಾಡು............ಈ ಕನ್ನಡನಾಡು

ಕೃಷ್ಣವೇಣಿ; ಮಲಾಪಹಾರಿಣಿ; ಕಾವೇರಿ; ಗೋದಾವರಿ; ತುಂಗಭದ್ರೆ ಧರ್ಮ–ವರದೆಯರು ಜರಿದು ಭಾರತಮಾತೆಗೆ ಜಲದಭಿಷೇಕಗೈದ ನಾಕ, ಕರ್ನಾಟಕ.

ಚಾಲುಕ್ಯ; ರಾಷ್ಟ್ರಕೂಟ; ಹೊಯ್ಸಳರಾಜರಿಂ, ಹುಕ್ಕ ಬುಕ್ಕ; ಟಿಪ್ಪೂ; ಸಂಗೊಳ್ಳಿರಾಯಣರಿಂ, ಸಿಂಧೂರ ಲಕ್ಷ್ಮಣ; ಕೃಷ್ಣರಾಜೇಂದ್ರರಿಂ, ಕಿತ್ತೂರ ಚನ್ನಮ್ಮ; ವೀರಮಾತೆ ರುದ್ರಮ್ಮ; ಬೆಳವಡಿ ಮಲ್ಲಮ್ಮ; ಒನಕೆಯ ಓಬಮ್ಮ; ಚಾಂದಬೀಬಿ ಮೊದಲಾದ ವೀರರುಧಿಸಿ ಧೀರರಸಾಂಬುಧಿಯನ್ನು ಹರಿಸಿದ ತಾರಕ; ಕರ್ನಾಟಕ.

ರನ್ನ; ಚೆನ್ನ; ಹೊನ್ನ; ಜಾಣ; ಬಾಣ; ನಿಜಗುಣ, ಜೈಮಿನಿ; ಪಂಪ; ಹರಿಹರ; ರಾಘವಾಂಕ, ಸೋಮ; ಭೀಮ; ಚಾಮ; ವ್ಯಾಸ; ಲಕ್ಷ್ಮೀಶ; ಸರ್ಪ ಭೂಷಣ, ಕಾಳಿದಾಸ; ಪುರಂದರದಾಸ; ಕನಕದಾಸ; ಕುಮಾರವ್ಯಾಸ, ವಿರು ಪಾಕ್ಷ; ಆಂಡಯ್ಯ; ಸಂಚಿಹೊನ್ನಮ್ಮ ಮುಂತಾದ ಕವಿಬಳಗವನ್ನು ಪುಟ್ಟಿಸಿದ ಕಾವ್ಯಘೋದಕ; ಕರ್ನಾಟಕ.

ಪಂಡಿತ ಪಂಚಾಕ್ಷರ; ಬಿಡಾರಕೃಷ್ಣಾಚಾರಿ; ವೀಣೆ ಶೇಷಾಚಾರಿ; ಸವಾಯಿ ಗಂಧರ್ವ ರಾಮಾಚಾರಿ(ಬಾಪೂ) ಮುಂತಾದ ಮಹಾಮಹಾ ಗಾಯ ಕರಿಂದ ಗಂಧರ್ವಲೋಕದ ಶಾರದೆಯನ್ನು ಭೂಮಿಗೆ ತಂದು ನೆಲೆಯಾಗಿ ನಿಲ್ಲಿ ಸಿದ ಸ್ವರಪ್ರೇರಕ; ಕರ್ನಾಟಕ.

ಜಕ್ಕಣ; ಡಕ್ಕಣ; ಅವನೀಂದ್ರನಾಥ; ನಂದೂಲಾಲ; ವಿಶ್ವೇಶ್ವರಯ್ಯ ನವರಂಥ ಹಲವಾರು ಶಿಲ್ಪಿಗಳನ್ನು.

ನಟಸಾಮ್ರಾಟ ಹಂದಿಗನೂರ ಸಿದ್ಧರಾಮಪ್ಪ; ವಾಮನರಾವ್; ಗರುಡ ಸದಾಶಿವರಾವ್; ಖಾನಗೌಡ; ಸುಬ್ಬಯ್ಯ ನಾಯ್ಡು; ನಂಜುಂಡಯ್ಯ; ಮಹ-ಮ್ಮದ ಫೀರ್; ಜಮೂಲಪ್ಪಗಳಾದಿ ನಾಟ್ಯಕಲಾವಿದರನ್ನು.

ಕೈಲಾಸಂ, ಶ್ರೀರಂಗ; ಗೋವಿಂದ ಪೈ; ಶ್ರೀಕಂಠ; ಬಿ. ಎಶ್, ಗದ್ದಿಗಿ-ಮಠ; ಮೊದಲಾದ ಸಾಹಿತಿಗಳನ್ನು ಪಡೆದ, ಲಲಿತಕಣೆಗಳ ಸತ್ಯಶೋಧಕ; ಕರ್ನಾಟಕ-

ಶಿವನ ಕಳೆಯೇ ಇಳೆಗೆಬಂದು, ಆಸ್ತಿಕ್ಯದ ಬೆಳೆಯಲ್ಲಿ ನಾಸ್ತಿಕ್ಯದ ಕಸ ಬೆಳೆದು, ಪರತತ್ವದ ಫಲಕ್ಕೆ ಆಳಿಗಾಲ ತಂದೊಡ್ಡಿದಾಗ ಕಳೆ ತೆಗೆಯುವ

ನಾಮದಿಂದ ಕಲ್ಯಾಣದ ಶೂನ್ಯ ಪೀಠದಲ್ಲಿ ಮಂಡಿಸಿ, ಆಧ್ಯಾತ್ಮದ ಅರಿವು ಮಾಡಿಕೊಟ್ಟ ಅರುವಿನ ಗುರುವಾಗಿ ಮೆರೆದ ಪರಮ ವಿರಾಗಿ ಅಲ್ಲಮ ಪ್ರಭು ದೇವರು.

ಭಕ್ತಿಯ ಬುನಾದಿಯ ಮೇಲೆ ಭದ್ರವಾಗಿ ಬೆಳೆದುಳಿದ ಭೂಮಂಡಲವು ಅಭಕ್ತಿಗಳ ಬಾಹುಪಾಶದಲ್ಲಿ ಬಂಧಿತವಾಗಿ ಬಳಲಿ ಬೆಂಡಾಗಿತ್ತು. ಬಲು ಬೆಂದಿತ್ತು. ಇಂಥ ಬರದಲ್ಲಿ ಭೂಪತಿಯನ್ನು ಬೆಂಗಾವಲಿಗಿರಿಸಿಕೊಂಡು ಭುವಿಗೆ ಬಂದು, ಭಕ್ತಿಯ ಬುತ್ತಿಯನ್ನು ಭವಿಗಳಿಗುಣಿಸಿ ಭವದಾಟುವ ಭವ್ಯೋಕ್ತಿ ಯನ್ನು ಬೋಧಿಸಿ, ಭವಮುಕ್ತನಾಗಿ, ಭಕ್ತಿ ಭಾಂಡಾರಿಯಾಗಿ, ಬಾಳಿ ಬೆಳಗಿ ಬಂಧಮುಕ್ತದಲಿ ಮಿಂದಂಥ ಭಗವಾನ್ ಬಸವೇಶ್ವರ.

ಕಲ್ಯಾಣದ ಅನುಭವ ಮಂಟಪಾಕಾಶದಲ್ಲಿ ಬೆಳಗುವ ಪಂಡಿತ ತಾರೆ ಗಳ ಮಧ್ಯದಿ ಧೃವತಾರೆಯಂತೆ ತೊಳಗಿ ಬೆಳಗಿದ ಶಿವಾನುಭವ ಚಕ್ರವರ್ತಿ ಚನ್ನಬಸವೇಶ್ವರ.

ಶಿದ್ಧರಲಿ ಪ್ರಸಿದ್ಧನಾಗಿ ಗುಡ್ಡರುದ್ಧಾರಕಾಗಿ ಗುಡ್ಡ ( ವಡ್ಡ ) ನಾಗಿ, ಕೆರೆಗುಡಿ ಅನ್ನ ಗರಡಿಗಳನ್ನು ಸಿದ್ಧಗೊಳಿಸಿ, ದ್ವಿತೀಯ ಮೃಡನಾಗಿ ಪೊಡವಿ ಯಲಿ ಮೆರೆದು ಸೊನ್ನಲಾಪುರದಿ ನೆಲೆಸಿದ ಶಿವಶಿದ್ಧರಾಮೇಶ್ವರ.

ದೇವರ ಹಿಪ್ಪರಗಿಯಲ್ಲಿ ಉದಿಸಿ; ಕಲಕೇರಿಯಲಿ ನೆಲಿಸಿ; ಕಲ್ಯಾಣದ ಬಸವಂಣನ ಮನದ ಮೈಲಿಗೆಯನ್ನು ತೊಳಿಸಿ; ಬಿಜ್ಜಳನ ಸೊಕ್ಕು ಕತ್ತರಿಸಿ ವೀರವಿರಾಗಿಯಾಗಿ ಮಠದ ಮಡಿವಾಳ ಮಾಚಿದೇವರು.

ನಂಬೆಕ್ಕ, ನೀಲಕ್ಕ, ಮಹದೇವಿಯಕ್ಕ, ಗಂಗಕ್ಕ, ಚಂಗಳೆ ಮುಂತಾದ ಅರವತ್ತುಮೂರುಜನ ಪುರಾತನರನ್ನು, ಸೃಷ್ಟಿಸಿ, ಆಧ್ಯಾತ್ಮದ ಹೊಳೆಯನ್ನು ಹರಿಸಿದ ತತ್ವಧಾಯಕ; ಕರ್ನಾಟಕ.

ಎಡೆಯೂರ ಶಿದ್ಧಲಿಂಗೇಶ, ಉಜ್ಜೈನಿ ಶಿದ್ಧಲಿಂಗೇಶ, ಹಾಲಕೆರೆ ಅನ್ನ ದಾನೀಶ, ಮುಂಡರಗಿ ಅನ್ನದಾನೀಶ, ಅಥಣಿಯೋಗಿ ಮುರುಘೇಶ, ನಾಲತ ವಾಡ ( ಸೊನ್ನಾಲಪುರದ ) ವೀರೇಶ, ಕಲಬುರಗಿ ಶರಣಬಸವೇಶ, ಹಾನಗಲ್ಲ

ಕುಮಾರೇಶ, ಬಿದರಿ ಕುಮಾರೇಶ, ಹಾವೇರಿ ಶಿವಬಸವೇಶ, ಅರಭಾವಿ ದುರದುಂಡೇಶ, ಬೀಳೂರ ಶಿವಯೊಗೀಶ, ಬಳ್ಳಾರಿ ಮರಿಸ್ವಾಮೀಶ, ಎಮ್ಮಿಗನೂರ ಜಡೆಶಿದ್ದೇಶ, ಚಳ್ಳಗುರ್ಕಿ ಎರೆತಾತೇಶ, ಇಲಕಲ್ ( ಚಿತ್ತರಗಿ) ಮಹಾಂತೇಶ, ಮುಳಗುಂದ ಮಹಾಂತೇಶ, ಶಹಪೂರ ಚರಬಸವೇಶ, ನರಗುಂದ ಚನ್ನಬಸವೇಶ, ಅವರಾದಿ ಫಲಹಾರೇಶ, ಮೈಲಾರಲಿಂಗೇಶ, ಅಮರಲಿಂಗೇಶ, ಶಿಶುನಾಳಧೀಶ, ಕೋಡಿಕೊಪ್ಪ ಹುಚ್ಚೀಶ, ನವಿಲಗುಂದ ನಾಗಲಿಂಗೇಶ, ಗೊಲಗಿರಿ ಗೊಲ್ಲಾಳೇಶ, ಕಲ್ಕೇರಿ ಕಲ್ಯಾಣದಯ್ಯ ಸ್ವಾಮೀಶ, ಚಡಚಣ ಮಗರಾಜ ಸಿದ್ದೇಶ,ಬಂಥನಾಳ ಶಿವಯೋಗೀಶ, ಹುಬ್ಬಳ್ಳಿ ಮೂರುಸಾವಿರಮಠದ ಗಂಗಾಧರೇಶ, ಚಿತ್ರದುರ್ಗ ಮುರಘೇಶ್ವರ ಮೊದಲಾದ ಮಹಾ ಮಹಾ ವಿಭೂತಿಗಳು ಅವತರಿಸಿದ ಪರಮತ್ವದ ಪ್ರಚಾರಕ ಈ ಕರ್ನಾಟಕ.

ಈ ಕರ್ನಾಟಕದ ಹಿರಿಮೆ ಅನಾವರಣ ಅಸಾಧಾರಣ..................

ಪಕ್ಷಿಗಳ ಪಾಡು; ಹಳ್ಳ ಹೊಳೆಗಳ ಜೋಡು,
ಬಳ್ಳಿ ಹೂಗಿಡಗಳ ಜಾಡು; ಸಾಗುವ ಸಾರಿಗೆಗಳ ಸರಸಾಡು,
ಸಾಹಿತ್ಯದ ಸೂಡು; ಸಂಗೀತದ ಸಲೆವೀಡು,
ಸಾಹಿತಿಗಳ ನೆಲೆವೀಡು; ಸಂಗೀತಜ್ಞರ ಶ್ರೀಬೀಡು,
ಮಹಾಮಹಿಮರ ಮಲೆನಾಡು; ಇವೆಲ್ಲವುಗಳಿಗೆ ತಾಯ್ನಾಡು,
ಒಲುಮೆಯ ನಾಡು ನಿಲುಮೆಯ ನಾಡು,
ಬಲುಮೆಯ ನಾಡು ಕನ್ನಡನಾಡು; ॥ "ಜೀವನಕವನ"

ಈರೀತಿ ಜೀವನ ಕವನವೆಂಬ ಹೊತ್ತಿಗೆಯಲ್ಲಿ ಕನ್ನಡನಾಡಿನ ವರ್ಣನೆ ಬಲುಒಪ್ಪಾಗಿ ಪೂರ್ಣತವಾಗಿದೆ. ಈ ಕನ್ನಾಡದಲ್ಲಿ ಯಾವುದಕ್ಕೂ ಕೊರತೆಯಿಲ್ಲ, ಮಿಕ್ಕಾವನಾಡು ಸಾಟಿಯಲ್ಲ, ಇದಕೆ ಸಗ್ಗದ ದೃಷ್ಟಾಂತ ಬೇಕಿಲ್ಲ, ಇದುವೆ ಸಗ್ಗ ಸಮವಾಗಿದೆಯಲ್ಲ.

ಸಾರಲಿಂತಿಹ ಭರತ ಖಂಡದ
ಸಾರತರ ದೇಶಗಳ ಮಧ್ಯದೆ
ಸಾರವತ್ತರಮಾಗಿ ಕರ್ನಾಟಕವು ಮೆರೆದಿಹುದು ॥
ತೋರುತಿಹ ವಿಲ್ಲೆಲ್ಲ ಬೆಳೆಗಳು
ಸಾರತಿಹ ವಿಲ್ಲೆಲ್ಲ ಕಲೆಗಳು
ಸೇರುತಿಹ ವಿಲ್ಲೆಲ್ಲ ಫಲಗಳಿದಕಣೆಯಾರು

ಶಿ. ಬ. ಪು.

ಈ ರೀತಿ ಶಿವಬಸವ ಪುರಾಣದಲ್ಲಿ ಉಲ್ಲೇಖಿತವಾಗಿದೆ.

ಒಂದೆಡೆ ಮಹಾಕವಿ ಸರ್ವಜ್ಞ ಕರ್ನಾಟಕದ ವರ್ಣನೆಯನ್ನು ಕೆಳಗಿನಂತೆ ಮಾಡಿದ್ದಾನೆ.

ಕಣಕದ ಕಡಬಾಗಿ ಮಣಕೆಮ್ಮೆ ಹಯನಾಗಿ
ಕುಣಿಕುಣಿದು ಮಜ್ಜಿಗೆ ಕಡೆವ ಸತಿಯಾಗಿ ಒಪ್ಪಿದ
ಕರ್ನಾಟಕದ ಅಣಕ ನೋಡೆಂದ ಸರ್ವಜ್ಞ ॥

ಹೀಗೆ ಅನಂತ ಕವಿಗಳು ಅನಂತಾನಂತವಾಗಿ ಕರ್ನಾಟಕವನ್ನು ಮನವಾರೆ ಹೊಗಳಿದ್ದಾರೆ. ಅಂದಾಗ ಈ ಕನ್ನಾಡಿನ ಹಿರಿತನವನ್ನು ಅದೆಷ್ಟು ರೀತಿ ಬಣ್ಣಿಸಿದರೂ ಸಾಲು ಮೇಲದು.

ನೆರೆದ ಪೀಠಂಗಳುಗ್ಗಡವು ಪನಿಷತ್ತುಗಳಿ ।
ಗರವಟ್ಟಿಗೆ, ಯಣಿಮಾದಿಗಳ ಬೊಬ್ಬೆಧರ್ಮದಬ್ಬರ ಘನಜ್ಞಾನ ಪದಿಪ್ತಿಗಳು,
ಹರಿಬ್ರಹ್ಮಾದಿಸುರರ ಕಾಹು ॥
ಪುರುಷಾರ್ಥ ನಾಲ್ಕರೊಳು ಸಲುಗೆಪುಣ್ಯದ ಮುಂದೆ
ಸಿರಿ ಸರಸ್ವಯರೆಡೆಯಾಟಣೆಳೆದಿರೆ, ಜಗ
ದ್ಗುರು ವಿರೂಪಾಕ್ಷನಿಲ್ಲಿಯೆ ಸುಖದೊಳಿಪ್ಪ ಪಂಪಾಕ್ಷೇತವಿದೆ ಯೆಂದನು ॥

ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ಹೊಗಳಿ ನುತಿಸಿದ ಶ್ರೀ ಪಂಪಾಕ್ಷೇತ್ರದಿಂದೊಡಗೂಡಿದ ಗೂಡು ಕನ್ನಡನಾಡು.

ತುಂಗಭದ್ರೆಯೇ ಗಂಗೆ;
ಹಂಪೆಯೇ ಕಾಶಿ;
ವಿರೂಪಾಕ್ಷನೇ ಕಾಶೀಪತಿ;
ಕನ್ನಡಿಗರ ತಪೋಭೂಮಿ ಕನ್ನಡನಾಡು.

ಇಷ್ಟೊಂದು ಘನತೆಯಿಂದ ಬೀಡುಬಿಟ್ಟಿರುವ ಬೀಡು ಕನ್ನಡನಾಡು ಜಗದೀಶ ತತ್ವದಗಣಿತದ ಜೇನುಗೂಡು ಕನ್ನಡನಾಡು.

ಈ ಕನ್ನಡ ನಾಡಿನಲ್ಲಿ ಹೆಸರಾದ ಜಿಲ್ಲೆ ಧಾರವಾಡ...............ಗಾನಗೊಲ್ಲೆ, ಜ್ಞಾನಜಲ್ಲೆ, ಮಾನವಮೌಲ್ಯೆ, ಬನದಬಿಲ್ಲೆ, ಶಿಕ್ಷಣದ ಶಿಲ್ಲೆ, ಧಾರವಾಡ ಜಿಲ್ಲೆ.

ಶೈಕ್ಷಣಿಕ. ಧಾರ್ಮಿಕ, ಕಾರ್ಮಿಕ, ವೈಜ್ಞಾನಿಕ, ತತ್ವದಾಯಕ-ವಿಮರ್ಶಾತ್ಮಕಗಳ ಸಂಗಮದ ಸಾಲೆ ಧಾರವಾಡ ಜಿಲ್ಹೆ. ಶಿದ್ದಯೋಗಿಯಾಗಿ, ರೇಣುಕರ ಪ್ರತಿಯಾಗಿ, ಮಹಾತಪಸ್ವಿಯಾಗಿ ಶೋಭಿಸುವ ಶ್ರೀ ಶ್ರೀ ರಂಭಾಪುರಿ ಜಗದ್ಗುರುಗಳ ಮುಕ್ತಿಮಂದಿರ, ಸಂಗೀತ ಸಾಹಿತ್ಯ ನಾಟ್ಯಗಂಗೆಯರನ್ನು ಹರಿಸುವ ಮಂಗಲದ ಮಾರ್ಥನಿಗೊಡುವ ಗದುಗಿನ ವೀರೇಶ್ವರ ಪುಣ್ಯಾಶ್ರಮ.

ಕುಮಾರವ್ಯಾಸನ ಆರಾಧ್ಯ ದೇವತ ಗದುಗಿನ ನಾರಾಯಣ ಸ್ವಾಮಿ, ದೇವಸ್ಥಾನ. ಪರಮ ತ್ಯಾಗಿಯಾಗಿ ವೈರಾಗ್ಯ ನಿಧಿಯಾಗಿ, ಪರಮ ವರವಿರಕ್ತನಾಗಿ ಜಗದುದ್ಧಾರ ಮಾಡಿದ ತೋಂಟದಸ್ವಾಮಿಯಮಠ. ಅಖಿಲಭಾರತ ಶಿವಾನುಭವ ಸಂಸ್ಥೆಯ ಸ್ಥಾಪಿಸಿ, ತ್ರಿವಿಧ ದಾಸೋಹ ಮೂರ್ತಿಯಾಗಿ ಮೆರೆದ ಮರರಾದ ಧಾರವಾಡ ಮೃತ್ಯುಂಜಯಪ್ಪಗಳ ಮುರುಘಾಮಠ. ಇಂದಿನ ಬಾಲಕ ನಾಳಿನ ( ಪಾಲಕ ) ಶಿಕ್ಷಕ.... ಎನ್ನುವ ಅನುಭವವಾಣಿಗೆ ಪ್ರೇರಕವಾಗಿ ಹಲವಾರು ವಿದ್ಯಾಕೇಂದ್ರಗಳನು ರಚಿಸಿ, ನಾಡಿನಲಿ ಶಿಕ್ಷಣದ ನಕ್ಷೆಯನು ಅಕ್ಷಯವಾಗಿರಿಸಿದ ಹುಬ್ಬಳ್ಳಿ ಗುರುಶಿದ್ಧರಾಜಯೋಗೀಂದ್ರರ ಜಗದ್ಗುರು ಮೂರುಸಾವಿರಮಠ ಪವಾಡ ಪುರುಷನಾಗಿ, ಶಿವಯೋಗಮಂದಿರದ ಮಾತೆಯಾಗಿ, ಶಿವನೊಲಿಸಿ ಭವನೀಗಿವ, ಶಿವನೇ ಬಸವನಾಗಿ, ಬಸವನೇ ಶಿವನಾಗಿ ತೋರಿ ಮೆರೆದ ಹಾವೇರಿ ಶಿವಬಸವೇಶನ ಹುಕ್ಕೇರಿಮಠ. ಶಿವಯೋಗ ಮಂದಿರವೆಂಬ ಶಿವನ ಗರಡಿಯಲ್ಲಿ ಸ್ವಾನುಭವದ ಸಾಧನೆಮಾಡಿ, ಶಿವತೇಜದಲಿ, ರಾಜಯೋಗದಲಿ,ಓಲಾಡಿ ಸಮಾಜ ಸುಧಾರಣೆಗೆ ಟೊಂಕಕಟ್ಟಿ ನಿಂತ ನವಿಲುಗುಂದ ಬಸವಲಿಂಗಸ್ವಾಮಿಗಳು ಗವಿಮಠ. ಮುಂತಾದ ಹರ-ಗುರು ಚರಪೀಠಗಳಿಂದ ಒಪ್ಪುತ್ತಿರುವ ಜಿಲ್ಹೆ ಧಾರವಾಡ ಜಿಲ್ಹೆ.

ಈ ಧಾರವಾಡ ಜಿಲ್ಹೆಯಲ್ಲಿ.................... ವರವಿರಕ್ತಾಗ್ರಣಿಯಾಗಿ; ಶಿವಯೋಗಮಂದಿರದ ಸ್ಥಾಪಕನಾಗಿ, ಅಖಿಲಭಾರತ ವೀರಶೈವ ಮಹಾಸಭೆಯ ಸಂಸ್ಥಾಪಕನಾಗಿ, ಕುರುಡ ಪಂಚಾಕ್ಷರಿಗೆ ಶಿಂಗೀತ ಕಲಿಸಿ, ಅಮಂಗಲದಿಂದ ಕೂಡಿದ ಜಗದಂಗುಲಕ್ಕೆ ಮಂಗಲಬೀರಿ, ಪಂಚಾಚಾರ ಷಟ್‌ಸ್ಥಲಗಳಾದಿಯಾಗಿ ವೀರಶೈವಧರ್ಮತತ್ವ ಬೋದಕನಾಗಿ, ಆಧ್ಯಾತ್ಮದ ಶೋಧಕನಾಗಿ,

ಲಲಿತ ಕಲೆಗಳ ವೇದಕನಾಗಿ,ಭವರೋಗ ವೈದ್ಯನಾಗಿ, ಶಿವಾನುರಾಗಕಜೇಥ್ಯ ನಾಗಿ; ದ್ವಿತಿಯಬಸವನಾಗಿ; ಸಮಾಜದ ಶಿಸುವಾಗಿ ಜವಹರ ಜೋಗೀ,ತ್ಯಾ ಗೀಯೋಗಿ ಮಹಾಯೋಗಿಯೆನಿಸಿ: ಅಪ್ರತ್ಯಕ್ಷವಾಗಿ ಅಮರತ್ವದಲ್ಲಿ ಬೆಳಗುವ ಕುಮಾರ ಶಿವಯೋಗಿಯು ನೆಲಿಸಿದ ವಿರಕ್ತ ಮಠದಿಂದೊಡಗೂಡಿದ್ದು ಹಾನ ಗಲ್ಲ ತಾಲೂಕು.

ಈ ಹಾನಗಲ್ ತಾಲೂಕಿನಲ್ಲಿ ............................................

ಸಂಸ್ಕಾರದ ಸಂಗ್ರಾಮ; ಸಂಸ್ಕೃತಿಯ ಸಂಭ್ರಮ; ಸೌಂದರ್ಯದ ಸಂಗಮ, ಸಂಗೀತದ ಸರಿಗಮ; ಸಕಲ ಸಡಗರದ ಸುಗ್ರಾಮ ಹೊಸಪೇಟ ಗ್ರಾಮ.

ಈ ಗ್ರಾಮದಲ್ಲಿ ..................................................

ವೀರಶೈವ ವಿಚಾರವೃಂದ; ವೀರಗಣಸಾರ ತತ್ವದರವಿಂದ; ಸ್ಫೈರಣೆಯ ಸಂದೇಶ ಬೀರುವ ಭಾಸುಲಿಕೇಂದ್ರ; ಧರ್ಮದ ದಿಗ್ವಿಜಯಕ್ಕೆ ಧಾರಾಳವಾಗಿರುವ ಬಿಂಧು; ಭಕ್ತರ ಭಕ್ತಿಗೆ ಬೆರಿಕೆಯಾಗಿ ಬೆಳೆದ ಬಂದು; ವೆಂಕಟಾಪುರ ಹಿರೇ ಮಠವೊಂದು ಅಮೃತ ಸಿಂಧು.

ಈ ಮಠವು ಹೊಸಪೇಟ ಗ್ರಾಮದ ಜೀವನಾಡಿಯಂತೆ ಮಿಡಿಯುತ್ತಿತ್ತು; ಸಿಡಿಯುತ್ತಿತ್ತು. ಸಮಾಜದಲ್ಲಿ ಹುದುಗಿದ ಅನ್ಯಾಯ ಅನೀತಿಗಳ ಚೀತ್ಕಾರ ವನ್ನು ಬಲಾತ್ಕರಿಸಿ ದಿಕ್ಕರಿಸಿ; ನ್ಯಾಯ ನೀತಿ ಪ್ರೀತಿ ಸಂಸ್ಕೃತಿಗಳ ಜ್ಯೋತಿ ಯನ್ನು ಸತ್ಕರಿಸಿ ಪುರಸ್ಕಾರ ಪ್ರದರ್ಶಿಸುವ ಪರಮ ಸಾಂಪ್ರದಾಯಕ ಗುರು ಪೀಠವಾಗಿ ಹರಪಾಠವಾಗಿ ಪರಿಶೋಭಿಸುತ್ತಿತ್ತು ಈ ಹಿರೇಮಠ. ಹೊಸಪೇಟ ಹಳ್ಳಿಯೆಂಬ ಹಡಗಕ್ಕೆ ಈ ಮಠವು ನಾವಿಕನೋಪಾದಿಯಲ್ಲಿ ಈ ಭವಸಾಗರ ವನ್ನು ಈಸುತ್ತ ಮೀಟುತ್ತ ದಾಟುವ ಧೈರ್ಯದಿಂದ ಸರಾಗವಾಗಿ ಸಾಗಿತ್ತು; ತೂಗುತ್ತ ನಡೆದಿತ್ತು.

ಒಳ್ಳೆ ಕಾರ್ಯಕ್ಕೆ; ಒಳ್ಳೇ ಉದಾತ್ತ ಕಾಲಕ್ಕೆ ಕಂಟಕಗಳು ಬರುವದು ಸ್ವಾಭಾವಿಕವಲ್ಲವೆ ? ಹಾಗೆ– ಭವಾಂಬುಧಿಯಲ್ಲಿ ತೇಲುತ್ತ ಭಗವಂತನ ಕಡೆಗೆ ಹೊರಟ ಈ ( ಹೊಸಪೇಟ ಗ್ರಾಮಕ್ಕೆ ) ಹಡಗಕ್ಕೆ, ಬಿರುಗಾಳಿ ಬೀಸಿ ಘಾಸಿ

ಗೊಳಿಸಿತ್ತು, ಬಲು ರೂಷಿಗೊಳಿಸಿತ್ತು. ಕುಕರ್ಮಿಗಳು, ಸಂಗೀತ ಸೇರವ ಕಮಂಗಿಗಳು, ಕರ್ಮವ ಕಾರುವ ದುಸ್ಸಂಗಿಗಳು ಈ ಗ್ರಾಮದಲ್ಲಿ ಅಲ್ಲಿ ಇಲ್ಲಿ ಎಲ್ಲೆಲ್ಲಿ ತುಂಬಿದ್ದೇ ಈ ಭೀಕರ ಬಿರುಗಾಳಿಗೆ ಕಾರಣವಾಗಿತ್ತು,ಸ್ಥಿತಿ ಧಾರುಣವಾಗಿತ್ತು.

ಇಂಥಾ ಗಂಭೀರ ಪರಿಸ್ಥಿತಿಯಲ್ಲಿಯೂ ಕೂಡಾ ತಮ್ಮ ಸ್ಥಿತಿಗತಿಯಲ್ಲಿ ಮತೀಯ ತಾಳದೆ, ಸ್ಥಿರ ಮತಿಯಲ್ಲಿ ಪವಿತ್ರ ಜೀವನ ಸಾಗಿಸುತ್ತ ನಡೆದಿದ್ದರು. ಈ ಮಠ ದೊಡೆಯರಾದ ರೇವಣಾರ್ಯ ಸಿದ್ಧಾಂಬೆಯರು. ಈ ದಂಪತಿಗಳು ಸಂಸಾರ ಶಿಖರಕ್ಕೆ ಸುವರ್ಣ ಕಲಶ ವಿಟ್ಟಿದ್ದರು. ಸದಾಚಾರ ಸಂಪನ್ನರಾಗಿ, ಸತ್‌ಶೀಲಪಾಲರಾಗಿ ಸದ್‌ವಿಚಾರದಾಚಾರ್ಯರಾಗಿ, ಸದ್‌ವಿನಯ ತನಯರಾಗಿ, ಗುರುಭಕ್ತಿ ಪ್ರಿಯರಾಗಿ, ಹರಶಕ್ತಿ ಪರಾಯಣರಾಗಿ, ಲಿಂಗನೇಮಿಗಳಾಗಿ, ಜಂಗಮ ಪ್ರೇಮಿಗಳಾಗಿ, ಮತದಾಸಿಗಳಾಗಿ, ಮಿತಭಾಷಿಗಳಾಗಿ, ಆಶಾರಹಿತರಾಗಿ, ಮಾನವಂತರಾಗಿ, ಗಣಮಂತರಾಗಿ, ಗುಣವಂತರಾಗಿ, ಈ ದಂಪತಿಗಳು ನಾಣ್ಯದ ಎರಡು ಮುಖಗಳಂತೆ ಬಾಳಿದ್ದರು, ಬಾಳುತ್ತಿದ್ದರು.

ಕರಿಯನಿತ್ತಡೆ ಒಲ್ಲೆ
ಶಿರಿಯನಿತ್ತಡೆ ಒಲ್ಲೆ
ಹಿರಿದಾದ ರಾಜವಿತ್ತಡೆ ಒಲ್ಲೆ,
ಶರಣರ ಸೂಳ್‌ನುಡಿಯ ಒಂ
ದರಗಳಿಗೆ ಇತ್ತಡೆ ನಿಮ್ಮನಾನನ
ವರತನಿತ್ತ ಕಾಣಾ ರಾಮನಾಥ ಗುರುವೆ ॥

ಎಂದು ನುಡಿದ ಬೇಡರ ದಾಸಿಮಾರ್ಯರ ವಚನದ ಪರಿಪಾಠ ಈ ಶಿವ ದಂಪತಿಗಳ ಒಡನಾಟವಾಗಿತ್ತು.

ಶಿವನೆ ಸಿಸಿತ್ತ ಕಾಯಕವೇ ನಮಗೆ ಸಿನ್ನೈಕ್ಯ. ಬೇರಾವ ಲಾಭದಾಯಕವು ನಮಗೆ ಬೇಡವು. ಎಂದು ಸುಖಬಯಸದೆ ಕಷ್ಟದ ಕೂಗಿಗೆ ಕಿವಿಗೊಟ್ಟು ಬಡತನದ ಕುಲುಮೆಯಲ್ಲಿ ತಮ್ಮ ತನುವಿರಿಸಿ, ಬಂಗಾರ ಬಾಳಿನ ಭಾಗ್ಯ ಬಾಗಿಲು ಮುಟ್ಟ ಸಿಂತಿದ್ದರು, ಮೆಟ್ಟ ಕುಂತಿದ್ದರು. ನಿರ್ಮಲವಾದ,ನಿಷ್ಠಲವಾದ ನೈಜ ಜೀವನದ ಜೋಕಾಲಿ ಹತ್ತಿ ನೂಕುತ್ತಿದ್ದರು, ಜೀಕುತ್ತಿದ್ದರು.

ಹುಟ್ಟಿನಲ್ಲಿ, ಸಿಟ್ಟಿನಲ್ಲಿ, ನಡೆಯಲ್ಲಿ, ನುಡಿಯಲ್ಲಿ, ಜೀವನಲ್ಲಿ ಭಾವನಲ್ಲಿ; ಹರಜಾತಿಗೆ, ಶರಣರ ರೀತಿಗೆ, ಸೇರಿದ್ದರೀ ದಂಪತಿಗಳು ಶ್ರೀ ಸಂಪತಿಗಳು.

ಹುಟ್ಟಿಬಂದ ಜೀವಿಗೆ ಒಂದು ಬೆಲೆ ಬರಬೇಕಾದರೆ, ಶ್ರೇಷ್ಠ ಜಾತಿಯವ ನೆನಿಸಿಕೊಳ್ಳಬೇಕಾದರೆ ಗುಣ ಮುಖ್ಯಬೇಕು. " ಹಣವಿದ್ದವನನ್ನು ನೆಣವಿದ್ದ ವರು ಪ್ರೀತಿಸುತ್ತಾರೆ, ಗುಣವಿದ್ದವನನ್ನು ಗಣೇಶ್ವರಪ್ರೀತಿಸುತ್ತಾನೆ"- ಎಂದು ಸಾರಿದ ಗಾನಯೋಗಿ ಪಂಚಾಕ್ಷರಿಯವರ ನುಡಿ ಸತ್ಯ ತ್ರಿವಾರ ಸತ್ಯವೆಂದು ನಾವಿಲ್ಲಿ ಒಡನುಡಿಯಬೇಕು.

ಹುಟ್ಟುತಲೇ ಶ್ರೇಷ್ಠಮತೀಯರಾಗಿ ಹುಟ್ಟಿ ಮಹಾಮಹಿಮರ ರೀತಿನೀತಿ ಗಳನ್ನು ಬಾಳಿನಲ್ಲಿ ಬೆರಿಸಿ ಬಾಳುವ ರೇವಣಾರ್ಯ ಸಿದ್ಧಾಂಬೆಯರ ಬದುಕು ಕಡವರಕ್ಕೆ ಕುಂದಣವಿಟ್ಟಂತೆ ಪರಿ ಶೋಭಿಸುತ್ತಿತ್ತು, ಪರಮಯುತವಾಗಿತ್ತು. ದುಷ್ಟಗುಣಗಳಿಗಿವರಲ್ಲಿಂಬಿಲ್ಲ. ದುಷ್ಟರ ಬ್ರಷ್ಟಾಚಾರವನ್ನು ಕನಸಿನಲ್ಲಿಯೂ ಕಾಣುತ್ತಿರಲಿಲ್ಲಿ. ದುಷ್ಟರನ್ನು ದೂರದಿಂದಲೂ ನೋಡಲಿಲ್ಲ. ದುಷ್ಟ ಕಾರ್ಯ ಗಳನ್ನು ಎಂದೂ ಮಾಡಲಿಲ್ಲ, ಮಾಡಿದ್ದಿಲ್ಲ, ಮಾಡುವವರೂ ಅಲ್ಲ.

ಸಾಧುಕಾರಿ ಸಾಧುಃ ಭವತಿ, ಪಾಪಕಾರಿ ಪಾಪೋ ಭವತಿ ।
ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ ॥
" ಬೃಹದಾರಣ್ಯಕೋಪನಿಷತ್ "

ಒಳ್ಳೇ ಕಾರ್ಯ ಮಾಡುವವನು ಒಳ್ಳೆಯವನು ( ಪುಣ್ಯವಂತನು ) ಆಗು ತ್ತಾನೆ. ಕೆಟ್ಟಕಾರ್ಯ ಮಾಡುವವನು ಕೆಟ್ಟವನು ( ಪಾಪವಂತನು ) ಆಗು ತ್ತಾನೆ, ಪುಣ್ಯದ ಕಾರ್ಯದಿಂದ ಪುಣ್ಯ. ಪಾಪಕಾರ್ಯದಿಂದ ಪಾಪ ಪ್ರಾಪ್ತವಾ ಗುತ್ತದೆಂದು ಉಪದೇಶಿಸಿದ ಉಪನಿಷದ್ ವಾಣಿಯನ್ನು, ಈ ದಂಪತಿಗಳು ತಮ್ಮ ಮನದ ಮಂದಿರದಲ್ಲಿಟ್ಟು ವಂದಿಸಿದ್ದರು. ಮನುಷ್ಯನಾಗಿ ಹುಟ್ಟಿ ಮನುಷ್ಯ ಹೃದಯ ಪಡೆದು ದೇವಸದಯದಲ್ಲಿ ಸುಳಿದಾಡುತ್ತಿದ್ದರು. ದಂಪತಿ ಗಳೀರ್ವರು. ಮನುಷ್ಯನಾಗಿ ಹುಟ್ಟಿ, ಮನುಷ್ಯನಾಗಿ ಬೆಳೆದು, ಕೊನೆಗೆ ಮನು ಷ್ಯನಾಗಿ ಅಳಿದು ಹೋಗುವ ( ಈ ದಂಪತಿಗಳಂಥವರು ) ಜನರು ವಿರಳ. ಇದಕ್ಕೆ ಹೊರತಾದವರು ಬಹಳ. ತಾಯಿಯ ಗರ್ಭದಲ್ಲಿ ಜೀವನಿದ್ದಾಗ

ಅನಂತ ತ್ರಾಸಿನ ಕ್ರಾಸಿನಲ್ಲಿ ವಿಕ್ರಾಸಾಗಿ ತಳಮಳಗೊಳ್ಳುತ್ತಾರೆ. ತಾಯಿಯ ಬಸುರಿನ ದಾಹ, ಮಲ ಮೂತ್ರಾದಿಗಳ ಕೆಟ್ಟವಾಸನೆ, ಜಠರಾಗ್ನಿಯ ಸುಡುತ ಇವೆಲ್ಲವುಗಳಿಂದ ಕಂದಿ ಕುಂದಿ- ಹೇ ಶಿವನೇ! ಈ ಭವಸಾಗರದಲ್ಲಿ ಬಿದ್ದು ನಿನ್ನ ದಿವ್ಯ ನಾಮವನ್ನು ಮರೆಯದೆ ತಪ್ಪದೆ ನುತಿಸುತ್ತೇನೆ. ಸತ್ತು ಹುಟ್ಟುವ ಈ ಭವ ( ಯಮ ) ಬಾಧೆಯನ್ನು ನಾನು ಸಹಿಸಲಾರೆ. ಎಂದು ಪೇಚಾಡುತ್ತಾನೆ. ಇದೇ ಮಾತನ್ನು ನಿಜಗುಣ ಶಿವಯೋಗಿಗಳು ಮಾರ್ಮಿಕವಾಗಿ ಹೀಗೆ ಹೇಳುತ್ತಾರೆ.

ತಾಯಿಗರ್ಭದೊಳು ನಾಸಿರ್ದ ವೇಳೆಯೊಳಲ್ಲಿ
ಹೇಮದತಿ ಬಾಧೆಗೆ ಮನಂನೊಂದು ಪೇಸುತಿಹ
ಪೇಯವನು ಬಿಟ್ಟೀತಕಿಂತು ಪೊರಮಟ್ಟರುವೆ
ನಾಯುಷ್ಯಮಿಹುದದರೊಳಗೆ
ಕಾಯಜ ವಿರೋಧಿ ಗುರು ಶಂಭುಲಿಂಗವನೊಲಿಸಿ
ಮಾಯೆಯನು ಮೀರಿ ಭವವನು ಗೆಲುವೆನೆಂಬ ಸಮು
ದಾಯುದಧಿಕಾರವೆನ್ನದು ಮರೆದೆನದಕಿನ್ನು ಪಾಯವೇ ಧರ್ಮವೆಂದು ॥

ಈ ರೀತಿ ತಾಯ್ಯುದರದಲ್ಲಿ ಪ್ರತಿಜ್ಞೆಗೈದ ಜೀವನು ಭುವಿಗೆ ಬಂದಾಗ ತನ್ನ ಧ್ಯೇಯವನ್ನು ಮರೆತು, ಭವದಲ್ಲಿ ಬೆರೆತು, ಮತ್ತೆ ಭವಿಯಾಗಿ ಭವದ ಚಕ್ರದಲ್ಲಿ ತಿರುತಿರುಗಿ ಬೀಳುತ್ತಾನೆ.

ಈ ಭವದ ವಾಸನೆ ಮಧ್ಯದ ಅಮಲಿನಂತೆ. ಇದನ್ನು ಸೇವಿಸೋಣದರಿಂದ ಜ್ಞಾನ ಹೀನವಾಗುತ್ತಿದೆ ಎಂಬುದು ಅರಿತೂ, ಸೇವಿಸುತ್ತಾನೆ; ಜ್ಞಾನ ಶೂನ್ಯ ನಾಗುತ್ತಾನೆ, ಸ್ವಾನ ಜೀವನ ಸಾಗಿಸುತ್ತಾನೆ. ಇದರಂತೆ ತಾಯ್ ಗರ್ಭದಲ್ಲಿ ಭಗೀರಥ ಪ್ರಯತ್ನದಿಂದ ಶಿವನೆ! ಶಿವನೆ!! ಎಂದು ನುಡಿದ ನಾಲಿಗೆ. ಭವದಿ ಲೀನವಾದಾಗ (ಹುಟ್ಟಿದಾಗ) ತುತ್ತಾಗುವದು ಮಾಯದ ಬಲಿಗೆ. ಹೀಗಾಗಿ ಮನುಷ್ಯನಾಗಿ ಹುಟ್ಟಿ ಮನುಷ್ಯ ಹೃದಯ ಪಡೆಯದೆ ಪಶು ಸಮಾನನಾಗುತ್ತಾನೆ. ತುದಿಯಲಿಂದ ಅಂತ್ಯದವರೆಗೆ ಮನುಷ್ಯನಾಗಿ ಸಾಗಿದ ಜೀವಿಗೆ ದೇವಪಟ್ಟ ಕಟ್ಟಿಟ್ಟದ್ದು. ಹುಟ್ಟಿಬಂದ ಜೀವನು ಪಶೂ ಆಗಲೂ ಬಹುದು; ದೇವನಾಗಲೂ ಬಹುದು. ಜೀವನು ಪಶು ಆಗಲಿಕ್ಕೂ ಈಶನಾಗಲಿಕ್ಕೂ ಏನು ಅಂತರ್ಯ ಇದೆ?

ಕಿಂತತ್ವಂ ಕೋಜೀವಃ ಕಃ ಪಶುಃ ಕಃ ಈಶಃ ಕೋಮೋಕ್ಷೋಃ
ಪಾಯ ಇತಿ–ಪಶು ಪತಿಃ ಅಹಂಕಾರಾ ವಿಷ್ಟಃ ಸಂಸಾರಿಜೀವಃ ಸಯೇವ
ಪಶುಃ ಸರ್ವಜ್ಞಃ ಪಂಚಕೃತ್ಯಸಂಪನ್ನಃ ಸರ್ವೇಶ್ವರಃ ಈಶಃ
ಪಶುಪತಿಃ ಕೇಪಸವಃ ಇತಿ " ಜಾಬಾಲೋಪನಿಷತ್"

ತತ್ವಅಂದರೇನು? ಜೀವನು ಯಾವನು ? ಪಶುಯಾವನು ? ಈಶನು ಯಾವನು ? ಮೋಕ್ಷಯುತನಾಗಲಿಕ್ಕೆ ಮಾಡತಕ್ಕ ಉಪಾಯವೇನು ? ಅಹಂಕಾರ ಮಮಕಾರದಿಂದೊಡಗೂಡಿ ಸಂಸಾರ ವಿಷಯಕ್ಕೊಳಗಾದ ಜೀವನು ಪಶು ಪಕ್ಷಕ್ಕೆ ಪರಿಶೀಲಿಸುತ್ತಾನೆ. ಪಂಚಕೃತ್ಯಗಳಿಂದ ಕೂಡಿದವನು ಸರ್ವೇಶ್ವರನೂ ಸರ್ವಜ್ಞನೂ ಆದ ಈಶ್ವರನೇ ಪಶುಪತಿಯು. ಜೀವನೇ ಪಶು ಆಗಿ, ಜೀವನೇ ಪಶುಪತಿಯಾಗಿ ಮಾರ್ಪಡುತ್ತಾನೆ. ಅಂತೇ ಜೀವನಿಗೆ ಒಡೆಯುನಾದ ಸರ್ವೇಶ್ವರನಿಗೆ ಪಶುಪತಿಯೆಂದು ನಾಮ ಬಂದಿದೆ.

ಈ ಉಪನಿಷತ್ ವಾಕ್ಯದಭಿಮತ ತಿಳಿದ ರೇವಣಾರ್ಯನು ಸಂಸಾರದಲ್ಲಿದ್ದರೂ, ನಿಸಂಸಾರಿಯಾಗಿ, ವಿಷಯದಲ್ಲಿದ್ದರೂ ನಿರ್ವಿಷಯನಾಗಿ, ಸನ್ಮಾರ್ಗದಲ್ಲಿ ಸಾಗಿದ್ದನು ರೇವಣಾರ್ಯ ಇವನ ನೆರಳಿನಂತೆ ಸಿದ್ಧಾಂಬೆ. ಕೆಸರಿನಲ್ಲಿದ್ದ ಕುಂಬಾರ ಹುಳವು ಮೈಗೆ ಹೊಲಸನ್ನು ಹಚ್ಚಿಕೊಳ್ಳದೆ ಸ್ವಚ್ಛವಾಗಿರುವಂತೆ, ಭವದಲ್ಲಿದ್ದರೂ ನಿರ್ಭವರಾಗಿ ಮೆರೆಯುತ್ತಿದ್ದರು ಈ ದಂಪತಿಗಳು.

ಶಿವನೇ ದೈವ ಕೊಲ್ಲದಿಪ್ಪುದೇ ಧರ್ಮ,
ಅಧರ್ಮದಿಂದ ಬಂದುದನೊಲ್ಲ ದಿಪ್ಪುದೇ ನೇಮ,
ಆಶೆಯಿಲ್ಲದಿಪ್ಪುದೇ ತಪ
ರೋಷವಿಲ್ಲದಿಪ್ಪುದೇ ಜಪ
ವಂಚನೆಯಿಲ್ಲದಿಪ್ಪುದೇ ಭಕ್ತಿ
ಕುಂದಿಲ್ಲದಿಪ್ಪುದೇ ಸದಾಚಾರ
ಇದುಸತ್ಯ, ಶಿವಬಲ್ಲ ಶಿವನಾಣೆ
ಉರುಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ॥

ಈ ವಚನ ಮಣಿಯ ಪ್ರಕಾಶ ರೇವಣಾರ್ಯ ಸಿದ್ಧಾಂಬೆಯರ ಬಾಳಬಾಂದಳದಲ್ಲಿ ಹಾಸು ಹೊಕ್ಕಾಗಿತ್ತು ಮಿಕ್ಕಿತ್ತು.

ತಾಯಿ ಸಿದ್ಧಾಂಬೆ ಅಧ್ಯಾತ್ಮದ ಖಣಿಯಾಗಿದ್ದಂತೆ ಸೌಂದರ್ಯದರಗಿಣಿಯಾಗಿ ರೇವಣಾರ್ಯನ ಮನತಣಿಸುವ ಕಣ್ಮಣಿಯಾಗಿದ್ದಳು.

ರೂಪಿನೊಳು ರತಿ ಸರಸ್ವತಿಗುಪ್ಪರಂಗಟ್ಟಿ
ಪಸರಿಸೆವ ಕಾಮುಲತೇಯೆಂದೆಂಬ ನಾಮದಿಂ
ದೊಸೆದು ಸೌಭಾಗ್ಯಲತೆ ಕುಡಿಯಿಡಲ್ ಪ್ರೇಮದಿಂ
ಶಶಿಕಿರಣದಂತೆ ಬೆಳೆದಳ್ ಬೆಳೆದಳಮ್ಮಮ್ಮ
ರತಿಗಿತಿಯ ರಂಭೆಗಿಂಬೆಯ ಮಾತುಬೇಡಿಲ್ಲಿ
ಮತಿಗಿತಿಗೆ ಪೊಗಳ್ವಗಿಗಳ್ವಾಸೆಗಳ್ ಪುಗವಿಲ್ಲಿ
ಈ ತೆರೆದೊಳೆಸೆವ ಸೊಬಗಿನ ರೂಪನೊಳಗೊಂಡು

"ಪ್ರಭುದೇವರ ರಗಳೆ"

ಹಂಪೆಯ ಹರಿಹರ ದೇವನ ಕಾಮಲತೆಯ ಸಂಪೂರ್ಣ ಲಕ್ಷಣಗಳು ನಮ್ಮ ಸಿದ್ಧಾಂಬೆಯಲ್ಲಿ ಒಡನಾಡಿದ್ದಿತು, ಕೂಡಿದ್ದಿತು.

ಎಸಳು ಗಂಣಿಂದೆಸೆವ ಕಜ್ಜಳದ ಮಣಿಮಯದ
ಮಿಸುನಿಯಾ ಭರಣದನು ಲೇಪನದ ಚೆಂದುಟಿಯು
ಕುಸುಮಂಗಳಿಡಿಕಿರಿದ ಸೋರ್ಮುಡಿಯ ಕುಂಕುಮಾಂಕಿತ
ಪಯೋಧರದ ಪೂರ್ಣಾ ॥
ಶಶಿವದನ ದೆಳೆನಗೆಯು ನಳಿತೋಳ ನಣ್ಣಾಯು
ಮಿಸುಪ ಘನ ಜಘ ನದಸಿ ನಡುವೆ ನೆಳದಳಿರಡಿಯು
ಕುಸುಮ ಗಂಧದ ಮಹಾದೇವಿಯರ ಶೃಂಗಾರ ರಸ
ನೃಪನನಾವರಿಸಿತೋ ॥

ಚೆನ್ನಬಸವಾಂಕನು ಮಹದೇವಿಯಕ್ಕನ ಪುರಾಣದಲ್ಲಿ ವರ್ಣಿತವಾದ ಅಕ್ಕನ ;ಚಲುವಿನ! ನಿಲುವು ಈ ನಮ್ಮ ಸಿದ್ಧಾಂಬಾತಾಯಿಯಲ್ಲಿ ಒಲವಿನಿಂದ ಮುತ್ತಿತ್ತು ಮೆತ್ತಿತ್ತು.

ಹೀಗೆ ಈ ದಂಪತಿಗಳು ಕಾಮರತಿಯಂತೆ; ರಾಧಾ.ಕೃಷ್ಣರಂತೆ; ವಾಣಿ ಬೊಮ್ಮರಂತೆ; ಶಿವಶಿವೆಯರಂತೆ ಒಪ್ಪಿದ್ದರು ಒಪ್ಪುತ್ತಿದ್ದರು. ಈರೀತಿ ಯಾವ

ಕುಂದುಕೊರತೆಗಳಿಲ್ಲದ ಬಂಧುರವಾದ, ಸುಂದರವಾದ ಶ್ರೀ ಜೀವನದ ಝಣ ತ್ಕಾರದ ಕಣಕ್ಕಿಳಿದು ಅಣಿಯಾಗಿ ಕುಣಿಯುತ್ತಿದ್ದರು, ದಣಿಯುತ್ತಿದ್ದರು.

ತನ್ನ ಸುಪ್ರಕಾಶದಿಂದ ಸಮುಗ್ರರಾತ್ರಿ ಬೆಳಗಿಸುವ ನನಗೆ ರವಿಯಂಥ ಸ್ವಪ್ರಕಾಶ ನನಗೆ ಬೇಕು ಎಂದು ಆಶಿಸುವ ಚಂದಿರನಂತೆ, ಈ ದಂಪತಿಗ ಳಿಗೂ ಒಂದು ಘನವಾದ ಆಶೆಅಂಕುರಿಸಿತ್ತು, ಜೇಂಕರಿಸಿತ್ತು ............... ಅದುಯಾವದು ?.................................ಕುಲವೃಕ್ಷ ಛಲದಿಂದ ಬೆಳೆದು, ಅಚಲವಾದ ಮೊಗ್ಗೆ ಬಿರಿದು, ನಿರ್ಮಲವಾದ ಪುಷ್ಪವರಳಿ, ಕುಲಪುತ್ರವೆಂಬ ಸುಫಲವಾಗಲಿ, ಎಂಬುದೆ ಇವರ ಆಶೆ ಹಿರಿಯಾಶೆ.– ಈ ಆಶೆಯನ್ನು ಈಶಫಲ್ಲಿ ಬೆಸಿಸಿ ದಿವಸ ಸೂಸುತ್ತಿದ್ದರು.

ಸಂಗನನಾಮಂಗಳಂ ಪುರಜನಕೆ ಕಲಿಸುತಂ ।
ಸಂಗ ಶೆರಣೆಂದವರ ಪದ ತಳಕ್ಕೆರಗುತ್ತಂ ॥
ನಡೆವಲ್ಲಿ ನುಡಿವಲ್ಲಿ ಸಂಗ ಶರಣೆಂದೆನುತೆ ।
ಉಡುವಲ್ಲಿ ಉಂಬಲ್ಲಿ ಸಂಗ ಶರಣೆಂದೆನುತೆ ॥
ಕೊಡುವಲ್ಲಿ ಕೊಂಬಲ್ಲಿ ಸಂಗ ಶರಣೆಂದೆನುತೆ ।
ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ ॥

ಬಸವಂಣ ನೀಲಾಂಬೆಯರಂತೆ ರೇವಣಾರ್ಯ ಸಿದ್ಧಾಂಬೆಯರು ಸಂಗ (ಶಿವ) ನಲ್ಲಿ ಅಭೇದ ಭಾವದಿಂದ ಸದಾಕಾಲ ಭಕ್ತಿ ಮಾಡುತ್ತ, ಜನರಲ್ಲಿ ಶಿವಭಕ್ತಿಯನ್ನು ಪ್ರಸಾರ ಮಾಡಲು ಕಂಕಣ ಬದ್ಧರಾಗಿದ್ದರು. ಅಂತಲೇ ಅವ ರಿಗೆ ಮಹಾತ್ಮರೆನ್ನುವ ಬಿರುದು ಹುಡುಕುತ್ತ ಬಂದು ತೊಡಕಿತ್ತು. ಇಂಥಾ ಕಾಲಗತಿಯಲ್ಲಿ........................

ಜಗದಲ್ಲಿ ತಮಂಧತೆ ತಾಂಡವವಾಡಿತ್ತು- ಅಜ್ಞಾನದಂಬುಧಿಗೆ ಮಹ ಪೂರ ಬಂದಿತ್ತು, ಶಾಂತಿಯ ನಿಕೇತನಕ್ಕೆ ಅಚೇತನ ತುಂಬಿ ಪತನದ ಪಥ ಪ್ರಾಪ್ತವಾಗಿತ್ತು. ನ್ಯಾಯದ ನಾಟಿಗೆಗೆ ಅನ್ಯಾಯದ ಕೀಟ ಕಾಟಕೊಟ್ಟಿತ್ತು. ಶಾರದೆಯ ಸಾಹಿತ್ಯದ ಕುಚೆಹಾಲಿಲ್ಲದೆ ಸೋತು ಜೋತು ಬಿದ್ದಿತ್ತು, ಸತತ್ತು ಬದುಕಿತ್ತು. ಇನ್ನೊಂದು ( ಸಂಗೀತದ ) ಕುಚ ಮಾತ್ರ ಗಾನಯೋಗಿ ಪಂಚಾ ಕ್ಷರಿಯ ಅವತಾರದಿಂದ ಅದೇ ಚೇತರಿಸಿತ್ತು ಬದುಕುವ ಭರವಶೆಯುಲ್ಲಿ

ಬಾಳಿತ್ತು. *ಪಂಚಾಕ್ಷರ ಗವಾಯಿಗಳಿಗೆ ಭಾಷೆಕೊಟ್ಟ ಶ್ರೀಹಾನಗಲ್‌ಕುಮಾರ ಶಿವಯೋಗಿಗಳ ಅಮೃತವಾಣಿ ಅವತಾರದ ಶ್ರೇಣಿಯಲ್ಲಿ ಏಣಿಹಚ್ಚಿತ್ತು, ಅಣಿ ಯಾಗಿ ನಿಂತಿತ್ತು, ಇಣುಕಿ ನೋಡುತ್ತಿತ್ತು.

ಒಂದು ದಿನ ತಾಯಿ ಸಿದ್ಧಾಂಬೆ ರಾತ್ರಿ (ವಿಶ್ರಾಂತಿ) ಸಮಯದಿ ಶಿವ ಧ್ಯಾನ್ಯ ಮಾಡುತ್ತ ಮಲಗಿದಳು ದೀಪ ಆರಿತು ತಾಯಿಗೆ ನಿದ್ರೆಯಾವರಿಸಿತು. ಕತ್ತಲು.......................

ಎಲ್ಲಿ ನೋಡಿದಲ್ಲಿ ನಿಶ್ಶಬ್ದದ ನಿಶಾದೇವಿ ತನ್ನ ಮಾರಕಾವತಾರ ಚೆಲ್ಲಿ ದ್ದಾಳೆ. ಹಗಲಿನಲ್ಲಿ ದುಡಿಡುಡಿದು ದಣಿದ ವಿಶ್ವದ ಜೀವಿಗಳೆಲ್ಲ ವಿಶ್ರಾಂತಿಯಲ್ಲಿ ವಿರಮಿಸಿವೆ. ಪ್ರಪಂಚವೇ ಮಲಗಿದೆ, ಮಿಂಚುವ ಬೆಳಕು ಬಯಲಾಗಿದೆ, ಕತ್ತಲು ಬಲವಾಗಿದೆ. ಎಲ್ಲೆಲ್ಲಿಯೂ ಕತ್ತಲು...................

ಇಂಥಾ ಕಾರ್ಗತ್ತಲೆಯಲ್ಲಿ....................... ಎಲ್ಲಿಯದೋ ಬೆಳಕು ಮಿನುಗಿ ಬೆಳಗಿ ಬೃಹದಾಕಾರವಾಗಿ ತಾಯಿಯ ಕಣ್ಣಿಗೆ ಕಾಣಿಸಿತು. ಈ ಮಹಾ ಬೆಳಗಿನಲ್ಲಿ ಕಾವಿ ಧರಿಸಿ ಜೋಗಿ ಬೆಳಕಿನೊಳಗೆ ಮಹಾ ಬೆಳಕಾಗಿ ಪ್ರಕಾಶಿಸಿ ಕಾಣಿಸಿಕೊಂಡಿತು. ಕ್ರಮೇಣ ಆ ಜೋಗಿ ಸರಿಸರಿದು ಸಮೀಪಿಸಿ ನಿಂತಿತ್ತು, ಕುತೂಹಲಯುಕ್ತ ಆನಂದಉಕ್ಕಿತು.

ನೀತಿ ಬಲಿದುದೋ ? ಶಾಂತಿ ರೂಪಾಯ್ತೋ ? ಸದ್ಗುಣ |
ವ್ರಾತವೇ ಮುನಿಯಾಯ್ತೋ ? ಮುಕ್ತಿ ಜಡವೆತ್ತಿದೋ ? |
ಭೂತದಯೆವಲ್ಕಲಾಂಚಲವಾಂತುದೋ? ಪುಣ್ಯವೆಳಿಸಿ ಭಸಿತವನಿಟ್ಟುದೊ?
ನೂತನಶ್ರುತ್ಯರ್ಥ ನುಡಿಗಲಿತುದೋ ? ಘನ |
ಸ್ವಾತಂತ್ರ ವೃತ್ತಿಗೋಚರಿಸಲೆಳಸಿತೋ ? ಎಂಬ |
ಚಾತುರ್ಯದಿಂದಿರ್ದ ಮುನಿನಾಥನಂ ಕಂಡು ಹರುಷದಿಂ ಭೂನಾಥನು||

"ಹರಿಶ್ಚಂದ್ರ ಕಾವ್ಯ"

---

* ೬೦-೭೦ ವಿಧ್ಯಾರ್ಥಿಗಳ ಪಾಲನೆಯ ಭಾರವನ್ನು ಪಂಚಾಕ್ಷರಿಗವಾಯಿಗಳ ತಲೆಯ ಮೇಲೆ ಕುಮಾರಶ್ರೀಗಳು ಹೇರಿದಾಗ, ತಂದೆ! ಇಂಥಾ ಭಾರವನ್ನು ನನಗೆ ಹೊರಿಸಿದಿರಿ, ತಮ್ಮ ಕೃಪೆಯಿಂದ ನಾನೇನೋ ಹೊತ್ತೆ, ಮುಂದೆ ನನ್ನ ನಂತರ ಈ

ಅನಿರೀಕ್ಷಿತವಾಗಿ ಸದ್ಗುರುವಿನ ದರ್ಶನವಾದುದನ್ನು ಕಂಡು ಆನಂದ ತುಂದಿಲನಾದ ಹರಿಶ್ಚಂದ್ರನಂತೆ ತಾಯಿ ಸಿದ್ಧಾಂಬೆಯು ಸಂತೋಷಾಗರದಲ್ಲಿ ಈಸುಬಿದ್ದಿದ್ದಾಳೆ........................ ಈ ಅತೀತ ಯತಿಯನ್ನು ಎಲ್ಲಿಯೋ ಕಂಡಂತಿದೆ ?............ ಈತಯಾರು ?............ಹ್ಹಾ............ ಈ ಜೋಗಿ-ಧ್ವಿತಿಯ ಬಸವನಾಗಿ ಭೂಮಿಯಲ್ಲಿ ಬೆಳಗಿದ ಹಾನಗಲ್ ಕುಮಾರ ಶಿವಯೋಗಿ........... ಹೌದು ಎಂದು ಅರಿತು ಮನಗಂಡು ಹರ್ಷ ಪುಳಕಿತಳಾಗಿ, ಭಕ್ತಿ ಪರವಶಳಾಗಿ...............

ದೇವದೇವ ಅನಾಥನಾಥ ಅನಿಮಿತ್ತ ಬಂಧುವೆ।
ತಾಯಿ ತಂದೆ! ಬಂಧು ಬಳಗವೆ! ಕುಲವೆ! ಚಲವೆ!
ತವರೆ! ಕಣ್ಣೆ! ಗತಿಯೆ! ಮತಿಯೆ ಪುಣ್ಯವೆ।
ಪ್ರಾಣವೆ! ಕಾವುದು ಕಾವುದೆಂಬೆ ‖

ಎಂದು ನುತಿಸುತ್ತ ಎದ್ದು ತಾಯಿ ಸಿದ್ಧಾಂಬೆಯು ಸಾಷ್ಟಾಂಗ ನಮಸ್ಕಾರ ಮಾಡಿದಳು, ಪಾದಧೂಳಿ ಮಸ್ತಕದಲ್ಲಿರಿಸಿದಳು.

ತಾಯೆ! ನಿನ್ನ ಮೊರೆ ಶಿವನ ಕರ್ಣದಲ್ಲಿ ಪೂರ್ಣವಾಗಿದೆಯಮ್ಮಾ! ಎಂದು ಮೈದಡವಿ ಎಬ್ಬಿಸಿತು ಆ ಜೋಗಿ.

ತತ್‌ಕ್ಷಣ ತಾಯಿಗೆ ಎಚ್ಚರವಾಗತಾಯಿದೆ. ಕಣ್ಣು ಪಿಳುಕಿಸಿ ಸುತ್ತೆಲ್ಲ ನೋಡಿದಳು........... ಜೋಗಿಇಲ್ಲ ಬೆಳಕು ಇಲ್ಲ.......... ಕನಸು.......... ಕನಸು ಸುಳ್ಳೆ ?................... ಕನಸಿನಲ್ಲಿ ಕಾಣಿಸಿಕೊಂಡ ಹಾನಗಲ್ ಶಿವಯೋಗಿಯ ಪರಮನುಡಿ ಸುಳ್ಳೆ ?................... ಮಕ್ಕಳ ಮೋಹದಿಂದ ನನಗೊಂದು ಗಂಡು ಸಂತಾನ ಕರುಣಿಸು ಶಿವನೆ! ;ಎಂದು ಬಯಸಿ ಬೇಡಿ ಚಿಂತಿಸುವ ನನ್ನ ಮನಕೆ ಇಷ್ಟೊಂದು ಉತ್ಸಾಹದ ಔತಣವೇಕೆ ?............

---

ಭಾರ ಹೊರುವವರಾರು ? ಎಂದು ಪಂಚಾಕ್ಷರಿಯವರಂದಾಗ, ಕುಮಾರಶ್ರೀಗಳು– ಪಂಚಾಕ್ಷರಿ! ಮುಂದಿನದಕ್ಕಾಗಿ ಚಿಂತಿಸಬೇಡ. ಸಮಾಜದ ಋಣ ತಿಂದು ತೀರಿಸದೆ ಹೋದ (ನಿನ್ನಂಣ) ಗುರುಬಸವಾರ್ಯ, ಮತ್ತೆ ಹುಟ್ಟಿ ನಿನ್ನ ಶಿಷ್ಯನಾಗಿ ಸಮಾಜದ ಋಣ ತೀರಿಸಲು ಬರುತ್ತಾನೆ. ಎಂದು ಶಿವಯೋಗಿಗಳು ಅಪ್ಪಣೆಕೊಡಿಸಿದ್ದರು.

............ ಕನಸು ಸುಳ್ಳಾದರೆ ಈರೀತಿ ನನ್ನ ಮನಸ್ಸಿಗೆ ನೆಮ್ಮದಿಯೇಕೆ ಸಿಗುತ್ತಿತ್ತು ?............ ಶಿವಯೋಗಿ ನುಡಿದಂತೆ ನನ್ನ ಮೊರೆ ಭವರೋಗ ವೈದ್ಯನಿಗೆ ಕೇಳಿರಬೆಹುದೆ?............ ಈರೀತಿ ಪ್ರಶ್ನೆಗಳ ಪರ್ವತವೇರಿ ಇಳಿಯುತ್ತಿರುವ ಸಿದ್ಧಾಂಬೆಯನ್ನು ಬಾಹ್ಯಪ್ರಪಂಚಕ್ಕೆ ತಂದಿರಿಸಿದುದು................ ಢಣ್........ ಢಣ್........ ಢಣ್........ ಣ್........ ಣ್............ ಡಣ್ ಣ್ ಎಂದು ಬೆಳಗಿನ ಜಾವದಲ್ಲಿ ಪೂಜೆಗೆ ಬಾರಿಸುವ ದೇವಸ್ಥಾನದ (ಗಂಟೆ) ಝಾಗಟೆಯ ನಿನಾದ.

ಈ ಜಾಗಟೆಯ ಕರ್ಣ ಮಧುರನಾದ ಸಿದ್ಧಾಂಬೆಯ ಪ್ರಶ್ನೆಗಳಿಗೆ ಉತ್ತರ ನೀಡುವಂತಿತ್ತು, ಸತ್ಯದ ಮಾರ್ಧನಿಯಿಂದ ತುಂಬಿತ್ತು.

ಸಿದ್ಧಾಂಬೆಗೆ ಅತೀವ ಆನಂದ................

ಶೀಘ್ರವಾಗಿ ಎದ್ದು ಮುಖಮಾರ್ಜನೆ ಮಾಡಿಕೊಂಡಾದಮೇಲೆ ದೇವರ ಜಗಲಿಯಲ್ಲಿ ದೀಪಹೊತ್ತಿಸಿ ಕೈ ಮುಗಿದು ಶಿವ ! ಶಿವ ! ! ಇಂದು ನನ್ನ ಬೇಡಿಕೆಯನ್ನು ಮಾನ್ಯ ಮಾಡಿದೆಯಾ? ತಂದೆ ಶಿವಯೋಗಿ, ಶಿವನೆ ಬಸವ, ಬಸವ ಶಿವನೆ, ಶಿವನೆ ಸಿದ್ಧರಾಮ ! ಎಂದು ಶಿವಧ್ಯಾನದಲ್ಲಿ ತಲ್ಲೀನಳಾಗುತ್ತಾಳೆ, ಮೌನವಾಗುತ್ತಾಳೆ.

ನಿತ್ಯ ನಿರ್ಮಳನೆ ನಿಃಕಳನೆ ಕೂಡಲಸಂಗ
ನಿತ್ಯ ನಿರ್ಭಯನೆ ನಿರುಪಮನೆ ಕೂಡಲಸಂಗ
ಹೊಗಳ್ವ ವೇದಾಳಿಗತಿ ಗೂಢ ಕೂಡಲಸಂಗ
ಸೊಗೆಯಿಸುವ ಘನವೃಷಾರೂಢ ಕೂಡಲಸಂಗ
ಎನ್ನನತಿ ಕರುಣದಿಂ ನೋಡು ಕೂಡಲಸಂಗ
ಎನ್ನ ಮನದಕ್ಕರೊಳು ಕೂಡು ಕೂಡಲಸಂಗ
ಎನ್ನ ಕಂಜೊಳಗೆ ಪರಿದಾಡು ಕೂಡಲಸಂಗ
ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ

ಎಂದು ನುತಿಸಿ ಪಾಡುವ ಬಸವಣ್ಣನವರ ಮುಖದ ಮುನ್ನೋಟದ ಭಾವ ತಾಯಿಯ ಮುಖದಲ್ಲಿ ಕಾರತಾಇತ್ತು, ತೋರತಾಇತ್ತು. ಮರುಕ್ಷಣ ಧ್ಯಾನ ಸಮಾಧಿಯಿಂದೆದ್ದು ಹೋಗಿ ಪತಿ ರೇವಣಾರಾರ್ಯರಿಗೆ ಕನಸಿನ ಪರಿ ತಿಳಿಸಿದಳು.

ಪರಿದ್ರ ಚಕ್ರವರ್ತಿಗೆ ನಿಧಿ ಸಿಕ್ಕಷ್ಟು, ಬೇಡಿಬಯಸಿದ ಬಳ್ಳಿ ಕಾಲಿಗೆ ತೊಡ ಕಿದಷ್ಟು, ಹೆಳವನಿಗೆ ಕಾಲು, ಕುರುಡನಿಗೆ ಕಂಣು, ಮೂಕನಿಗೆ ಮಾತು ಬಂದಷ್ಟು ಸಂತೋಷವಾಗಿದೆ. ರೇವಣಾರ್ಯನಿಗೆ.......... ದಂಪತಿಗಳೀರ್ವರು ಅತ್ಯಾನಂದದ ಮಡಿಲಲ್ಲಿ ಎಡವಿದರು...........

ಸ್ನಾನಮಾಡಿ ಶುಚಿರ್ಭೂತರಾಗಿ ಶಿವಪೂಜೆಗೆ ಕುಳಿತು ಬಹಿರ್ ಪ್ರಪಂಚ ವನ್ನು ಮರೆಯುತ್ತಾರೆ.

ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ ।
ಓಜೆಗೆಟ್ಟರುಹುಗೆಟ್ಟತಿ ಅಲ್ಲೆಯಂ ಮಾಡಿ ॥
ನಯನಂಗಳೊಳು ಪೂಜೆ ಬರದಂತೆ ನೋಡುತಂ ।
ಭಯಭಕ್ತಿಯಿಂ ಪೂಜೆ ಮೆರೆವಂತೆ ಮಾಡುತಂ ॥
ಚಿತ್ತದೊಳು ಪೂಜೆಯುಚ್ಛ್ರೋತ್ತಿದಂತರ್ಚಿಸುತೆ ।
ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ ॥

ಪೂಜೆಯಲ್ಲಿ ತಲ್ಲೀನರಾಗಿ..................................................

ರಾಜೇಯದಲ್ಲಿ ಲೀನರಾಗಿ....................................................

ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಂ ।
ಜ್ಯೋತಿರ್ಮಯಂ ನಿರಾಲಂಬಂ ಸರ್ವಾಧಾರಂ ಮನೂಪಮಂ ॥
"ಸೂಕ್ಷ್ಮಾಗಮ ॥ "

ಆಗಮದ ಉಕ್ತಿಯನ್ನು ಭಕ್ತಿಯಲಿ ಬೆರೆಸಿ; ಶಿವಶಕ್ತಿಯಲಿರಿಸಿ; ಏಕೋ ಭಾವಧರಿಸಿದ ಈ ದಂಪತಿಗಳೀರ್ವರು ಪ್ರಾರ್ಥನೆಮಾಡಿ, ಮಂಗಲವಪಾಡಿ, ಕನ ಸಿನಲ್ಲಿ ಕಾಣಿಸಿಕೊಂಡು ಜೋಗಿನುಡಿದ ಶ್ರೀ ನುಡಿಗಳನ್ನು ನೆನಹಿನಲ್ಲಿ ತಂದು; ಪ್ರಸಾದ ತೆಗೆದುಕೊಂಡು ತ್ರಿಕರ್ಣ ಪೂರ್ವಕವಾಗಿ ನಮಸ್ಕರಿಸಿದರು.

ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ।
ಸತಿ ಪತಿಗಳೊಂದಾಗದವನಭಕ್ತಿ ಅಮೃತದೊಳಗೆ ॥
ವಿಷ ಬೆರೆಸಿದಂತೆ ರಾಮನಾಥ ॥

ಅಂದಿನಿಂದ ಶಿವಯೋಗಿಯ ಪ್ರಸಾದ ಮಹಿಮೆಯಿಂದ ಬೆಳೆಯಿತು ತಾಯಿಯ ಬಸಿರು. ಕುಳಿತರೂ ನಿಂತರೂ ಅವಳ ಬಾಯಿಯಿಂದ ಬರುತ್ತಿತ್ತು ಶಿವನ ವುಸಿರು. ಇದುವೇ ಕನಸಿನ ಜೋಗಿಯ ಹರಕೆಯ ಕುಸಿರು.

ಹೊರಗೆ ಸಾರಿದುದವಯವಂ ಗರ್ಭ ಚಿಹ್ನಮಂ
ತುರುಗಿದುದು ಲಾವಣ್ಯ ವೊಪ್ಪವಿಡಿದಂಗಮಂ
ನಡೆಮೆಲುಪಿ ನೋಳ್ ನೆರೆಯಕೊಡೆಘಾಳದೋಳ್ ಪೊರೆಯೆ
ನಡು ಬಟ್ಟನಾಗಿ ನಿಲೆಕುಡಿಕಪ್ಪನಾಗಿ ಮೊಲೆ
ಪೊಕ್ಕ ಳುಣ್ಮುತ್ತ ಮಿರೆ ಮಿಕ್ಕುಕೀಳ್ಪೊಡೆಯಲತೆ
ಆಕ್ಕಜಂ ಕೊರ್ವಿಜಘನಂ ನಡಿಯ ಬೀಗುತಿರೆ
ತ್ರಿವಳಿ ಬಸುರಿಂ ಪಾರೆ ಪೊಸಬಾಸೆ ಮೆಯ್ದೋರೆ
ಅವಯವಂ ಜಲ್ವಾಗೆ ಬಾಹುಯುಗಪಳ ವೇರೆ
ಮೊಗವಲರ್ದು ಬೆಳ್ಪಾಗೆ ಮಿಗೆ ಮಾತು ತೆಳ್ಪಾಗೆ
ಬಗಸೆಗಳ್ ಬಿಳುಪಾಗೆ ಕದಪು ಮಿಗೆ ನಯವಾಗೆ
ನವಮಾಸವಾಪು ದಾಕೆಗೆ ಚಲುವು ಮಿಗಿಲಾಗ್ಯೆ

ದಿನಗಳೆದಂತೆ ತಾಯಿಯ ಚಿಗರಿ ನಡಿಗೆಯು ಆನೆ ನಡಿಗೆಯಾಯಿತು. ಅವಳ ನೀಲವರ್ಣದ ದೇಹ ಹಳದಿಯುಕ್ತ ಬಿಳಿ ವರ್ಣಕ್ಕೇರಿತು. ಬಡಕಲವಾದ ಅವಳೆದೆಯ ಭಾಗ ಭಾರ ವಾಯಿತು. ಪ್ರಸಾದ ಕಡಿಮೆಯಾಯಿತು. ಶಿವ ನಾಮ ಪಾದೋಕವೇ ಪ್ರಸಾದವಾಗಿ ಪರಿಣಮಿಸಿತು. ಅವಳ ತೆಳ್ಳನ್ನ ಉದರ ಜೇಂಗೊಡದಂತೆ ಭಾರತೆಯಿಂದ ಬಿರಿದು ಹೋಗುವಂತಿತ್ತು; ಅಪಾರವಾಗಿತ್ತು ಉತ್ಸಾಹಕಡಿದು ನಿರುತ್ಸಾಹದ ನೆನಕೆ ನಿಡಿದಾಯಿತು, ಬಸುರೆಯ ಬಯಕೆ ಬಲವಾಯಿತು.

ಯದಾಯದಾ ಹಿ ಧರ್ಮಸ್ಯಗ್ಲಾನಿರ್ಭವತಿ ಭೂತಲೆ ।
ತದಾ ತದಾವ ತಾರೋಽಯಂ ಗಣೇಶಾನಾಂ ಮಹೀತಲೆ

ಯಾವ ಸಮಯದಲ್ಲಿ ಧರ್ಮಗ್ಲಾನಿ (ಹಾನಿ) ಯಾಗುತ್ತಿದಿಯೋ ಅಂಥಾ ಪ್ರಸಂಗದಲ್ಲಿ ಧರ್ಮದುದ್ಧಾರಕ್ಕಾಗಿ ಶಿವನನುಯಾಯಿಗಳು ಭುವಿಯಲ್ಲಿ ಅವತರಿಸುತ್ತಾರೆ. ಎಂದು ಸಾರಿದ ಆಗಮದುಕ್ತಿಯಗನುಗುಣವಾಗಿ ಕಷ್ಟಕಾಲವು ಕಲಿಯುಗದಿ ಕಲೆತು ಬಂದಿತ್ತು, ಮಲೆತು ಕುಂದಿತ್ತು. ಧರ್ಮಗ್ಲಾನಿಯಾಗ ಹತ್ತಿತ್ತು, ಮಾಲಿನ್ಯದ ಮನ್ನಣೆಯಲ್ಲಿತ್ತು.

ಈ ದುರ್ಧರ ಪರಸ್ಥಿತಿಯಲ್ಲಿ ಮಹಾತ್ಮರ ಅವತಾರ ಅವಶ್ಯವಾಗಿತ್ತು. ತಾಯಿ ಸಿದ್ಧಾಂಬೆಯ ಬಸುರಿನ ಉದರಕ್ಕೆ ನವಮಾಸ ತುಂಬಿತ್ತು, ನಿಷಾದೇ

ವಿಯ ಸಂಹಾರಕ್ಕಾಗಿ ಶಶಿಪಿತನ ಸಾರಥಿಯು ಕಾಲಿರಿಸಿದಂತಿತ್ತು. ಬೆಳಗಿನ ಸುಳಿಗಂಪು ಮೂಡಣದಿ ಮೂಡಿದಂತೆ ತಾಯಿಯ ಬಾಯಿಕೆ ಬೇನೆ ಬಲು ಜೋರಾಯಿತು. ಕೈ. ಶ. ೧೯೧೪ ನೇ ಇಸ್ವಿ ಮಾರ್ಚ ೩ ರಂದು ನಮ್ಮ ಚರಿತ್ರದೊಡೆಯನು, ಬೆಳಗಿನಲ್ಲಿಯ ಬೆಳಗು ಮಹಾ ಬೆಳಗಿನಂತೆ ಬಹುವಾಗಿ ಬೆಳಗುತ್ತ, ಸಿದ್ಧಾಂಬೆಯ ಉದರದಿಂದ ಭೂದಾಂಬೆಯ ಪದರಿನಲ್ಲಿ ಶಿವನ ತುತ್ತಾಗಿ; ಭವದ ಕುತ್ತಾಗಿ, ಜೋಗಿಯ ತೊತ್ತಾಗಿ ಬಿತ್ತು,

ಗ್ರೇಟ, ಬ್ರಿಟನ್, ಫ್ರಾನ್ಸ, ರಶಿಯಾ, ಜರ್ಮನಿ, ಆಸ್ಟ್ರೀಯಾ. ರಾಷ್ಟ್ರಗಳು ಸೋಚನೀಯದಲ್ಲಿದ್ದ ಕಾಲ ೧೯೧೪. ಹಿಂದೆಂದೂ ಆಗದ ಜಗತ್ತಿನ ಮೊತ್ತ ಮೊದಲನೆ ಮಹಾಯುದ್ಧದ ನಾಂದಿ ೧೯೧೪ ಆಧುನಿಕ ಶಸ್ತ್ರಗಳಾದ ಮದ್ದು ಗುಂಡು, ಆ್ಯಟಂ ಬಾಂಬು, ಟ್ಯಾಂಕ ಮೊದಲಾದ ಯುದ್ಧ ಸಾಮಗ್ರಿಗಳನ್ನು ತಯಾರಿಸಿದ ಕಾಲ ೧೯೧೪ ಇಟಲಿ ದೇಶದ ಪ್ರಶಿದ್ಧ ಸಾಹಿತಿ "ಅವಂತಿ" ಎಂಬ ದಿನ ಪತ್ರಿಕೆಯನ್ನು ಪ್ರಕಟಿಸಿದ ಕಾಲ ೧೯೧೪ ಪ್ರಶಿದ್ಧ ರಾಜಕಾರಣಿಯಾದ ಅಸ್ಕ್ವಿಥ್, ರಾಜಿನಾಮೆಯನ್ನು ಕೊಟ್ಟ ಕಾಲ ೧೯೧೪. ಮಹಾಮುತ್ಸದ್ದಿ ಲಾಯಿಡ್ ಜಾರ್ಜ ಅಮೇರಿಕೆಯ ಮುಖ್ಯಮಂತ್ರಿಯಾಗಲು ಅರ್ಹತೆ ಪಡೆದ ಕಾಲ ೧೯೧೪. ಲಾರ್ಡ ಹಾಡಿಂಜನು ವ್ಹಾಯಸರಾಯನಾಗಿ ಬರಲು ಅನುಮತಿ ಗಳಿಸಿದ್ದ ಕಾಲ ೧೯೧೪. ಲೋಕಮಾನ್ಯ ಬಾಲಗಂಗಾಧರ ತಿಲಕರು ಶೆರೆಮನೆಯಲ್ಲಿದ್ದುಕೊಂಡು "ಗೀತಾರಹಸ್ಯ" ವೆಂಬ ಗ್ರಂಥವನ್ನು ಬರೆದು, ಬಂಧಮುಕ್ತರಾದ ಕಾಲ ೧೯೧೪, ತಿಲಕ ಹಾಗೂ ಅರವಿಂದ ಘೋಷರ ಸುತತ್ವಗಳಿಗೆ ಜವಾಹರಲಾಲ ನೆಹರೂ ಅವರು ಮಾರು ಹೋಗಿ ತತ್ವಜ್ಞಾನಿಗಳಾದ ಕಾಲ ೧೯೧೪; ಮಹಾತ್ಮಾ ಗಾಂಧೀಜಿಯವರು ಆಫ್ರಿಕೆಯ ಕಾರ್ಯದಲ್ಲಿ ದಿಗ್ವಿಜಯ ಪಡೆದು ಭಾರತಕ್ಕೆ ಮರಳಿದ ಕಾಲ ೧೯೧೪. ಬಂಗಾಲದ ಪ್ರಶಿದ್ಧ ಸಾಹಿತಿ ಶರಶ್ಚಂದ್ರ ಚಟರ್ಜಿಯವರು ಸಾಹಿತ್ಯ ಪ್ರಪಂಚದಲ್ಲಿ ಪರಿಚಿತರಾದ ಕಾಲ. ೧೯೧೪. ರೋಣ ತಾಲೂಕಿನ ನಿಡಗುಂದಿ ಕೊಪ್ಪದಲ್ಲಿ ಹಾನಗಲ್ ಶಿವಯೋಗಿಗಳವರು ಸಂಗೀತ ಶಾಲೆಯನ್ನು ಸ್ಥಾಪಿಸಿ, ಪಂಡಿತ ಪಂಚಾಕ್ಷರ ಗವಾಯಿಗಳಿಗೆ ಮಾರ್ಗ ಮಾಡಿ ಕೊಟ್ಟ ಕಾಲ ೧೯೧೪. ನಮ್ಮ ಚರಿತ್ರನಾಯಕನ ಜನನವೂ ಕೂಡಾ ಈ ಪವಿತ್ರತಮ ಕಾಲ ೧೯೧೪.

ಸುಖ-ಸಂಕಟಗಳ ನಿಜ ಅರಿವು ಮಾಡಿಕೊಡುವಕಾಲ ಗಳಿಗಳ. ಠಲ್ಲಿ ಈ ನಮ್ಮ ನಾಯಕ ತೊತ್ತಿನ ಅವತಾರವಾಯಿತು. ತಾಯಿ ಉದರದಿಂದ ಭೂದೇವಿಯ ಮಡಿಲಲ್ಲಿ ಸೇರುವದರೊಳಗಾಗಿ ತಾಯಿ ಸಿದ್ಧಾಂಬೆಯ ಜೀವ ಸತ್ತು ಬದುಕಿತ್ತು, ಚೇತರಿಸಿತ್ತು.

ಕೂಸು ನಗುತ್ತಿತ್ತು................

ನನ್ನನ್ನು ಬಯಸಿ ಬಗವಂತನಲ್ಲಿ ಬೇಡಿಕೊಂಡು ಕಾಡಿ ಬೇಡಿದ ತಾಯಿ ಈಗ ನಿನ್ನಾಶೆಯಂತೆ ನಾನು ನಿನ್ನ ಕೂಸಾಗಿ ಬಂದಿರುವ ನನ್ನನ್ನು ಕಂಡೂ ಕಾಣದವಳಂತೆ ಸಂಕಟ ಪಡುವದೇಕಮ್ಮಾ? ಎಂದು ಕೇಳುವಂತಿತ್ತು ಈ ಹಸು ಗೂಸಿನ ಹುಸಿ ನಗುವಿನ ಗತ್ತು, ಅಣಕ ತುಂಬಿತ್ತು.

ಮತ್ತೆ ಮರುಕ್ಷಣದಲ್ಲಿ ಕೂಸು ಅಳಹತ್ತಿತು...................................
ತಾಯಿ:– ನನಗಾಗಿ ಜಪವ್ರತ ನೇಮುಗಳಾಚರಿಸಿ. ಸುಖತೊರೆದು ಕಷ್ಟ ಕ್ಕಾಕರಿಸಿ, ಒಂಭತ್ತು ತಿಂಗಳ ಪರ್ಯಂತರ ನನ್ನನ್ನು ನಿನ್ನ ಗರ್ಭದಲ್ಲಿ ಆಶ್ರಯ ವಿತ್ತು ಹೊತ್ತು ಸಲಹಿದೆ. ಇಷ್ಟಾದರೂ ಕಂದಾ! ನಿನಗೆ ನನ್ನ ಗರ್ಭವಾಸು ಬೇಸರವಾಯಿತೆ? ಏಕೆ ಹೊರಗೆ ಬಂದೆ? ನನಗೇಕೆ ಇಷ್ಟು ಕುಂದು ತಂದೆ? ಎಂದು ತಾಯಿ ಪ್ರಶ್ನಿಸಿ ಅಳುತ್ತಿರುವ ವೇದನೆಯ ಕಂಡು, ಕೂಸು ಸಂತಾಪ ದಿಂದ ಅಳಲಿಕ್ಕೆ ಪ್ರಾರಂಭಿಸಿತೋ ಏನೋ ಅನ್ನುವಂತೆ ಗೋಚರವಾಗುತ್ತಿತ್ತು.

ಮತ್ತು ಅರಕ್ಷಣದಲ್ಲಿ ಕೂಸು ಪ್ರಸನ್ನ ಮುದ್ರೆಯಿಂದ ಆಡಹತ್ತಿತು ತಾಯಿ ಸಿದ್ಧಾಂಬೆಯು ಸಂತಸದ ಮೊಗಗಂಡು.

ಮರುಕ್ಷಣ ಮಗು ಮೌನದಾಳುತ್ತಿತ್ತು.

ತಂದೆ ರೇವಣಾರ್ಯನ (ನನ್ನ) ಊರಾದ ಹೊಸಪೇಟೆಯಲ್ಲಿ ನನ್ನ ಜನ್ಮವಾಗಲಿಲ್ಲ. ತಾಯಿ ಸಿದ್ಧಾಂಬೆಯ ತವರೂರಾದ ಹಾವೇರಿ ತಾಲೂಕಿನ ದೇವಗಿರಿಯ ಗ್ರಾಮದಲ್ಲಿ ಜನನವಾಯಿತು. ಇದಕ್ಕೆ ಕಾರಣಾರು!? ತಾಯಿಯ ಬಸುರಿನ ಕಾರಣವನ್ನೂ ಸೈರಿಸದೆ ತಾಯಿಯನ್ನೂ ದೇವಗಿರಿಗೆ ತಂದೆ ರೇವಣಾರ್ಯ ಕಳಿಸಿರಬಹುದೆ? ಇಲ್ಲ, ತಾಯಿಯ ಸೋದರ ಚಂದ್ರಶೇಖರಯ್ಯನ

ವರು, ನನ್ನ ಸೋದರಿಯ ಪ್ರಸೂತಿ ನನ್ನ ಮನೆಯಲ್ಲಿ ಆಗಬೇಕೆಂಬಾಶೆಯಿಂದ ಇಲ್ಲಿಗೆ ತಾಯಿಯನ್ನು ಕರೆಸಿಕೊಂಡಿರಬಹುದೆ? ಎಂದು ವಿಚಾರಿಸಿ ಕೊನೆಗೆ-ನನ್ನ ಹುಟ್ಟನರಿಣ ಈ ಗ್ರಾಮದಲ್ಲಿದೆ ಎಂದು ಸಮಾಧಾನ ಪಟ್ಟುಕೊಂಡಿತೋ ಹೇಗೋ ಎಂಬುದನ್ನು ಸೂಚಿಸುತ್ತಿತ್ತು ಕೂಸಿನ ಮೌನದ ಗುಟ್ಟು. ಅಂತೂ ದೇವಗಿರಿಯಲ್ಲಾಯಿತು ಹುಟ್ಟು.

ರಾತ್ರಿ ಕತ್ತಲೆಯಲ್ಲಿ ಕಾಲುಕಟ್ಟಿಕೊಂಡು ಬಂದಿತವಾದ ಪಶುಪಕ್ಷಿಗಳು ಬೆಳಗಿನ ಭಾನುವಿನ ಬರುವನ್ನು ಕಂಡು ವಿಶಾಲ ವಿಶ್ವದೆಡೆಗೆ ಚಲಿಸುತ್ತವೆ. ಅದರಂತೆ ಮಂಧತೆಯಂಧಃಕಾರವನ್ನು ಕಳೆದು ಸುಜ್ಞಾನದ ಬೆಳಕನ್ನು ಬೀರುವ ಈ ಭಾವಿಭಾನುವಿನನ್ನು ಕಂಡು ರೇವಣಾರ್ಯ ಸಿದ್ಧಾಂಬೆಯರಾದಿಯಾಗಿ ಎಲ್ಲ ಜನರ ಹೃದಯ ಮಂದಿರದ ಕತ್ತಲೆಯಲ್ಲಿ ಕವಿದು ಕುಳಿತಿರತಕ್ಕಂಥ ಚಿಂತಿ ಕ್ರಾಂತಿಗಳ ಕಾಕ ಪಕ್ಷಿಗಳು ದೂರ ಬಹುದೂರ ಚಲಿಸಿದವು, ಸಂತಸದ ಹೊಳೆಯನ್ನು ಹರಿಸಿದವು.

ಡಣ್............ಡಣ್............ ಡಣ್...........................ಬೆಳಗಿನ ಬಸವಂಣ ದೇವರ ಗಂಟೆಯ ನಿನಾದ ಸಿದ್ಧಾಂಬೆಯ ಕರ್ಣಪಟಲದಲ್ಲಿ ಬಂದು ಮೂಡಿತು, ಅಂದಿನ ಕನಸಿನ ಉತ್ತರ ಈ ಕೂಸು ಎಂದು ಹೇಳಿದಂತೆ ಭಾಸವಾಯಿತು.

ಸಿದ್ಧಾಂಬೆಗೆ ಎಲ್ಲಿಲ್ಲದ ಆನಂದವಾಗಿದೆ. ಕತ್ತಲು ಕತ್ತರಿಸಿ ಎಲ್ಲೆಡೆಯಲ್ಲಿ ಹೂ ಬಿಸಿಲು ಪಸರಿಸಿದೆ. ಚಿಲಿಪಿಲಿ ಎಂದುಲಿದಾಡುವ ಪಕ್ಷಿಗಳ ಚಿಯ್ ಚೀಂಕಾರ, ಗಂಟೆ, ಝಾಗಟೆ, ಶಂಕಧ್ವನಿಗಳ ಓಂಕಾರ. ತಾಯಿಯ ಮೊಲೆ ಕಂಡು ಅಂಬಾ ಅಂಬಾ ಎಂದು ಒರಲುವ ಎ ಳೆ ಗ ರು ಗ ಳ ಪ್ರೇಮಾಂಕುರ. ತಂಗಾಳಿಯಲ್ಲಿ ಮೈಚೆಲ್ಲಿ ಸುಳಿಗಾಳಿಯಲ್ಲಿ ಜಿಂಯ್ ಎಂದು ಧ್ವನಿಗೈವ ತರುಲತೆಗಳ ಝೇಂಕಾರ. ಭೂ ತಾಯಿಯ ಸೇವೆಗೆಂದು ಹೊರಟ ರೈತರ ಹುರುಪಿನ ಹೂಂಕಾರ. ಈ ಎಲ್ಲವೂ ಈ ಶಿವಕೂಸಿನ ಹುಟ್ಟಿಗೆ ಶುಭ ನೀಡುವ ಸಂಕೇತಗಳಂತೆ ಕಂಡು ಬರುತ್ತಿದ್ದವು.

ಬಾಹ್ಯ ಪ್ರಪಂಚವು ಭೂರವಿಯಿಂದ ಬೆಳಗಿತು. ಆಂತರ್ಯ ಪ್ರಪಂಚವು ಈ ಭಾವೀ ರವಿಯಿಂದ ಬೆಳಗಿತು. ಒಟ್ಟಿನಲ್ಲಿ ಒಳಗೂ ಹೊರಗೂ ಬೆಳಕು

ಮೊಳೆಯಿತು. ಶಿಶುವಿನ ಜನದದ ವಿಷಯ ಜನರಿಂದ ಜನರಿಗೆ ತಿಳಿದು ಇಡೀ ದೇವಗಿರಿ ಜನತೆಗೆ ತಿಳಿದು ಹೋಯಿತು. ಈ ಹರಗೂಸನ್ನು ನೋಡಲು ತಂಡ ತಂಡವಾಗಿ ಸ್ತ್ರೀ ಪುರುಷರು ಈ ಹಿರೇಮಠದತ್ತ ಬರುತ್ತಾರೆ. ಕಂಣ ದುಂಬಿ ಶಿಶುವನ್ನು ನೋಡಿ ಮನತುಂಬಿ ಹೊಗಳುತ್ತಾರೆ. ಕೂಸನ್ನು ನೋಡುವದಕ್ಕಾಗಿ ಬರುಹೋಗುವವರ ಸಂಖೆ ಏರಿತು ಮೀರಿತು. ಸಕ್ಕರೆಯ ಹರಳಿಗೆ ಇರುವೆಗಳು ಅನಂತ ಬರುತ್ತಿವೆ. ತಿಂದು ಶೇಗಿ ಆನಂದಪಟ್ಟು ಹೋಗುತ್ತಿದೆ. ಅದರಂತೆ ಶಿವಯೋಗಿಯ ಸಕ್ಕರೆ ಹರಳಿನ ( ಕೂಸಿನ ) ಸ್ಥಿತಿಯಾಗಿದೆ, ಅತಿಯಾಗಿದೆ. ಈ ಎಲ್ಲ ಬರುಹೋಗುವ ಜನರನ್ನು ಕಂಡು ನಾನೂ ನೋಡಬಾರದೇ ಈ ಶಿವಶಿಶುವನ್ನು ಎಂದು ಸೂರ್ಯದೇವ ಸ್ವಲ್ಪ ಸಿಟ್ಟಾಗಿ ಮುಂದೆ ಬಂದನೋ ಏನೋ ಎನ್ನುವಂತೆ ಸ್ವಲ್ಪ ಬಿಸಿಯಾಗಿ ಮೇಲೀರಿ ಮಠದ ಆವಾರದತ್ತ ಹಣಿಕಿನೋಡಿ, ತನ್ನ ಛಾಯೇಯನ್ನು ಇಣಿ ಕಿಸಿದ, ಏರಿನೋಡಿದ.

ಪಾಪ ! ಸೂರ್ಯದೇವನ ಕೋಪಯುಕ್ತ ದೃಷ್ಟಿ ಕೂಸಿಗೆ ಪರಿಣಾಮ ಮಾಡಿತೋ ಏನೋ ತಾಯಿ ಸಿದ್ಧಾಂಬೆ ಕೆಳದಿಯರೊಡಗೂಡಿ ಕೂಸನ್ನು ಎತ್ತಿಕೊಂಡು ಸ್ನಾನಗೃಹ ಸೇರಿದಳು.

ಇದರಿಂದ ಅಂತೂ ಮತ್ತಷ್ಟು ಸಿಟ್ಟಾಗಿ ಸೂರ್ಯದೇವನು ಕಂಣುಕೆಂಪಗೆ ಮಾಡಿ ವುರಿದುರಿದು ಮೇಲೆರಿದ.

ನೀನು ಬೇಕಾದಷ್ಟು ಸಿಟ್ಟಾಗು, ಈ ಶಿವರೂಪಿಯ ಸನ್ನಿಧಿಯಲ್ಲಿದ್ದ ನನಗೆ ಭಯವಿಲ್ಲವೆಂದು ಉತ್ತರ ಕೊಡುವಂತೆ ಧಡಾರನೆ ಚೀರಿ ಬೆದರಿಸಿ ಮುಚ್ಚಿಕೊಂಡಿತು ಬಾಗಿಲು. ........................



# ಬಾಲ್ಯದ ತಾಪ ಮೌಲ್ಯದ ರೂಪ

ಪ್ರಸನ್ನ ದಿಕ್ಪಾಂಶು ವಿವಿಕ್ತವಾತಂ।
ಶಂಖಸ್ವ ನಾನಂತರ ಪುಷ್ಪವೃಷ್ಟಿ॥
ಶರೀರಿಣಾಂ ಸ್ಥಾವರ ಜಂಗ ಮಾನಾಂ।
ಸುಖಾಯ ತಜ್ಜನ್ಮದಿನಂ ಬಭೂವ॥

॥ ಕುಮಾರ ಸಂಭವ ॥

ಜಗಜ್ಜನನಿ ಪಾರ್ವತಿಯು ಹುಟ್ಟಿದ ದಿವಸದಲ್ಲಿ ದಿಕ್ಕುಗಳು ನಿರ್ಮಲ ವಾದವು. ಧೂಳಿಯಿರದ ಗಾಳಿ ಸುಳಿಯಿತು. ಪುಷ್ಪದ ಮಳೆಗರೆಯಿತು. ಸ್ಥಾವರ ಜಂಗಮಾತ್ಮಕ ವರ್ಗಗಳಿಗೆಲ್ಲ ಸುಖಕರವಾದ ಭಾವೈಕ್ಯತೆ ತಂದಿತು. ಅದರಂತೆ ಈ ಶಿವಶಿಶುವಿನ ಜನ್ಮದಿಂದ ಸಮಸ್ತ ನಾಗರಿಕರು ಆನಂದ ತುಂದಿಲರಾಗಿದ್ದಾರೆ.

ಇಳೆಗೆ ಶಿವಭಕ್ತಿಯಂ—
—ಶೀಪಲ್ ಪಡೆನಂಗೊಂಡು ಚಿಪ್ಪಿನೊಳ್ ಮುತ್ತು।
ಕಾಸಾರದೊಳ್ ಪಂಕಜಂ—
ಅಪ್ಪಿನಿಂ ತಣ್ಪುಮಲಯಾದ್ರಿಯಿಂ ಮಲಯಜಂ॥
ಕೇತಕಿ ಕುಸುಮದಿಂ—
—ರುಚಿರತರ ಪರಿಮಳಂ ಶೀತಕರನಿಂ ಸಾಂದ್ರತರ।
ಕೌಮುದೋಜ್ವಳಂ—
—ಪುಟ್ಟುವಂತಿರೆ ಪುಟ್ಟಿದಂ ಶಿವನ ಶಿಸುವಲ್ಲಿ ಪುಟ್ಟಿದಂ॥
ಸಂಸಾರ ಸುಖದ ಲೀಲೆ—
—ಯಿನಲ್ಲಿಸುಮುಹೂರ್ತವೇ ಗಂಡುರೂಪಾದ ತೆರನಾಗೆ।
ಅಮಮ! ಕಾರುಣಿಕ ಶಿಶು ಜನಿಯಿಸಿದನನುವಾಗೆ॥

॥ಬಸವರಾಜ ದೇವರ ರಗಳೆ॥

ಹರಿಹರನ ದೃಷ್ಟಿಯಲ್ಲಿ ಬಸವಕುಮಾರನ ಹುಟ್ಟು ಎಷ್ಟು ಗಣ್ಯವೋ, ನನ್ನ ದೃಷ್ಟಿಯಲ್ಲಿ ಈ ಶಿವಕುಮಾರನ ಹುಟ್ಟು ಅಷ್ಟೇ ಮಾನ್ಯವು.

ದೇವಲೋಕದಿಂದ ಗಣಾಧೀಶನ ಆಜ್ಞೆಯಂತೆ ಭೂಲೋಕಕ್ಕೆ ಬಂದು ಮಾನವನಾಗಿ ಅವತರಿಸಿ, ಮಹದೇವನಾಗಿ ಭೂಮಂಡಲವನ್ನು ಪಾವನ ವನ್ನಾಗಿ ಮಾಡುವವರು ಮಾಡಿದವರು ಅತಿ ವಿರಳ.

ಈ ವಿರಳದ ಸರಳೆಯಲ್ಲಿ ಮೊದಲೆರಳೆಯಾಗಿ ಇಳೆಗುರುಳಿದನೀ ಶಿವಹಸುಳೆ.

ಚಕೋರಂಗೆ ಚಂದಿರನ ಬೆಳಗಿನ ಚಿಂತೆ ।
ಅಂಬುಜಕೆ ಭಾನುವಿನ ಉದಯದ ಚಿಂತೆ ॥
ಭ್ರಮರಂಗೆ ಪರಿಮಳದ ಬಂಡುಂಬುವ ಚಿಂತೆ ।
ಯಮಗೆ ನಮ್ಮ ಕೂಡಲಸಂಗಮದೇವರನೆನೆವ ಚಿಂತೆ ॥

### "ಬಸವಂಣನವರು"

ಚಕೋರ ಬೆಳದಿಂಗಳು ಬಯಸುವಂತೆ, ಕಮಲ ಸರ್‍ಯೋದಯ ನೆನೆ ಸುವಂತೆ, ಗುಂಗೀ ಹುಳವು ಹೂರಸವ ಅರಸುವಂತೆ, ಬಾಯಾರಿದ ಬಡವ ಅಂಬುವಿಗಾಗಿ ಬಾಯ್‌ಬಿಡುವಂತೆ, ಹಸಿವೆಯಿಂದ ಬಳಲುವ ಬಿಕಾರಿ ಪರ ಮಾನ್ನ ಬಯಸವಂತೆ, ರಾತ್ರಿ ಸಮಯದಿ ಒಬ್ಬೊಂಟಿಗಳಾಗಿ ಮಲಗಿದ ಸತಿ ವಿರಹ ತಾಪದಿ ನಿದ್ರೆ ಮರೆತು ಹೊರಗೆಹೋದ ಪತಿಯ ಬರವ ನೋಡುವಂತೆ, ಕಾಯುವಂತೆ ಆಗಿತ್ತು ದೇವಗಿರಿ ಹಾಗೂ ಹೊಸಪೇಟೆಯ ಜನತೆಗೆ.

ಅನ್ಯಾಯ ಅನೀತಿ ಅತೃಪ್ತಿಗಳ ಅಟ್ಟವೇರಿ, ತಾಳತಪ್ಪಿದ ಬೇತಾಳ ಕಟೆಯುತ್ತಾ, ಹಾಲಾಹಲದ ಹಾಡು ಹೇಳುತ್ತ; ಅಶಾಂತಿಯಲಿ ತಾಂಡವ ನೃತ್ಯ ಮಾಡುತ್ತಿದ್ದ ಜನತೆಯಲ್ಲಿ ಈ ಶಿವ ಶಿಶುವಿನವತಾರದಿಂದ ಅಪೂರ್ವ ಬದಲಾವಣೆಯಾಯಿತು, ಶಾಂತಿಯನುಕರಣೆಯಾಯಿತು.

ಶಿವ ಶಿಶುವಿಗೆ ತಾಯಿಸಿದ್ಧಾಂಬೆ ಸ್ನಾನಮಾಡಿಸಿ, ವಿಧಿ ಪೂರ್ವಕ ಪೂಜೆ ಮಾಡಿಸಿ ಜಂಗಮನಿಂದ ಲಿಂಗಧಾರಣ ಮಾಡಿಸಿ ಮಗುವಿನ ಮೊಗಗಂಡು ಕಡುಮೋದದ ಮಡಿಲಲ್ಲಿ ದಿಡವಿರಿಸಿದಳು. ಶಿವಶಿಸುವಿನ ಜನನದ ವಿಷಯ ಕೇಳಿ ಆತ್ಯಾನಂದದಲ್ಲಿ ತೀವ್ರ ತರಮಾದ ಅಡಿಗಳನ್ನು ಓಡಿಸಿಕೊಂಡು ಬಂದು ಮಗುವಿನ ಮೊಗಕಂಡ ರೇವಣಾರ್‍ಯನ ಉತ್ಸಾಹಕ್ಕೆ ಮಿತಿಯಿಲ್ಲ. ಇದರಂತೆ ಚಂದ್ರ ಶೇಖರಯ್ಯ ನವರಾದಿಯಾಗಿ ಸಮಸ್ತರು ಸಂತಸದಸವಿಗಾನ ಸವಿಯಹತ್ತಿದ್ದರು.

ಮುಂದೆ ಕೂಸುಜನಿಸಿದ ೧೧ನೇ ದಿನದ ಶುಭ ಮೂಹೂರ್ತವೆಂದು ಜೋಗುಳ (ಹೆಸರಿಡುವ) ಕಾರ್ಯಕ್ರಮ ವಿಟ್ಟುಕೊಂಡಿದ್ದಾರೆ.

ಸಾರಣಿ ಕಾರಣಿಗಳನ್ನು ಮಾಡಿರಂಗವಲ್ಲಿ ಹಾಕಿ ತಳಿರು ತೋರಣದಿಂದ ಮಠವನ್ನು ಓರಣವಾಗಿ ಶ್ರಿಂಗರಿಸಿದ್ದಾರೆ ಸುಣಬಂಣಗಳಿಂದ ಮಠವನ್ನು ಸಾರಿಸಿ; ಮೇಲೆ ತರತರದ ಬಂಣಗಳಿಂದ ಬೇರೆ ಭೇರೆ ಚಿತ್ರಗಳನ್ನು ಚಿತ್ರಿಸಿ; ಚಿತ್ರ ಕಲೆಯ ಛತ್ರವನ್ನಾಗಿರಿಸಿದ್ದಾರೆ. ಅಲ್ಲಿಗಲ್ಲಿಗ್ಗೆ ಹೊಸಹೊಸ ಪೈರುಗಳಿಂದ ಹಂದರವನ್ನು ಹಾಕಿ ಹೂ-ಕೇದಿಗೆ ಹೊಡೆಗಳಿಂದ ಶ್ರಿಂಗರಿಸಿದ ಮಂಟಪಗಳು. ಮಂಟಪಗಳ ಮಧ್ಯದಿ ವಿನಾಯಕ, ಲಕ್ಷ್ಮಿ, ಸರಸ್ವತಿಯರ ಫೋಟೋಗಳಿಟ್ಟು ಪೂಜಿಸಿದ್ದಾರೆ. ಊರ ತುಂಬ ಎಲ್ಲಿ ನೋಡಿದಲ್ಲಿ ಹಕ್ಕಿಗಳೋಪಾದಿ ಪರ್ ಪರ್ ಎಂಬ ಧ್ವನಿ ತೆಗೆದು ಹಾರಾಡುವ ರಂಗುರಂಗಿನ ಪರೆ ಪರೆ ಹಾಳೆಗಳ ಠೇಂಕಾರ. ಮದ್ದು ಗುಂಡಿ ಪಟಾಕ್ಷಿಗಳು ಹುಡುಗರಿಂದ ತಮ್ಮ ದೇಹಕ್ಕೆ ಕೊಳ್ಳೀ ( ಬೆಂಕಿ ) ಇಡಿಸಿಕೊಂಡು ಢಮ್- ಢಮ್.... ಟಿಬ್.... ಚಿಟ್.... ಚಿಟ್ ಎಂದು ಧ್ವನಿ ಮಾಡಿ ಆಕಾಶದತ್ತ ಹಾರಿ ದೂರ ದೂರ ಬಳಿಸಾರಿ ಏರಿ, ಕಡೆಗೆ ಜಾರಿ, ಬೀಳುತ್ತಿರುವದನ್ನೂ ಈಕ್ಷಿಸಿದರೆ, “ ಮೇಲಾಗಲೊಲ್ಲೆನು ಕೀಳಾಗಿರುವೆನು ” ಎಂದು ಸಾರಿದ ಬಸವಂಣನವರ ವಚನವನ್ನು ಜ್ಞಾಪಿಸಿಕೊಂಡು “ ಮೇಲಾಗಿ ನರಕದಿ ಓಲಾಡಲಾರೆವು “ ಈ ಶಿವ ಶಿಶುವಿನ ಸನ್ನಿಧಿಯಡಿಯಲ್ಲಿ ಹುಡಿಯಲ್ಲಿ ಹುರುಳಾಡಿ, ಮುಕ್ತಿ ಪಡೆಯುತ್ತೇವೆ. ಎಂಬುವ ಭಾವ ತುಂಬಿತ್ತು ಪಟಾಕ್ಷಿಗಳ ಬೀಳಿತದಲ್ಲಿ. ಪ್ರತಿಯೊಬ್ಬರ ಮೈಯಲ್ಲಿ ಬಂಣ ದುಡಿಗೆಗಳು; ಚಿನ್ನದ ತೊಡಿಗೆಗಳು ಥಳಕು ಬೆಳಕುಗಳ ಸಂಗಮದಿಂದ ಹೊಳೆಯುತ್ತಿವೆ. ಪ್ರತಿಮನೆಯ ಮುಂದೆ ಶೋಭಾಯ ಮಾನವಾದ ಲತಾ ಮಂಟಪಗಳನ್ನು ಕಂಡರೆ ಮೈಸೂರಿನ ಬೃಂದಾವನ. ಕಾಶ್ಮೀರದ ನಂದನವನ, ಮಥುರಾದ ಗೋವಿಂದ ವನ, ಪ್ಯಾರೀಸದ ನಗರ ವನಗಳು ಈ ದೇವರಿಗ್ರಾಮದಲ್ಲಿ ಬಂದು ಬೀಡು ಬಿಟ್ಟಿರುವಂತೆ ಭಾಸವಾಗತಾಯಿತ್ತು, ಸೌಂದರ್ಯ ಸೂರೆಯಾಗಿತ್ತು, ರಂಗು ರಂಗಾಕಾರವಾದ ಕಂಗವಲ್ಲಿಗಳಿಂದಲಕೃತವಾದ ಗ್ರಾಮದ ಬೀದಿಗಳು ರವಿ-ವರ್ಮನ ಚಿತ್ರಮಂಟಪದಂತೆ ಪರಿಶೋಭಿಸುತ್ತಿತ್ತು. ಒಟ್ಟನಲ್ಲಿ ನಂದಗೋಕುಲ ದಂತೆ ಗಿರಿಜಾಕಲ್ಯಾಣದಂತೆ ಈ ಗ್ರಾಮ ಮೆರೆದಿದೆ ಶೋಭಿಸಿದೆ.

ನೆರೆದು ಬಹುವಿಧ ವಾದ್ಯವಡಿಸಿ ಮೊಳಗಿದವು ।
ಧಿಮಿಧಿಮಿಕು ಧುಮುಕು ತತ್ತೊಂಗ್ ಎಂಬ ಮದ್ದಳೆಯ ॥
ಜಮುಕ ತಕನಕ ತಕನವೆಂಬ ಕಹಳೆಯ ಧ್ವನಿಯ ।
ನಟ ವಿಕಟ ಕಟಕ ಬಿರ್‍ರೆಂಬ ಕರಡೆಯ ಧ್ವನಿಯ ॥

ಡಣ್............... ಢಣ್............... ಢಣ್............... ದೇವ ಸ್ಥಾನದ ಝಾಗಟೆಯ ಝುಣತ್ಕಾರ, ನಗಾರಿ ಶಂಖ ತಾಳಗಳ ಸುಸ್ವರ, ಶಹನಾಯಿ ಕಾಳಿ ಸುಂದರಿಗಳ ಕರ್ಣ ಮಧುರಧ್ವನಿ ನಿಸಾರ, ಭಜನಾಮೇಳ ದವರ ತತ್ವಪದ ಗೀಪದ ಡಪ್ಪಿನ ಪದಗಳ ರಸತರಂಗದ ಮಾರ್ಧನಿ ಭೂಮಂಡ ಲವ ಭೇಧಿಸಿ ನಭೋಮಂಡಲವ ಭೇದಿಸುತ್ತಿತ್ತು, ಭೇದಿಸುತಿತ್ತು.

ಈ ಶಿವತೊತ್ತಿನ ಹುಟ್ಟು ಹಬ್ಬ ಬರೀಹಬ್ಬವಾಗದೆ ಜಾತ್ರೆಯಂತೆ ಉತ್ಸು ಕತೆ ತಂದಿತ್ತು, ಬಹುಜನ ತುಂಬಿತ್ತು. ಹಸುಗೂಸಿನ ಹೆಸರಿಡುವ ಕ್ಯಾರ್ಯಕ್ಕೆ ಜನರು ತಂಡೋಪತಂಡವಾಗಿ ಮಠದತ್ತ ಬರುತ್ತಿದ್ದಾರೆ. ಬರುವ ಸ್ತ್ರೀ-ಪುರು ಷರ ಸರತಿಯನ್ನು ಕಂಡರೆ ಗಂಗಾ ಜಮುನಾ ನದಿಗಳು, ಈ ಶಿವ ಶಿಶುವಿನ ಪಾದ ದರುಶನಕ್ಕೆಂದು ಮಠದತ್ತ ಹರಿದು ಹೊರಟಂತೆ ಕಂಡು ಬರತಾಯಿತ್ತು, ತೋರತಾಯಿತ್ತು. ಅದರಲ್ಲಿ ಸ್ತ್ರೀಯರ ಸರತಿ ಬಲು ವೈಶಿಷ್ಟತೆಯಿಂದಕೂಡಿತ್ತು

ಸಂಣನಡುವಿನ ಸಸಿನ ಮುಡುಪಿನ
ಎಂಣೆಗಂಪಿನ ಎಸೆವ ಮಿಂಚಿನ
ಕಂಣಗಪ್ಪಿನ ಕದವಿನೊಪ್ಪಿನ ಕೊರಲನುಣ್ಣರುಲಾ॥
ಅಂಣೆದಳೆ ಕದಲಿಸಿಯು ತೆಳುಕದ
ಬಂಣದುಡಿಗೆ ಬಹಳ ತೊಡಿಗೆಯ
ಹೆಂಣುಗಳು ಸಂದಣಿಸಿ ಬಂದರು ನಿರ್ಮಲಸುಮನೆಗೆ ॥

॥ ಅಕ್ಕನಕಾವ್ಯ ॥

ಮೂಗು ಸಂಪಿಗೆಯಂತೆ; ನಡ ನಾಗರದಂತೆ, ಮೊಗವು ಚಂದಿರನಂತೆ, ಕರ್ಣಾಧ್ವಯಗಳು ಶಂಖ ಮಲ್ಲಿಗೆಯಂತೆ, ನಯನದ್ವಯಗಳು ಮೀನಿನಂತೆ ಇರುವ ಹೆಂಗಳೆಯರು, ಬಾರಿಬಾರಿಗೆ ಶರಗ ಓರೆಸಸಿ ವಾರಿಗೆ ಪುರುಷರ ನೋಟ ಶೆಳೆಯುವ ನೋಟ, ಕಾಮಬಾಣದ ಕೂಟ್ಟವೆಂಬಂತೆ ಗೋಚರಿಸ್ತಾಯಿತ್ತು.

ಚಿಗುರಿನಂತೆ ಸುಕೋಮಲವಾದ ಪಾದಗಳು, ನುಣುಪಾದ ತೆಳುವಾದ ಬಾಳೆ ದಿಂಬಿನಂತಹ ತೊಡೆಗಳು, ಡಮರುಗದಂತೆ ಕೊಬ್ಬಿ ಉಬ್ಬಿದ ಶಿಗದ್ವಯಗಳು, ತೆಳುವಾಗಿ ಬಿಳ್ಪಾಗೆ ತಗ್ಗಿದ ಹೊಟ್ಟೆ, ಹೆಟ್ಟೆಯ ಮೇಲ್‌ಬದಿಗೆ ಮುಖವೆತ್ತಿನಿಂತ ಕುಚದ್ವಯಗಳು, ಮಂದಗಮನೆಗಳುಳ್ಳ ಸ್ತ್ರೀಯರ ಬಳಗ ಬಳಗ ಬಿಟ್ಟಿತ್ತು. ಈ ಲಲನೆಯರ ವರ್ಣನೆಯನ್ನು ನಿಜಗುಣ ಶಿವಯೋಗಿಗಳು ಬಲು ಸ್ವಾರಸ್ಯವಾಗಿ ಕೆಳಗಿನಂತೆ ವರ್ಣಿಸಿದ್ದಾರೆ.

ನಸುದೋರ್ಪ ಚಲ್ಮೊಲೆಗಳ ಲಾವಣ್ಯ ।
ರಸವೊಸರ್ವ ಮುದ್ದು ಮೊಗದಕಾಂತಿ ॥
ಪಸರಿಸುವ ನಿಡುಗಂಗಳ, ಜವ್ವನದ ।
ಮಿಸುನಿವಣ್ಣದ ಮೈಯವಳ ಕಂಡು ॥
ಜೊಲ್ಲೆಯುದ ಬಳಲು ಮುಡಿಯ ತೊಳಪ ಕೆಂ ।
ಬಲ್ಲು, ಕಂಬುಗ್ರೀವದ ಸೊಗಸ ॥
ಸುಳ್ಳ ಚೆಂದುಳಿಯ ಪೊಗರ ನಗುವತೆಳು ।
ಗಲ್ಲ ದಸಿಯಳ ರೀತಿಯು ಕಂಡು ॥
ಮುರಿದು ನೋಡುವ ನೋಟದ ಮುಗುಳ್ನಗೆಯ ।
ಸರಸ ಧನಿಗಲೆಯೆ ನುಡಿಯ ಸನ್ನೆ ॥
ವೆರೆಸಿ ತೋರುವ ಭಾವದ ಮೋಹ, ಮುಂ ।
ಬರಿವ ಸೊಬಗಿನ ಸುದತಿಯ ಕಂಡು ॥
ಸೂರು ಹೋಗದವರಾರು ? ..................................

ಈ ಎಲ್ಲ ಲಕ್ಷಣಗಳುಳ್ಳ ಸ್ತ್ರೀಯರ ಬಳಗ ಸರಾಗವಾಗಿ ಮಠದತ್ತ ಸಾಗಿತ್ತು, ಬಾಗಿತ್ತು.

ಹದಿನೆಂಟರ ಹರೆಯದ ಹಂದರದಲ್ಲಿ ಹದುಳ ವಿರಿಸಿ, ಹದಿಬದಿಯ ಧರ್ಮದಲಿ, ಹೆಗ್ಗಳವಾಗಿ ಬೆಳೆದ ಹುಡುಗಿಯರಲ್ಲಿ ಹುದುಗಿದ ರೂಪಿನ ಹುರುಪು, ಹೋಲಿಮರಣಿಯ ಹೆಂಡತಿಯನ್ನು ಹೀಯಾಳಿಸುತ್ತಿತ್ತು ಹೊಸ ಬೆಡಗಿನ ಹಾಡು ಹಾಡುತಿತ್ತು.

ಮಧ್ಯ ಬೈತಲೆ ತೆಗೆದು ಕುಂಕುಮದ ಬೊಟ್ಟಿಟ್ಟು, ದಪ್ಪಾದ ಸೀರೆಯುಟ್ಟು, ಮುಖತುಂಬ ಶೆರಗೊದ್ದು, ಸುಮಂಗಲಾಭರಣಗಳ ಮೈಯಲ್ಲಿಟ್ಟು,

ಸಾಂಗವಾಗಿ ಸಾಗಿರುವ ಸುಮಂಗಲಿಯರ ಸಾಲೊಂದು ಮಂಗಲಮಯವಾಗಿತ್ತು. ಮಾಂಗಲ್ಯಗಳ ಸಂಗಮವಾಗಿತ್ತು. ಏರಿಸಿ ತಲೆಬಾಚಿ ತಿದ್ದಿತೀಡಿ ಒಪ್ಪಾರಿ ಎಸಳು ಬೈತಲೆ ತೆಗೆಮ, ಮೇಲೆ ತೆಳ್ಳನ್ನ ಸೀರೆ, ಅದರ ಮೇಲೆ ಮಲ್ಲಿಗಪರಕೆ ಹೊದ್ದುಕೊಂಡು, ವಾರಿಗೆಯರ ಗಂಡ ಸರಬಿರಿ ನೋಡಿ, ಕಿರಿಕಿರಿ ಹಲ್‌ಕಿರಿದು ವಯ್ಯಾರದಿಂದ ಮುರುಕದ ಗಿರ್ಕಿ ಹೊಡಿದು ಮುಂದೋಡುವ ಸುವಾಸಿನಿಯರ ಗುಂಪೊಂದು ಸಾಗಿತ್ತು, ಗುಂಪಿಗೆ ಬಲು ಒಪ್ಪಿತ್ತು; ಎದೆಯ ದಿಬ್ಬದ ಮೇಲೆ ಕೊಬ್ಬಿ ದುಂಬಿದ ಮೊಲೆಗಳಿಗೆ ಉಬ್ಬಾಗದಂತೆ ಬಾಡಿಯನ್ನು ಬಿಗಿದು, ತೆಳುವಾದ ಜರದ ಜಂಪರ ದೊಟ್ಟು, ಸುವಾಸನೆ ತೈಲಗಳ ತಲೆಗೆ ಹಚ್ಚಿ ಬಾಚಿ, ನೀಳವಾದ ಜಡೆಕಟ್ಟಿ, ಗಮಗಮಿಪ ಮಲ್ಲಿಗೆ ಹೂಗಳನು ಜಡೆಗಿಟ್ಟು, ನಾಯ್ಲಾನ್ ಸೀರೆಯನುಟ್ಟು, ಚಿಕ್ಕಗಾತ್ರದ ಕಪ್ಪು ಹಣೆಗಿಟ್ಟು, ಚುಕ್ಕೆ ಬಳೆಗಳ ಕೈಗಿಟ್ಟು; ಬಲು ವೈಯ್ಯಾರದಿಂದೊಪ್ಪಿರುವ ನಾರಿಯರ ಗುಂಪೊಂದು ಕಡೆಗಿದೆ, ಬಲು ಬೆಡಗಿದೆ.

ಈಪ್ರಕಾರ ಹಲವು ಜಾ (ನೀ) ತಿಯ ಸ್ತ್ರೀಯರು ನಮ್ಮೀ ಚರಿತ್ರ ನಾಯಕನ ಹುಟ್ಟುಹಬ್ಬಕ್ಕಾಗಿ ಬಂದಿದ್ದಾರೆ ಬರುತ್ತಿದ್ದಾರೆ. ಸ್ತ್ರೀಯರಂತೆ, ಸುಂದರಿಯರ ಸುಂದರ ಮೊಗಕಂಡು ಕತ್ತೆತ್ತಿ ನೋಡಿ ಹಲ್‌ಕಿರಿದು, ಬಾಯ್‌ದೆರೆದು ಗುಳುಗುಳು ವುಗುಳುನುಂಗುವ ಗಂಡುಮಂಗಗಳೂ ಕೆಲವರು ಬಂದಿದ್ದಾರೆ. ಬರುತ್ತಿದ್ದಾರೆ.

ಇನ್ನು ಗ್ರಾಮದ ನ್ಯಾಯಕರು ದಾಯಕರು, ಕಿರಿಯರು ಮುದಿಯರು, ಗುರುಗಳು, ತಾಯಿಗಳು, ವೈದಿಕರು, ನಾದಿಕರು, ಸಮಸ್ತರು ಬಂದಿದ್ದಾರೆ, ಮಠದ ಆವಾರದಲ್ಲಿ ಸಿಂಗರಿಸಿದ ತಳಿರು ಮಂಟಪದಲ್ಲಿ ಬೀಡು ಬಿಟ್ಟಿದ್ದಾರೆ. ಈ ಅಪಾರ ಜನದಂದಣಿಯ ಗುಜುಗುಜು ಗದ್ದಲಕ್ಕೆ ಶಹಬ್ಬಾಶ್ ಕೊಟ್ಟಂತೆ ಅಮ್ಮಾ.... ರೊಯ್.... ಎಂದು ಚೀರಾಡುವ ಕಂದಮ್ಮಗಳ ಕೇಕೆ ಎಲ್ಲಿ ನೋಡಿದಲ್ಲಿ ಜನರ ಪಿಸುಮಾತಿನ ಹರುಷಾಲಹರಿ. ಒಟ್ಟನಲ್ಲಿ ಈ ಮಠವಾಗಿತ್ತು ಗದ್ದಲದ ಗುಂಡಾರ; ಭಕ್ತಿಯ ಭಂಡಾರ, ಅದೆಂತು ಸಡಗರ.

ಫೋಟೋ ತೆಗೆಯಿಸುವವನ ದೃಷ್ಟಿಯನ್ನು ಸಂಪೂರ್ಣ ತನ್ನೆಡೆಗೆ ಸೆಳೆಯುವ ಕ್ಯಾಮರಾದಂತೆ, ಈ ಎಲ್ಲ ಜನರ ದೃಷ್ಟಿಯನ್ನು ಸೆಳೆದಿದೆ ಮಠದ

ಹಜಾರದಲ್ಲಿ ಶ್ರಿಂಗರಿಸಿದ ಚಿನ್ನದೊಟ್ಟಲು, ತರತರದ ಮಣಿಗಳಿಂದೊಪ್ಪುವ ಬಾಲ್ಯ ಬಟ್ಟಲು,

ನೋಡು ನೋಡುತ್ತಿರುವಂತೆ ಎಲ್ಲ ಜನರು ಮೌನದ ಮಾಯಾಮೋಹ ಮನ ಸೋತರು; ಮೌನಿಗಳಾದರು. ಈಮೌನದಲ್ಲಿ ಮತ್ತೊಂದು ದೊಡ್ಡಗದ್ದಲ ಪಾಪ ಅವುಗಳ ಮನಸ್ಸಿಗೇನೋ ಒಂದು ತರಹದ ಗೊಂದಲ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿವೆ. ಜನರ ನೇತ್ರದ್ವಯಗಳು ಅವುಗಳಿಗೆ ............ ಮುದ್ದು ಮಗನನ್ನು ನೋಡಬೇಕೆಂಬ ಬಯಕೆ ಹೆಚ್ಚಾಗಿದೆ ಚಪಲಹುಚ್ಚಾಗಿದೆ.

ಪಂಚ ಮುತ್ತೈದಿಯರು ಮುತ್ತಿನಾರತಿಯೆತ್ತಿ ಸ್ವರತೆತ್ತಿ ಪಾಡುತ್ತಿದ್ದಾರೆ. ಮಧ್ಯದಲ್ಲಿ ಹಸನ್ಮುಖದಿಂದ ಒಪ್ಪಿದ್ದಾಳೆ ತಾಯಿ ಸಿದ್ಧಾಂಬೆ.

ಜೋ ಜೋ ಶಿವಸತ್ಕುಲತಿಲಕ ಜೋ
ಜೋ ಜೋ ಮುಮುಕ್ಷುತ್ಕಮಲನಾಕ ಜೋ
ಜೋ ಜೋ ಹಾನಗಲ್ ಜೋಗಿಯ ಸುತನ ಜೋ
ಜೋ ಜೋ ಅನುಭಾವಿಗಳ ಪಿತನೆ ಜೋ
ಜೋ ಜೋ ರೇವಣ ಸಿದ್ದೆಯರ ಕಂದ ಜೋ
ಜೋ ಜೋ ತವ ತತ್ವದರವಿಂದ ಜೋ
ಜೋ ಜೋ ಶೃಷ್ಟಿಯೊಡೆಯನಣುಗನೆ ಜೋ
ಜೋ ಜೋ ಪುಟ್ಟಾರ್‍ಯ ಸುನಾಮಕನೆ ಜೋ

ಎಂದು ಜೋಗುಳ ಪಾಡುತ್ತ ಪುಟ್ಟಾರ್‍ಯ ಪುಟ್ಟಾರ್‍ಯ. ಕುರ್............ ಪಟ ಪಟ ಪಟ ಪಟ ...................... ಶಬ್ದಗಳ ತಾಕಲಾಟ ಇದ್ದಕಿದ್ದಂತೆ ಈ ಮಂಗಲ ಸಮಯದಲ್ಲಿ ಬಡಿದಾಟ ಸುರುವಾಗಿ ರಂಭಾಟ ಪ್ರಾರಂಭವಾಗ ಬೇಕೆ ? ಎಂದು ಭಯಾಶ್ಚರ್ಯದಿಂದ ನುಡಿದರು ಕೆಲವು ಜನರು. ಆದರೆ.... ..................ಆದದ್ದೇ ಬೇರೆ ತರ್ಕಿಸಿದ್ದೇ ಬೇರೆ. ಬಡಿಸಿಕೊಂಡ ಜನರುಅತ್ತು ಕಂಣೀರುದಿರಿಸಲಿಲ್ಲ. ಪ್ರತಿಯಾಗಿ ನಗುತ್ತ ಪುಟ್ಟಾರ್‍ಯ ಪುಟ್ಟಾರ್‍ಯ ಕುರ್........ ಎಂದು ಮತ್ತೆ ಮತ್ತೆ ಕೂಸಿನ ಕಿವಿಯಲ್ಲಿ ಕೂಗಿದರು........................... ಪಟ ಪಟ ಪಟ ಪಟ ...................... ಈ ಶಬ್ದಗಳ ತಾಕಲಾಟ ದೊಡನೆ ಕರತಾಡನದ ಸುರಿಮಳೆ.

ಶೃಷ್ಟಿಯ ಬೆಳಗಲು ಬಂದ ಪುಟ್ಟಾರ್ಯ ।
ನಿಷ್ಟುರವೀಸುಡಿಯ ಚಂದ ಪುಟ್ಟಾರ್ಯ ॥

ಎಂದು ಸ್ವರಗೂಡಿ ಗಾನಮಾಡ ಹತ್ತಿತ್ತು ಜನಸ್ತೋಮ ...............

ರಾಗಂ ಮೆಗೆ ಸಪ್ತರ್ಷಿ
ಸ್ತ್ರೀಗಣ ಮೊಲವಿಂದೆ ಲಲಿತೆ ಬಂಗಾಳಂ ಶ್ರೀ
ರಾಗಂಗಳೊಗೆಯೆ ಪಾಡುತೇ
ತೂಗಿದರಖಿಳ ಪ್ರಪಂಚವಾಡಿಪಶಿಶುವಂ

॥ಗಿರಿಜಾಕಲ್ಯಾಣ॥

ಹುರುಪು ಹೂಮ್ಮಸ್ಸುಗಳ ಹೂಂಕಾರದಲ್ಲಿ ತೊಟ್ಟಿಲು ತೂಗಿತು. ಮಗುವಿನ ಮುಖನೋಡಲು ಜನ ಸರಸತಿಯಂತೆ ಸಾಗಿತು.

ಓತುಕೊಂಡಾಡುತಂ ಹರಸುತಂ
ಹೊಸ ಹೊಸ ಪರಿಯ ಸಿರಿಯಿ ನೇಮದ ಚಲರ್ ಕೆಲರು
ಕುಸುಮವಂಕೊಡದೆ ಪರಿಮಳವ ನೀವರ್ ಕೆಲರು
ಮಜ್ಜನಕ್ಕೆರವೂತಂ ಕರಗುತಿರ್ಪರ್ ಕೆಲರು
ಉಜ್ಜ್ವಳಿಪ ಲಿಂಗಮಂ ನೋಡುತಿರ್ಪರ್ ಕೆಲರು
ಪೂಜೆಯಂ ಮಾಡಿ ಪುಟವೆದ್ದಾಡುವರ್. ಕೆಲರು
ಪೂಜಿಸುತೆ ಕಂಡಿಸುತೆ ಕೈಮರೆವರ್ ಕೆಲರು
ದೇವನಂ ನೋಡಿದಳ ವೇರುತಿಪ್ಪರ್ ಕೆಲರು
ಶಿವಲಿಂಗಮಂ ಮುಟ್ಟಿಮೆರೆಯುತಿಪ್ಪರ್ ಕೆಲರು
ತವಕದಿಂ ಸ್ತುತಿಯಿಸುತೆ ಗದಗದಿಸುವರ್ ಕೆಲರು
ಹಾಡಬೆಂದನುಗೆಯ್ದು ನೋಡು ತಿಪ್ಪರ್ ಕೆಲರು
ನೋಡಲೆಂದನುಗೆಯ್ದು ಹಾಡುತಿಪ್ಪರ್ ಕೆಲರು
ಆಡುತಾಡುತೆ ಮೀರಿ ಮಸಗಿ ಕುಣಿವರ್ ಕೆಲರು
ನೋಡಿ ನೋಡುತ್ತಲೆವೆಯಿಕ್ಕದಿಪ್ಪರ್ ಕೆಲರು
ಶಿವ ಶಬ್ದಮಂ ಕೇಳ್ದು ಪುಳಕಿಸುವವರ್ ಕೆಲರು
ಶಿವನೊಡನೆ ಮುನಿಮುನಿದು ಜಿನುಗಿತಿಪ್ಪರ್ ಕೆಲರು
ಧೂಪಮಂ ಮರೆಹಾರತಿಯನೆತ್ತಿವರ್ ಕೆಲರು
ದೀಪಮಂ ಧೂಪಮೆಂದರ್ಚಿಸುವವರ್ ಕೆಲರು

॥ ಪ್ರಭುದೇವರ ರಗಳೆ ॥

ಹರಿಹರನ ರಗಳೆಯ ಭಾವ ನಮ್ಮೀ ಪುಟ್ಟಾರ್ಯನನ್ನು ನೋಡಿ ಆನಂದಿಸು ವವರ ಜೀವನಾಡಿಯಲ್ಲಿ ಮಿಡಿಯುತ್ತಿತ್ತು.

ಪ್ರತಿಯೊಬ್ಬರು ಪುಟ್ಟಾರ್ಯ ನನ್ನು ನೋಡಿ ನಯವಾಗಿ ತೀಡಿ, ಪುಟ್ಟಾರ್ಯ ಪುಟ್ಟಾರ್ಯ !! ಬಿಟ್ಟಾರ್ಯ ! ನೆಂದು ಹಾಡಿ ಎತ್ತಿ ಪಾಡಿ, ಹಾಲಗುಗ್ಗರಿ ತೆಗೆದು ಕೊಂಡು ಕಡುಭಕ್ತಿಯಲಿ ನುತಿಸಿ; ಪೂಜಿಸಿ, ನಮಿಸಿ, ಭಜಿಸಿ ಬಿಜಯಂಗೈ ಸಿದರು.

ಹುಟ್ಟು ಹಬ್ಬದ ಕಾರ್‍ಯಕ್ರಮ ಮುಗಿಯಿತು. ಸೃಷ್ಟಿಯ ವ್ಯವಹಾರ ಯಥಾವತ್ತಾಗಿ ಸಾಗಿತು..................................................

ಸಂಸಾರದ ಸಂಕೋಲೆಗಳಿಗೆ ಸೋಂಕಿಸದೆ ಶಂಕಿತವಾಗದೆ ಸರ್ವಸ್ವತಂತ್ರ ನಾಗಿ ಶಿವನಾಗಿ ಭುವಿಯಲ್ಲಿ ಸಡಗರದಿ ಸಾಗುವೆನು. ಎಂದು ಧೀರವಾಣಿ ಸೂಚಿ ಸುವಂತಿತ್ತು ಬಾಲ ಪುಟ್ಟಾರ್ಯನ ಗೆಲುವಿನ ನಗು.

ಅಷ್ಟು ಸಾಮರ್ಥ್ಯ ನಿನಗಿದೆಯೆ ? ನನ್ನ ಸ್ವರಾಜ್ಯದಲ್ಲಿ ? ಎಂದು ಕರಾಳ ರೂಪು ಧರಿಸಿನಿಂತ ಮಾಯೆಯನ್ನು ಕಂಡು ಅಂಜಿ ಚಿಟ್ಟನೆ ಚೀರಿ ಪುಟ್ಟಾರ್ಯ ನಡುಗತ್ತಿದ್ದನೋ ಏನೋ ಅಂಬುವಂತೆ ಆವನ ಬಾಲ್ಯದಳುವು ಸೂಚಿಸುತ್ತಿತ್ತು.

ಕೂಸಿನ ಅಳುವು ಕುಕ್ಕಿಸಿದ ತಾಯಿ ಧಾವಿಸಿಬಂದು ಮಗುವನ್ನಪ್ಪಿ, ಸೆರ ಗೊಡ್ಡು; ಮೊಲೆಯುಣಿಸಿ, ಜೈ ಜೈ ಬಡಿದು,ಮೃದುವಾಗಿ ಮುದ್ದಿಟ್ಟು, ಮತ್ತೆ ಮಲಗಿಸಿ, ತೊಟ್ಟಿಲು ತೂಗಿ, ಜೋಗುಳ ಪಾಡುವಳು.

ಮರುಕ್ಷಣದಲ್ಲಿ ಮತ್ತೆ ನಲ್ ನಗೆಯು ಬೀರಿಕೂಸು ಆಡಹತ್ತಿತು. ಸಂತೋಷದಿಂದ ಮೈ ಕುಲುಕಿ ನಲಿದಾಡಹತ್ತಿತು.

ಮುದುಡಿದ ಮುಷ್ಟಿಯಿಂದ ತೊಟ್ಟಿಲ ತೋಳುಗಳಿಗೆ ಬಡಿಯುವದನ್ನೂ ಕಂಡರೆ, ಎಲವಮಾಯೆ! ನನಗೆ ಅಂಜಿಸಲು ಬರುತ್ತೀಯಾ ? ಆದಿಶಕ್ತಿಯ ಪರಾ ವತಾರಿಯಂತಿದ್ದ ನನ್ನಪ್ಪನ ಹರಕೆ ನನ್ನ ತಲೆಯ ಮೇಲಿರುವ ತನಕ ನಿನಗೆ ನಾನು ಅಂಜುವದಿಲ್ಲ. ನನ್ನ ಸಮೀಪ ಬರಬೇಡ ! ನನ್ನೀ ಮಾತನ್ನು ಮೀರಿ ಸಮೀಪ ಬಂದದ್ದಾದರೆ ನಿನ್ನನ್ನೂ ಗುದ್ದಿ ಕೊಲ್ಲುತ್ತೇನೆ. ಎಂದು ಗದ್ದರಿಸುವ ಭಾವ ಬಿಂಬಿಸುತ್ತಿತ್ತು.

ಎಳೆ ಮಧ್ಯಾಂಥವಾಯಿ, ನಿನ್ನ ತಲೆಯ ಮೆಟ್ಟಿ ವಿರಾಗಿ ಜೀವನ ಸಾಗಿಸು ತ್ತೇನೆ ಎನ್ನುವ ಧೀರತೆ ತುಂಬಿತ್ತು ಅಲ್ಲಾಡಿಸುವ ಪುಟ್ಟ ಕಾಲುಗಳಲ್ಲಿ.

ಮತ್ತೆ ತಾಯಿಯು ನೋಗಕಂಡು ಸೋಗದಿಂದ ನಗುತ್ತ ಕೈಕುಲುಕವದನ್ನು ಕಂಡರೆ, ತಾಯಿಯ ಜೋಗುಳದ ಹಾಡಿಗೆ ತಾಳ ಹಾಕುವಂತೆ ತೋಡಿತಾ ಯಿತ್ತು. ಸಾರತಾಯಿತ್ತು.

ಬಾಯ್‌ದೆರೆದು ಧ್ವನಿದೆಗೆದರೆ ಸಂಗೀತ ಸ್ವರಗಳು ಶ್ಪತ್ತಿ ಸಂಗವೋರಿ ಕಾರವಂತೆ ಕಾಣುತಿತ್ತು ಕೂಸಿನ ಹಲ್ಲಿಲ್ಲದ ಮುದ್ದು ಮೃದುವಾದ ಬಾಯಿ.

ತಾಯಿ ಮುಗ್ಧ್ಗುಲ ತಂಪಿನೊಳುಂ ನೊಲೆವಾಲಿಂಪಿನೊಳುಂ
ತೊಟ್ಟಿಲು ತೂಕದೊಳುಂ ರಾಗಿಸುವರ ಜೋಗುಳದೊಳುಂ
ಸಾಗಿಸುವರ ಸೋಗಿಲೋಳಂ ಎತ್ತಿ ಕೊಂಬರಳ್ತಿಯೊಳಂ
ಮುಟ್ಟುವರ ಮೋಹದೊಳುಂ ಸೋಕುವರ ಸುಖದೊಳುಂ
ತಕ್ಕೈಗೆ ಸುವರಪ್ಪಿನೊಳುಂ ಶಶಿಕಳೆಯಂತೆ ದಿನದಿನಕೆ ಕಳೆ
ಯೇರಿ ನಳನಳಿಸಿ ಬೆಳಗುತಿರ್ಪ ಮಹಾದೇವಿಯಕ್ಕಂ

ಹರಿಹನ ಅಕ್ಕಮಹಾದೇವಿಯಂತೆ ಬಾಲಾರವಿಂದನಾಗಿ, ಸಿದ್ಧಾಂಬೆಯ ಹೃದಯ ಸರೋವರದಿ ಅರಳಿ, ಊರ ಜನತೆಯ ಸುಖ–ಶಾಂತಿ ಮಕರಂದ ವನ್ನು ಬೀರ ಹತ್ತಿದನು ಪುಟ್ಟ ಪುಟ್ಟಾರ್ಯ, ಜಗದಾರ್ಯ.

ಕೈಯಲ್ಲಿ ಭಂಗಾರದ ಕಡಗ (ತೊಡೆ,) ಕಾಲಲ್ಲಿರುಳಿ, ಕಿವಿಯಲ್ಲಿ ಮುರು ವುಗಳನ್ನೂ ಹಾಕಿದ್ದಾಳೆ. ತಾಯಿ. ದಿನಕ್ಕೆರಡು ಬಾರಿ ಎಣ್ಣೆ ಹಚ್ಚಿ, ಮೈ ಕೈ ತಿಕ್ಕಿ, ಬಿಸಿನೀರಿನಿಂದೆರೆದು, ಭಸ್ಮಧರಿಸಿ ಬಣ್ಣ ದುಡಿಗೆಗಳ ತೊಡಿಸಿ, ಧೂಪದ ಹೊಗೆ ಹೊತ್ತಿಸಿ, ತೊಟ್ಟಿಲಲ್ಲಿ ಮೆತ್ತನ್ನ ಹಾಸುಗೆಯ ಮೇಲೆ ಮಲಗಿಸಿ ಜೋಗುಳ ಪಾಡಿ, ಮತ್ತೆ ಮತ್ತೆ ಮೊಲೆಯುಣಿಸಿ, ಕೂಸಿಗೆ ಯಾವ ತರಹದ ತೊಂದರೆಯಾಗದಂತೆ ಪಾಲನೆ ಮಾಡುತ್ತಾಳೆ. ತಾಯಿ ಸಿದ್ಧಾಂಬೆ, ಜಗದಂಬೆ

ಮನೆ ಮುದ್ದಾಗಿ; ಮನಮುದ್ದಾಗಿ; ಜಗಮುದ್ದಾಗಿ ಬೆಳೆಯ ಹತ್ತಿದ ನಮ್ಮ ಪುಟ್ಟಾರ್ಯ; ಶ್ರೇಷ್ಠಾರ್ಯ.

ಎಲ್ಲರೆತ್ತು ರೆಲ್ಲರಪ್ಪ ಪ
ರೆಲ್ಲರಾಡಿಪರೆಲ್ಲ ರೀಕ್ಷಿಪ
ರೆಲ್ಲರಾಶಿಪರೆಲ್ಲ ರೋಲೈಸುವರು ಲಿಂಗಿಗಳು
ಎಲ್ಲ ರೊಲಿಸುವರೆಲ್ಲ ರುಳಿಸುವ
ರೆಲ್ಲರೊಸೆಯಿಪರೆಲ್ಲ ರೆಸೆಯಿಪ
ರೆಲ್ಲ ರಿಸಿರಿಪರೆಲ್ಲರುರೆ ಬಿನದಿಪರು ಬಂಧುಗಳು.

|| ಶಿವಬಸವ ಪುರಾಣ ||

ಈ ರೀತಿ ಸಮಸ್ತರ ತೋಳದೊಟ್ಟಿಲಲ್ಲಿ ಮೆರೆದಾಡಿದನು ಈ ಶಿಶು. ಹುಸಿನಗುತ್ತ ಗೇಲಿಯತಡುತ್ತ, ನಗೆಬೀರಿಹಲ್ಕಿರಿಯುತಾ. ಬಾಗುತ್ತ ಬೀಳುತ್ತ ಏಳುತ. ಕೇಕೆಹಾಕುತ್ತ ಭೂಮಿತಾಯಿಯ ಬೆನ್ನಮೇಲೆ ಬಪ್ಪು ಬಾರಲು ಬಿದ್ದು ಒದ್ದಾಡಲು ಸಿದ್ಧವಾಯಿತು, ಈ ಕಾರಣಿಕ ಕುಮಾರ ಶಿವಯೋಗಿಯ ಕಾರು ಣ್ಯದ ಶಿಸು. ಹೊಡೆಸೂಸುವ ತೆನೆಯಂತೆ ಮೊಗ್ಗೆ ಬಿಟ್ಟ ಬಳ್ಳಿಯಂತೆ ಬಿದಿ ಗೆಯ ಚಂದಿರನಂತೆ ಕೂಸು ಕುಸಿಯಿಂದ ಬೆಳೆಯ ಹತ್ತಿತು.

ಹೀಗಿರುತ್ತಿರಲು ಒಂದು ಅಜಾತ ಘಟನೆ ನಡೆಯಿತು.

ಹಿಂದೆ ಮಾಡಿದ ಕರ್ಮದಬುತ್ತಿ
ಇಂದುಣಬೇಕೆಲೆ ಮನುಜಾ

ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವನ್ನು ಈ ಜನುಮದಲ್ಲಿ ಅನುಭ ವಿಸಬೇಕು, ಇದು ದೇವನ ನೇಮ. ಈ ನೇಮ ಪ್ರತಿಯೊಬ್ಬರಿಗೂ ಇದೆ. ಕನಕದಾಸರು ಹಲವು ದಿವಸ ಹೊಟ್ಟೆನೋವಿನ ಬಾಧೆಯಿಂದ ಬಳಲಿದರು. ಇವರಂತೆ ನಮ್ಮೀ ಶಿವಶಿಶು ಹಿಂದಿನ ಕರ್ಮದನುಗುಣವಾಗಿ ಶಿಡುಬು ರೋಗ ದಿಂದ ಬಳಲಿ ಬೆಂದಿತು. ಇದರ ಪರಿಹಾರೋಪಾಯಕ್ಕಾಗಿ ತಾಯಿ ನಾನಾ ರೀತಿ ಉಪಚರಿಸಿದಳು ಆದರೂ ಹಿಂದಿನ ಕರ್ಮ ರೊಚ್ಚಿಗೆದ್ದಿತು, ಶಿಡುಬಿನ ಪ್ರತಾಪದ ತಾಪ ಹೆಚ್ಚಾಯಿತು. ಕ್ರಮೇಣ ಮೈತುಂಬ ಹಬ್ಬಿ ಕಂಣಲ್ಲಿ ಸುಳಿಯಾಗಿ ಕಂಣು ಮುಚ್ಚಿಸಿತು. ಮುಚ್ಚಿದ ಕಂಣು ತಾಯಿಯ ಉಪಚಾ ರದ ಕೈವಾಡಕ್ಕೆ ಶಿಲುಕದೆ, ತೆರೆದು ಸೃಷ್ಟಿಯ ನೋಡದೆ ಸಿಕ್ಕಿಯವಾಗಿ ಮುಚ್ಚಿ ಬಿಟ್ಟಿತು. ಕಂಣು ಮುಚ್ಚಲೇಬೇಕಾಗಿತ್ತು. ಕುಮಾರಯೋಗಿಯ ವೇದ

ವಾಕ್ಯದಂತೆ ಗುರುಬಸವಾರ್ಯನ ಪಾರ್ಟ ಸಿದ್ಧವಾಗಬೇಕಾಗಿತ್ತು, ಮಾಯೆ ಯುಕ್ತವಾದ ಪ್ರಪಂಚವನ್ನು ನೋಡಬಾರದಿತ್ತು, ದೈವ ಈರೀತಿ ಬರೆದಿತ್ತು, ದೇವನದಾರಿ ಹೀಗಿತ್ತು. ಅಂತೂ ಕಂಣು ಕೊನೆಯವರೆಗೂ ಮುಚ್ಚಿತು, ಕೂಸು ಕುರುಡಾಯಿತು, ದೃಷ್ಟಿ ಬರಡಾಯಿತು.

೫ ತಿಂಗಳಕೂಸು ಪುಟ್ಟಾರ್ಯನ ಕಂಣು ಹೋದದ್ದು ಕಂಡು ತಂದೆ ತಾಯಿಗಳಾದ ರೇವಣಾರ್ಯ ಸಿದ್ಧಾಂಬೆಯರಿಗೆ ಅಪಾರ ದುಃಖ ವಾಗತಾಯಿದೆ. ಮುದ್ದು ಮಗುವಿನ ಶುದ್ಧ ದೃಷ್ಟಿ ಬಿದ್ದು ಹೋದಾಗ ಹಡೆದ ಕರುಳು ಅದೆಷ್ಟು ಸಂತಾಪ ಪಡುತ್ತದೆ. ಎಂಬುದನ್ನು ಬೇರೆ ಹೇಳಬೇಕೆ ? ...........ಹೇ ಶಿವನೇ ನನ್ನ ಮಗನ ಮೇಲೆ ಈ ರೀತಿ ಕಾಡುವದು ಜಗಕರ್ತನಾದ ನಿನಗೆ ಶೋಭೆಯೇ ನಿನಗೆ ಸಿಟ್ಟು ಬಂದಿದ್ದರೆ ನಮ್ಮ ಕಣ್ಣು ಕಳೆಯ ಬೇಕಾಗಿತ್ತು, ಏನೊಂದರಿಯದ ಈ ಹಸುಳೆಯ ಮೇಲೆ ನಿನ್ನೀ ಕಾಕ ಕೈವಾಡವೆ ? ಎಂದು ಗೋಳಾಡುತ್ತಿದ್ದಾರೆ ದಂಪತಿಗಳೀರ್ವರು.................................................

ತೊಟ್ಟಿಲು ತೂಗಿತೂಗಿ ಕೊನೆಗೆ ತನ್ನ ಸ್ಥಾನದಲ್ಲಿ ನಿಲ್ಲುವಂತೆ, ಘೋರ್ಗರೆಯುವ ಸಮುದ್ರ ಮತ್ತೆ ಶಾಂತ ವಾಗುವಂತೆ; ಈ ದಂಪತಿಗಳ ದುಃಖದ ಕಡಲು ಘೋರ್ಗರೆದು ಬಳಲಿ ಬೆಂಡು, ಕೊರಗಿ ನೊರಗಿ ಶಮನದ ಶಲಾಕೆಯಲ್ಲಿ ಶಿಲುಕಿ ಶಾಂತಿಯುತವಾಗತಾಇದೆ.

ರೂಪದಲ್ಲಿ ಸುಂದರವಾದ ಈ ಪುಟ್ಟಾರ್ಯ ಕೊನೆಗೆ ಭೂಲೋಕದಿಂದ ದೇವಲೋಕಕ್ಕೆ ಹಾರಿ ನನ್ನ ಸ್ಥಾನವೇರಿ, ನನ್ನನ್ನು ರತಿವಿರಹಿತನನ್ನಾಗಿ ಮಾಡಬಹುದು ಎಂದು ಮುಂದಾಲೋಚನೆಯ ಕಾಮನು ಈ ಕೂಸಿನ ಕಂಣು ಕಳೆದಿರಬಹುದೆ ?

ಜಗತ್ತಿನ ಅನ್ಯಾಯ ಅನಾಗರಿಕತೆಗಳ ಅಸಂಬಂಧ ಅಸಹ್ಯ ದೃಶ್ಯಗಳನ್ನು ನೋಡಿದರೆ ನನ್ನ ಮಗನಿಗೆ ಕೇಡುತಪ್ಪಿದ್ದಲ್ಲವೆಂದು ಶಿವನೇ ಈ ಕೂಸಿನ ಕಂಣು ಕಿತ್ತುಕೊಂಡಿರಬಹುದೆ ?

ಅಂತೂ ಇಂತೂ ಪುಟ್ಟಾರ್ಯನ ದಿಟ್ಟಿ ಬೋಳಾಯಿತು, ಹೊರಗಿನ ಬೆಳಕು ಬಯಲಾಯಿತು........... ಒಳಗಿನ ಸುಬೆಳಕು ಬೆಳಗಿತು. ನೋಡದ

ಮರೆಯಲ್ಲಿ ಮರೆಯಾದ ಸೂರ್ಯನಂತೆ ಪುಟ್ಟಾರ್ಯನ ಒಳಗಣ್ ಬೆಳಕು ಅಪ್ರತ್ಯಕ್ಷವಾಗಿ ಬೀರಿ ಏರಿ ತಂದೆ ತಾಯಿಗಳ ದುಃಖಸಂಘಃಕಾರವನ್ನು ತುಂಡರಿಸಿಬಿಟ್ಟಿತು. ಕಾಲಕ್ರಮದಿ ಈ ಕಣ್ಣಿಲ್ಲದ ಕೂಸು ಕಣ್ಣಿದ್ದವರ ಮನೆ ಮನಗಳನ್ನು ಬೆಳಗುವ ರನ್ನ ದೀಪವಾಯಿತು. ಪುಟ್ಟಾರ್ಯನ ಕಣ್ಣು ಕುರುಡಾದರೆ, ಚೆನ್ನ ಮೊಗಕುರುಡಲ್ಲ, ದೇಹ ಕೊರಡಲ್ಲ....... ಮಾಘ ಮಾಸದ ಮಾಂದರಿಳಿನಂತೆ ದೇಹ ಚಿಗಿಯಹತ್ತಿತು, ಬೆಳೆಯಹತ್ತಿತು.

ನಗೆಯಾಡಿ ದೂರ ದೂರ ಹರಿದಾಡಿ ಸರಿಸರಿದು ಹೊಸದಾಡಿ ಅಂಬೆಗಾಲಿಕ್ಕಿ ನಡೆದಾಡಿ ತಂದೆ-ತಾಯಿಗಳ ಚಿಂತೆಯ ಚೆಡಿಯನ್ನು ಸುಡಿಸಿ ದೂರ ಸಿಡಿಸಿ, ಅದರಾಸೆ ಬಿಡಿಸಿ, ಸುಖದ ಖಡಿಯಲ್ಲಿ ಮುಡಿಸಿ, ಆನಂದಿಸಿ, ನಗಿಸಿ ತಾನು ನಕ್ಕು ಚಪ್ಪಾಳೆತಟ್ಟಿ ಕೇಕೆ ಹಾಕುತ್ತಿದ್ದ ನಮ್ಮ ೬ ತಿಂಗಳ ಕುರುಡ ಪುಟ್ಟಾರ್ಯ.

ಅಶಾಂತಿ ರಾಗ ಮಾಡುತ್ತ, ಚಿಂತೆಯ ತಂತಿ ಹಿಡಿದು ಮೀಟಿ; ಕ್ರಾಂತಿ ರಸದ ಹಾಲಾಹಲ ಹರಿಸಿ, ಭ್ರಾಂತಿಯ ಭವಾಂಧಿಯಲ್ಲಿ ಬಿದ್ದವರೂ ಬಿದ್ದು ಒದ್ದಾಡುವವರೂ, ಭವದ ಬೇಗುದಿಯಲ್ಲಿ ಬೆರೆತು ಸೋತು ಹೋದವರೂ, ಕಷ್ಟದ ಕಂಬೆಂಕಿಯಲ್ಲಿ ಸುಟ್ಟು ಬಾತುಹೋದವರೂ ಈ ಶಿವಶಿಶುವಿನ ಮುಖ ಕಂಡರೆ, ಅವರ ತಾಪತ್ರಯಗಳ ಪಾತ್ರೆ ಬರಿದಾಗಿ, ಶಾಂತಿ-ಸುಖಗಳಿಂದ ತುಂಬುತ್ತಿತ್ತು, ತುಳುಕಾಡುತ್ತಿತ್ತು. ಇಂಥಾ ಶಕ್ತಿ ಅಡಗಿತ್ತು ಪುಟ್ಟ ಮೊಗದಲ್ಲಿ, ದಿಟ್ಟ ದೇಹದಲ್ಲಿ, ದಿಟ್ಟಿಯಿರದ ಪುಟ್ಟಾರ್ಯನಲ್ಲಿ.

ಈರೀತಿ ಬಾಲ್ಯದ ಮೂಡಣದಿ ಮೂಡಿ, ಮೇಲೆ ಓಡಿ, ಭುವನ ಬೆಳಗುವ ಭೂಭಾನುವಿನಂತೆ ಬಾಳ ಬಾನಲಿ ಪುಟ್ಟಾರ್ಯ ಬೆಳೆದು ವರುಷದ ಮೆಟ್ಟಲು ಹತ್ತಿ, ಋತು, ನಿಂತ ವಸಂತ. ಅವ್ವಾ, ಅಪ್ಪಾ, ಎಂದು ನಲ್ದನಿದೆಗೆವರೆ ವಸಂತ ಕೋಗಿಲೆಯ ಆಗಮನವಾದಂತೆ ಆನಂದವಾಗುತ್ತಿತ್ತು ಕಣ್ ವೃಂದಗಳಿಗೆ, ಜಗದ ಬಂಧುಗಳಿಗೆ. ಹಟಮಾಡಿ ಕಾಟಕೊಟ್ಟು ಆಟದ ಸಾಮಾನು ಬೇಡಿ, ಊಟದ ತಿನಿಸು ಬೇಡಿ ಕಾಡುವ ಕಾಡುಮೃಗದ ಸ್ವಭಾವು, ಅಭಾವವಾಗಿತ್ತು, ಅನಕಿವನಲ್ಲಿ ಪರಾಭವ ಹೊಂದಿತ್ತು.

ಪುಟ್ಟಾರ್ಯನ ದೇಹದ ಸ್ಥಿತಿ, ವಯದ ಮಿತಿ ಚಿಕ್ಕದಾದರೂ ಇವನ ಚಾಣಕ್ಯದ ಗತಿ ಚಿಕ್ಕದಲ್ಲ ಮತಿ ಚಿಕ್ಕದಲ್ಲ. ರೇವಣಾರನು ಒಂದುದಿನ ಪುಟ್ಟಾರ್ಯನನ್ನೂ ತೊಡೆಯ ಗದ್ದುಗೆಯಲ್ಲಿ ಕೂಡ್ರಿಸಿಕೊಂಡು ಶಿವಶರಣರ ವೀರರ ಕಥೆ ಹೇಳುತಿದ್ದನು, ತತ್ವ ಪದಗಳನ್ನು ಹಾಡುತ್ತಿದ್ದನು. ಇದಕ್ಕೆ ಗದ್ದಲ ಮಾಡದೇಅತ್ತೀಶರದೇಶಾಂತಮುದ್ರೆಯಿಂದ ಕುಳಿತುಕೊಳ್ಳುತ್ತಿದ್ದ ನಮ್ಮ ಪುಟ್ಟಾರ್ಯ. ರೇವಣಾರ್ಯ ಹಾಡುವದು ಬಿಟ್ಟರೆ.... ಅಪ್ಪಾ.... ಉ.... ಉ.... ಉ ಎಂದುಹಟಮಾಡುವ ಪುಟ್ಟಾರ್ಯನ ನಲ್‍ನುಡಿ ಅರ್ಥಮಾಡಿಕೊಂಡು ಮತ್ತೆ ರೇವಣಾರ್ಯ ಹಾಡುಹತ್ತಿದರೆ ಸುಮ್ಮನೆ ಕುಳಿತು ಕೇಳುತ್ತಿತ್ತು, ಈ ಕುರುಡ ತೊತ್ತು. ಒಂದು ವರುಷದ ಈ ಪುಟ್ಟ ಕೂಸಿನಲ್ಲಿ ಶಿವಶರಣರ ಕಥೆ ಕವನಗಳ ಬಗ್ಗೆ ಎಷ್ಟು ಆಧರತೆಯಿದೆ, ಸಾಧರತೆ ತುಂಬಿದೆ. ಶಿವ ಶಿವ ಬಸವ! ಬಸವ ಶಿವ ಅಭವ! ಎಂದು ರೇವಣಾರ್ಯ ಹಾಡಿ, ಪುಟ್ಟಯ್ಯ ಅನ್ನಪಾ.... ಅನ್ನು.... ಎಂದು ಹೇಳಿದರೆ.... ಹೂ. ಎಂದು ತಲೆ ಹಾಕಿ ಈ ನಮ್ಮ ಪುಟ್ಟಾರ್ಯ ಶಿಶಿ.... ಶಿವ.... ಶಿ.... ವ.... ಬಡವ .... ಬಬ.... ತ.... ವ.... ಶಿ.... ವ.... ಅಭ.... ವ, ಈ ರೀತಿ ಎಳೆಯ ಧ್ವನಿಯಿಂದ ತಡವರಿಸುತ್ತ ಹಾಡುವ ಈ ಶಿಶುವನ್ನು ಕಂಡು ಅಚ್ಚರಿಪಟ್ಟು, ಪಟ್ಟು, ಕೆಲವು ಚಣ ರೇವಣಾರ್ಯ ಮೌನವಾಗಿ ಕಲ್ಲು ಗೊಂಬೆಯಂತೆ ಕುಳಿತು ಬಿಡುತ್ತಿದ್ದ............ ಅಪ್ಪಾ........ಪಿ....ಪಿ....ಅಂತ ಪುಟ್ಟಿ ಕೈಗಳಿಂದ ಪುಟ್ಟಾರ್ಯ ಬಡಿದಾಗಲೇ ರೇವಣಾರ್ಯನಿಗೆ ಎಚ್ಚರ ............ ಮರುಕ್ಷಣ ಮಗುವನ್ನು ನೋಡಿ ಬಿಗಿದಪ್ಪಿ ಎಣಿಕೆ ಬಾರದಷ್ಟು ಮುತ್ತಿನ ಮಳೆಗರೆಯುತ್ತಿದ್ದ ಪುಟ್ಟಯ್ಯ ನೀನು ನನ್ನ ಮಗನಲ್ಲಿವಪ್ಪ !ಆ ಪರಂಜ್ಯೋತಿ ಕುಮಾರ ಶಿವಯೋಗಿಯ ಕಾರುಣ್ಯದ ಶಿಶು ನೀನು; ಎಂದು ರೇವಣಾರ್ಯನ ನಾಲಿಗೆ ಅರಿವಿಲ್ಲದೇ ನುಡಿಯುತ್ತಿತ್ತು.

ಇಷ್ಟೊಂದು ಮಹತೆ ತುಂಬಿತ್ತು ಈ ಶಿವಸುತನಲ್ಲಿ ಇಂಥಾ ಯೋಗ್ಯತೆ ಭವಸುತರಿಗೆಲ್ಲಿ ?

ಪುಟ್ಟಾರ್ಯ ನಕ್ಕರೆ ಕಣ್ಣಲ್ಲ ಮೂಗಲ್ಲ ಮುಖವೆಲ್ಲ ನಕ್ಕಂತೆ ಕಾಣುತ್ತಿತ್ತು. ಪುಟ್ಟ ಪುಟ್ಟ ಹೆಜ್ಜೆ ಹಾಕಿ ನಡೆವ ಪುಟ್ಟಾರ್ಯನ ದಿಟ್ಟ ಹೆಜ್ಜೆಯಲ್ಲಿ ಸೃಷ್ಟಿ ಅಳೆವ ವಾಮ ಹೆಜ್ಜೆಯ ಭಾವ ತುಂಬಿತ್ತು. ಮನೆತುಂಬ ಓಡಾಡುವದನ್ನು ಈಕ್ಷಿಸಿದರೆ ಜಗತುಂಬ ಓಡಾಡಿದಂತೆ ಭಾಸವಾಗುತಾ ಇತ್ತು.

ಒಂದೊಂದು ಸಲ ತ್ರಿಪುಂಡ್ರ ಧಾರಿಯಾದ ಪುಟ್ಟಾರ್ಯ ನಗದೆ ಮಾತನಾಡದೆ ಮೌನಿಯಾಗಿ ಯೋಚಿಸುವಂತೆ ಕುಳಿತುಕೊಳ್ಳುತ್ತಾ ಇತ್ತು. ಆಗ ಆ ಮೌನ ಮುಖಮುದ್ರೆಯನ್ನು ಕಂಡರೆ ಷಣ್ಮುಗನ ಆ ಸೊಗದಾಗರದಂತೆ ಕಾಣತಾ ಇತ್ತು, ಈ ಮೌನದರ್ಥ ತಂದೆ-ತಾಯಿಗಳಿಗೆ ತಿಳಿಯದಾಯಿತು.

ಈ ರೀತಿ ಬಾಲಲೀಲೆಗಳನ್ನು ಪ್ರದರ್ಶಿಸುತ್ತಿರವ ಪುಟ್ಟಾರ್ಯನನ್ನು ಕಂಡು ತಾಯಿ ಸಿದ್ಧಾಂಬೆ ಎತ್ತಿಕೊಂಡು ಆನಂದಾಶ್ರುಗಳನ್ನುದುರಿಸುತ್ತಾ.

ಬಾರಯ್ಯ ಬಾ ಚೆಲುವ ನನ್ನೊಲವ ।
ತೋರಯ್ಯ ನಗೆಬೀರಿ ಮನೆತನದ ಬಲವ ॥ ಪ ॥

ಬಾಲ್ಯದ ಬನದಲಿ ಅರಳಿದ ಹೂ ।
ಮೌಲ್ಯದ ಮೆಲು ಮಾತನಾಡು ಚೆಲುವ ॥
ಕನ್ನಡ ಬಿನ್ನಾಣ ಹೊನ್ನಿನ ನಿಲುವ ।
ನನ್ನೆಯಲೀ ನೀ ಹಾಡು ಚೆಲುವ ॥

ಈ ರೀತಿ ಹಾಡು ಹಾಡಿ ಆಡಿಸುತ್ತಾ ಹುಡುಗನೊಡನೆ ಹುಡಿಗಿಯಾಗಿ ಆಡುತಿದ್ದಳು, ಬೇಸರ ದೂಡುತ್ತಿದ್ದಳು.

ದಿಟ್ಟಿಯಿರವ ಪುಟ್ಟಾರ್ಯ ಸೃಷ್ಟಿಕರ್ತನ ಹರಕೆಯಲ್ಲಿ, ಹುಟ್ಟಿಸಿದ ವರದಲ್ಲಿ, ಸಮಸ್ತರಪ್ರೇಮ ಪ್ರೋತ್ಸಾಹನದಲ್ಲಿ ಬಾಲ್ಯದ ತಾಪದಲ್ಲಿ ಗೆದ್ದು ಬೆಳೆದು ಮೌಲ್ಯದ ರೂಪುಧರಿಸಿ ಬಾಳಿದ, ಭುವಿಯ ಬೆಳಗಿದ.

K. B. G.

# ಆಸರವು ತಪ್ಪಿತು, ಈಶ್ವರನಿಗೊಪ್ಪಿತು.

ಆಗ ಈಗ ಎನ್ನದೆ ಆ ಜಣ ಈ ಜಣ
ವೆಂಬ ಕಟ್ಟಳೆಯಿಲ್ಲದೆ ಬಪ್ಪುದು ಮರಣ.

"ಪಂಚಾಕ್ಷರ ಶಿವಯೋಗಿ"

ಶಿವಸುತ ಸಮ್ಮಿ ಪುಟ್ಟಾರ್ಯನಿಗೆ ತಂದೆ ತಾಯಿಗಳ ಜೀವ ಚಕ್ಕಡಿ ಶಿವ ನಪ್ಪಣೆಯಂತೆ ಮುಕ್ತಾಗಲಿಕ್ಕೆ ತಕ್ಕ ಏಪಾಡಿನಲ್ಲಿತ್ತು. ಶಿವಯೋಗಿಯ ವರ ಪ್ರಸಾದದಿಂದುಸಿದ ಕೂಸನ್ನು ಶಿವನ ಆಶ್ರಯದಲ್ಲಿರಿಸಿ, ಭೂಮಿ ತಾಯಿಯ ಮಡಿಲಲ್ಲಿ ಮಲಗಿಸಿ, ತಮ್ಮ ಕರ್ತವ್ಯ ಮುಗಿಸಿ ರೇವಣಾರ್ಯಸಿದ್ಧಾಂಬೆಯರು ಮುಕ್ತುಗಳಾದರು,

ತಂದೆ ತಾಯಿಗಳ ವಿರಹದಿಂದ ಕಂಣೀರಿಟ್ಟು ಅಮ್ಮಾ ಅಪ್ಪಾ ! ಎಂದು ಒಂದೇ ಸವನೆ ಒರಲಹತ್ತಿತು, ಕೂಸು ಕೊರಗ ಹತ್ತಿತು.

ವಿಧಿ ಅಣಕವಾಡಿ ನಕ್ಕಿತು.................. ........ ಕೂಸಿನ ಕರುಣೆಯ ಕರುಳು ಕತ್ತರಿಸಿತು. ಮಾತಾ ಪಿತೃಗಳ ಮಮತೆಯ ಮಂದಾರ ಮಾಯವಾಯಿತು, ದುಃಖದ ದಾವಾನಲ ಧಾರಾಳವಾಯಿತು, ನಿರುತ್ಸಾಹದ ವುರುಪು ವುಕ್ಕಿತು. ಮಿಕ್ಕಿ ಬಂದಿರುವ ಮಕ್ಕಳ ಮೋಹ ಮಕ್ಕಾ ಮುಕ್ಕಾಯಿತು, ಬಂಧುಂತ್ವದ ಭವ್ಯ ಬಾಂಧಾರ ಬಕ್ಕ ಬಾರಲಾಯಿತು ಶಿವ ಸನಾತನ (ಪುಟ್ಟಾರ್ಯ) ಶಿ ಶುಅನಾಥವಾಯಿತು..............................

"ಮಾತಾ ಪಿತೃಗಳು ಮಡಿದರ ಸೋದರ ಮಾವನಿರಬೇಕು" ಹಿಂದೆ ತಿಳಿಸಿದ ಹಾವೇರಿ ತಾಲೂಕಿನ ದೇವಗಿರಿ ಗ್ರಾಮದ ಚಂದ್ರ ಶೇಖರಯ್ಯನವರು ಹಿರೇಮಠ ಇವರು ಸಿದ್ಧಾಂಬೆಯ ಸೋದರರು. ಇವರೇ ಅನಾಥ ಪುಟ್ಟಾರ್ಯ ನನ್ನು ತಮ್ಮ ಗೃಹದಲ್ಲಿಟ್ಟುಕೊಂಡು ರಕ್ಷಿಸ ಹತ್ತಿದರು.

ಸುಸಂಸ್ಕೃತಿಯ ಸುಳಿಯಲ್ಲಿ ಸುಳಿದಾಡಿದ ಚಂದ್ರಶೇಖರಯ್ಯನವರು ಸರಳಸ್ವಭಾವರು ಸದ್‌ಗುಣಿಗಳಾಗಿದ್ದರು. ದೊಡ್ಡ ದೊಡ್ಡ ಉದ್‌ಗ್ರಂಥಗಳನ್ನು ಬರೆದು ಕವಿಶ್ರೇಷ್ಠರ ಮಾಲಿಕೆಗೆ ಸೇರದಿದ್ದರೂ ಸಾಕಷ್ಟು ಸಾಹಿತ್ಯ

ವನ್ನಿರಿತೆ ಅಜ್ಞಾತ ಕವಿಗಳಾಗಿದ್ದರು. ಚಂದ್ರಶೇಖರಯ್ಯನವರು ಕೀರ್ತನ, ಪು . ರಾಣ ವೈದಿಕಗಳನ್ನು ತಮ್ಮ ಜೀವನದಲ್ಲಿರಿಸಿಕೊಂಡು ಸಾಗಿದ್ದರು. ಆಧ್ಯಾತ್ಮ ಜೀವಿಯಾದ ಚಂದ್ರಶೇಖರಯ್ಯನವರಲ್ಲಿ ಸಂಗೀತವೂ ಹಾಸು ಹೊಕ್ಕಾಗಿತ್ತು, ಜೊಕ್ಕಾಗಿ ಬೆಳೆದಿತ್ತು. ಆಟ, ನಾಟಕ, ಪಾರಿಜಾತಗಳನ್ನು ಕಲಿಸುತ್ತ ಕಲಿಸು ಗರಡಿಯನ್ನು ಹರಡಿಸಿದವರಲ್ಲಿ ಚಂದ್ರಶೇಖರಯ್ಯನವರೂ ಒಬ್ಬರು. ಒಟ್ಟಿನಲ್ಲಿ ಚಂದ್ರಶೇಖರಯ್ಯನವರ ಘನತೆ ಎಲೆಯ ಮರೆಯ ಕಾಯಿಯಂತೆ ವಿರಾಜಮಾ ನವಾಗಿತ್ತು. ಕರುಣೆಗಳಾದ ಚಂದ್ರಶೇಖರಯ್ಯನವರು ಒಳ್ಳೇ ಕಳಕಳಿಯಿಂದ ಪುಟ್ಟಾರ್ಯನನ್ನು ಸಲಹುತ್ತಿದ್ದರು. " ನದಿಯಲ್ಲಿ ಮುಳಗುವ ಜೀವಿಗೆ ಕೊರಡಾ ಸರದಂತೆ " ದುಃಖಾಂಬುಧಿಯಲ್ಲಿ ಮುಳುಗುವದರಲ್ಲಿದ್ದ ಪುಟ್ಟಾರ್ಯನಿಗೆ ಆಸರ ವಿತ್ತು ಚಂದ್ರಶೇಖರಯ್ಯನವರಿಗೆ ಅವೆಷ್ಟು ಅಭಿನಂದನೆಗಳನ್ನರ್ಪಿಸಿದರೂ ಕಡಿಮೆಯೇ.

ಚಂದ್ರಶೇಖರಯ್ಯನವರ ಆತ್ಮೀಯತೆಯ ಆಲಯದಲ್ಲಿ ಬೆಳೆಯುವ ಪುಟ್ಟಾ ರ್ಯನ ಬೇಸರ ಹಾಗೂ ದುಃಖದುಸಿರು ಗಾಳಿಗಿಟ್ಟ ದೀವಿಗೆಯಂತೆ ನಂದಿಹೋ ಯಿತು, ಶೋಕಾಗರ ಬತ್ತಿಹೋಯಿತು. ಆನಂದದ ಬೆಳೆ ಬೆಳೆದು ಬಂದಿತು. ಕಳೆ ತಂದಿತು.

ದಿನಗಳುರಿಳಿದವು................................ ಈಗ ಪುಟ್ಟಾರ್ಯನಿಗೆ ದಿನ ದಿನವು ತುಂಬಿ ೫ ವರುಷ ಪಟ್ಟಗಟ್ಟಿಯಾಯಿತು. ಚನ್ನಾಗಿ ಮಾತನಾ ಡುತ್ತಾನೆ. ಹೇಳಿದ್ದನ್ನು ಕೇಳಿ ತಿಳಿದು ಅಳೆದು ಕೊಳ್ಳುವಂಥ ಸಾಮರ್ಥ್ಯ ವನ್ನು ಪಡೆದಿದ್ದಾನೆ. ದಿನಾಲು ತಪ್ಪದೆ ಗುಡಿಗೆ ಹೋಗುತ್ತಾನೆ. ಕಂಣಿಲ್ಲದ ಕುರುಡ ಅದ್ಹೇಗೆ ದೇವರ ಗುಡಿಗೆ ಹೋಗುತ್ತಾನೆ? ಎಂಬ ಪ್ರಶ್ನೆ ತಲೆ ಎತ್ತಿ ನಿಲ್ಲುವದು ಸ್ವಾಭಾವಿಕ. ಒಂದುಸಲ ಯಾವದೇ ಸ್ಥಳವನ್ನು ತೋರಿಸಿದರೇ ಸಾಕು. ಮತ್ತೊಮ್ಮೆ ಅಲ್ಲಿಗೆ ಯಾರ ಸಹಾಯವಿಲ್ಲದೆ ಆ ಸ್ಥಳಕ್ಕೆ ಸಾವಿರ ಸಲ ಹೋಗಿ ಬರುತ್ತಾನೆ. ತುಳಿದ ದಾರಿ, ಕೇಳಿದ ನುಡಿ, ಹೇಳಿದ ಹಾಡು ಎಂದೂ ಮರೆಯುತ್ತಿದ್ದಿಲ್ಲ. ದೇವಗಿರಿಗ್ರಾಮ ಇಷ್ಟೇ ಇದೆ. ಇಂಥ ಸ್ಥಳದಲ್ಲಿ ಇಂಥ ವರ ಮನೆಯಿದೆ. ಆ ಮನೆಗೆ ಹೋಗಲು ಇಂತಿಷ್ಟೇ ಹೆಜ್ಜೆಗಳು ಹತ್ತುತ್ತವೆ. ಎಲ್ಲವನ್ನೂ ತನ್ನ ಬುದ್ಧಿ ಶಕ್ತಿಯಿಂದ, ಶಿದ್ಧಿದೃಷ್ಟಿಯಿಂದ ಅಳೆದು ಕಂಡು

ಕೊಂಡಿದ್ದ ಪುಟ್ಟಾರ್ಯ ೫ ವರುಷದ ಬಾಲಕ ಪುಟ್ಟಾರ್ಯ ಎಲ್ಲಿಗಾದರೂ ಹೊರಟರೆ ಟಣ್ ಟಣ್ ಟಣ್ಣೆಂದು ಜಿಗಿಯುತ್ತ ಹಾರುತ್ತ ಓಡಾಡುವವನ್ನು ಕಂಡರೆ, ಈ ಕುರುಡನಿಜವಾಗಿಯೂ ಕುರುಡನಲ್ಲ. ಮೇಲಿನ ಕಂಣು ಕಿತ್ತುಕೊಂಡು ಕೆಳಗೆ ಅಂಗಾಲಿಗೆ ಕಂಣು ಹಚ್ಚಿಕೊಂಡಿರಬೇಕು. ಎಂಬ ಅನಿಸುತ್ತಿತ್ತು. ನೋಡುವವರಿಗೆ. ಒಂದುದಿನ ಹೀಗಾಗಿತ್ತು. ಪ್ರಸಂಗ. ಆಗ ರಾತ್ರಿ ಸಮಯ ೮॥ ಗಂಟೆ ಸುತ್ತಲೂ ಅಮವಾಸೆ ಕತ್ತಲು ಪಸರಿಸಿದೆ. ಚಂದ್ರಶೇಖರಯ್ಯನವರ ಕುಟುಂಬದೊಂದಿಗೆ ಬಹಿರ್ದೇಶಕ್ಕೆ ( ಬೈಲಕಡೆಗೆ) ಹೋಗಿದ್ದಾನೆ ಪುಟ್ಟಾರ್ಯ. ತಿರುಗಿ ಬರುವಾಗ ಅತ್ತೆ! ಎಡಗಡೆಗೆ ತಗ್ಗಿದೆ ಈ ಕಡೆ ಬಾ! ಎಂದು ಪುಟ್ಟಾರ್ಯ ತನ್ನ ಪುಟ್ಟ ಕೈಗಳಿಂದ ಅತ್ತೆಯನ್ನು ಬಲಗಡೆಗೆ ಜಗ್ಗಿದ. ಎಲ್ಲಿದೆ? ಎಂದು ಅತ್ತೆ ದಿಟ್ಟಿಸಿ ನೋಡಿದಳು. ಪುಟ್ಟಾರ್ಯ ಹೇಳಿದಂತೆ ಎಡಗಡೆ ತಗ್ಗಿತ್ತು. ಅವ್ವಯ್ಯ! ನಾನು ಈ ದೊಡ್ಡದಾದ ತಗ್ಗಿನಲ್ಲಿ ಬಿದ್ದರೆ ನನ್ನಗತಿ ಯೇನಾಗುತ್ತಿತ್ತು? ಎಂದು ಅವಳ ಎದೆ ಢವಢವ ಬಡಿದುಕೊಳ್ಳುತ್ತಾ, ಈ ಪುಟ್ಟಾರ್ಯ ನಿಂದ ಈ ಕುತ್ತಿನಿಂದ ಪಾರಾದೆ, ಎಂದು ಮರುಕ್ಷಣದಲ್ಲಿ ಎದೆಯ ಬಡಿತ ಶಾಂತವಾಯಿತು. ಪುಟ್ಟಾರ್ಯ ಕುರುಡನಲ್ಲ! ನಿಜವಾದ ಕುರುಡರು ನಾವು ಎಂದು ಮನಗಂಡಳವಳು.

ಇಂಥಾ ಹಲವಾರು ಆಶ್ಚರ್ಯಕಾರಕ ಲೀಲೆಗಳನ್ನು ತೋರಿಸುವ ಕುರುಡ ಪುಟ್ಟಾರ್ಯ ಮೈಯಲ್ಲ ಕಂಣುಳ್ಳವನಾಗಿ ದೇವಗಿರಿಯ ಬಾಲದೇವನಾಗಿ ಕಂಗೊಳಿಸಿದ. ಭಜನಾ ಸಂಘದವರು ದೇವಸ್ಥಾನದಲ್ಲಿ ಭಜನಾ ಮಾಡುವ ಸಮಯ ನೋಡಿಕೊಂಡು ಅಲ್ಲಿಗೆ ಹೋಗುತ್ತಿದ್ದ. ಮೌನಿಯಾಗಿ ಕುಳಿತುಕೊಂಡು ಶಿವ ಭಜನೆಯನ್ನು ಕೇಳಿ ಆನಂದಿಸುತ್ತಾನೆ. ಅದೇ ಆನಂದದಲ್ಲಿ ಮನೆಗೆ ಬಂದು ಕೇಳಿದ ಶಿವಭಜನಾ ಹಾಡುಗಳನ್ನು ಹಾಡಿ ಹಾಡಿ ಕುಣಿಯುತ್ತಾನೆ, ಕುಣಿ ಕುಣಿದು ದಣಿಯುತ್ತಾನೆ.

ಚಂದ್ರಶೇಖರಯ್ಯನವರ ಮಠದಲ್ಲಿ ಸಂಗೀತ ಮೇಳ ಆದಿಕಾಲದಿಂದಲೂ ಇತ್ತು, ಈಗಲೂ ಇದೆ. ಚಂದ್ರಶೇಖರಯ್ಯನವರು ಹಾರ್ಮೋನಿಯಂ ಬಾರಿಸುತ್ತ ಹಾಡುತ್ತ ಕುಳಿತರೆ, ಅವರ ಬಾಯಿಯಿಂದ ಬರುವ ಮಧುರ ಕಂಠದತ್ತ ಲಕ್ಷವಿರಿಸಿ ಮೈಯಲ್ಲ ಕಿವಿಯಾಗಿರಿಸಿಕೊಂಡು ಅಸ್ಥಿವಹಿಸಿ ಆಲಿಸುತ್ತಿದ್ದ ಪುಟ್ಟಾರ್ಯ; ದಿಟ್ಟಾರ್ಯ.

ಒಂದು ದಿನ ಏನೋ ಅವಸರದಲ್ಲಿ ತಾವು ಬಾರಿಸುವ ಹಾರ್ಮೋನಿಯಂ ಮುಚ್ಚಿ ಪೆಟ್ಟಿಗೆಯಲ್ಲಿ ಹಾಕದೆ ಮರೆತು ಹೊರಗೆ ಹೋದರು ಚಂದ್ರಶೇಖರಯ್ಯ ನವರು. ಆ ಸಮಯ ಸಾಧಿಸಿ ದಿಟ್ಟಯಿರದ ಪುಟ್ಟಾರ್ಯ ಕೈಯ್ಯಾಡಿಸುತ್ತ ಬಂದು ಹಾರ್ಮೋನಿಯಂ ತನ್ನ ಕೈಗೆ ತೆಗೆದುಕೊಂಡ. ತನ್ನ ಧ್ವನಿಗೆ ಹೊಂದುವ ಶೃತಿ ಪಟ್ಟಿ ಹಿಡಿದುಕೊಂಡು ಆ ssssssss ಅಂತ ಸೂರ ಹಚ್ಚಿದ. ಮಾವನವರು ಹಾಡಿದ ಹಾಡನ್ನು ತನ್ನ ಸುಮಧುರವಾದ ಕಂಠದಿಂದ ಹಾಡುತ್ತಾ ಹಾಡುತ್ತಾ ತನ್ನಾನಂದದಲ್ಲಿ ತಲ್ಲೀನನಾಗಿ ಬಹಿರ್ ಪ್ರಪಂಚವನ್ನೇ ಮರೆತು,ಯಾವುದರಅರಿ ವಿಲ್ಲದೆ ಸಂಗೀತ ಪ್ರಪಂಚದಲ್ಲಿ ಪ್ರಹರಿಸಹತ್ತಿದ್ದಾನೆ.........................
ಏನೋ ಕೆಲಸದ ನಿಮಿತ್ತ ಹೊರಗೆ ಹೋದ ಚಂದ್ರಶೇಖರಯ್ಯನವರು ತಮ್ಮ ಮನೆಯ ಕಡೆ ಹೊರಟರು.... ಬರುತ್ತಿದ್ದಂತೆ ಕರ್ಣ ಮಧುರವಾದ ಧ್ವನಿ ಯೊಂದು ಕೇಳಿಬಂತು. ಈ ಸುಂದರ ಕಂಠ ಯಾವುದು ? ಇಷ್ಟು ಮಧುರ ವಾಗಿ ಹಾಡುವವರು ಯಾರು ? ನನಗರಿಯದ ಈ ಸಂಗೀತಗಾರನಾರು? ಎಂದು ಯೋಚನಾ ಪ್ರಪಂಚದಲ್ಲಿ ಚಲಿಸುತ್ತ ಬಂದರು........ ಬಂದ ಬಂದಂತೆ ಧ್ವನಿ ಸಮೀಪಿಸಿತು- ಚಂದ್ರಶೇಖರಯ್ಯನವರಿಗೆ ಮತ್ತಷ್ಟು ಕುತೂಹಲ ಕೇಳಿ ಬರುವ "ಶೀ ಕಂಠ" ನನ್ನ ಮನೆಯಿಂದಲೇ ಬರುತ್ತಿದೆಯಲ್ಲ ನನ್ನ ಮನೆಯಲ್ಲಿ ಇಷ್ಟು ಸ್ವಾರಸ್ಯವಾಗಿ ಹಾಡುವವರಾರು ? ಮತ್ತಷ್ಟು ಆಶ್ಚರ್ಯಯುತರಾಗಿ ಬೇಗ ಬೇಗ ಹೆಜ್ಜೆ ಹಾಕಿದರು.

ನನಗರಿಯದ ಧ್ವನಿ ? ಎಂಥ ಸೌಂದರ್ಯದಿಂದ ತುಂಬಿದೆ ಈ ಧ್ವನಿ ? ಜಗತ್ತನ್ನೆ ಸೆಳೆಯುವ ಮೋಹಕತೆ ತುಂಬಿದ ಈ ಧ್ವನಿಯಾವುದು ? ಯಾರದು? ಎಂದು ಪ್ರಶ್ನೆಗಳ ಮಲ್ಲಯುದ್ಧ ಮಾಡುತ್ತ ಮನೆಯ ಬಾಗಿಲಿಗೆ ಬರುತ್ತಾರೆ. ಹಾರ್ಮೋನಿಯಂದ ಶೃತಿಗೆ ತನ್ನ ಸುಂದರ ಧ್ವನಿ ಜೋಡಿಸಿ ಶರಣರ ತತ್ವಪದ ಹಾಡ್ತಾಯಿರುವ ಪುಟ್ಟಾರ್ಯನನ್ನು ಕಂಡು ಚಂದ್ರಶೇಖರಯ್ಯನವರು ಮಂತ್ರ ಮುಗ್ಧರಾಗಿ ನಿಲ್ಲುತ್ತಾರೆ.... ನಾನು ಕನಸಿನಲ್ಲಿದ್ದೇನೆಯೋ? ನನಸಿನಲ್ಲಿದ್ದೇ ನೆಯೋ ? ಎಂದು ಸಂಶಯುಕ್ತರಾಗಿ ಕಣ್ಣುಜ್ಜಿ ಮೈ ಜಜ್ಜಿಕೊಂಡರು, ನನ ಸಿನ ಪ್ರಪಂಚದಲ್ಲೆ ಇದ್ದೇನೆಂದು ಕಂಡುಕೊಂಡರು.... ನನ್ನ ಅಳಿಯ ಪುಟ್ಟಯ್ಯ ಈ ಎಳೆಯ ವಯಸ್ಸಿನಲ್ಲಿ ಈ ಸಂಗೀತವನ್ನು ಅದ್ಹೇಗೆ ಕಲಿತ ? ಎಂದು ಯೋಚನಾಕ್ರಾಂತರಾಗಿ ಬಾಗಿಲದಲ್ಲಿಯೇ ನಿಂತಿದ್ದಾರೆ ಚಂದ್ರಶೇಖರಯ್ಯ

ನವರು........ ಇದು ಕಲಿತ ಸಂಗೀತವಲ್ಲ, ಶಿವನ ಹರಕೆಯಿಂದ ಮಿಲಿತವಾದ ಸಂಗೀತ. ಎಂದು ಮನಗಂಡ, ಆಶ್ಚರ್ಯಗೊಂಡ. ಪುಟ್ಟಾರ್ಯನ ಸಂಗೀತ ಸರಾಗವಾಗಿ ಸಾಗಿದೆ. ಚಂದ್ರಶೇಖರಯ್ಯನವರ ಮನವೆಂಬ ಹಡಗ ಸಂಗೀತ ಪ್ರವಾಹದಗುಂಟ ಈಜುತ್ತ ಓಜುತ್ತ ನಡೆಯುತ್ತಿದೆ...............

ವ್ಹಾ ವ್ಹಾ ಎಂದು ತನಗರಿಯದಂತೆ ಚಂದ್ರಶೇಖರಯ್ಯನವರ ಕೈ ಪ ಟ-ಟ ಟ ಟ ಚಪ್ಪಾಳೆ ತಟ್ಟಿತು. ಪುಟ್ಟಾರ್ಯನ ಸಂಗೀತ ಕಟ್ಟಾಯಿತು............

ಮಾವನವರು ಬಂದರು. ನನ್ನ ಅಸಭ್ಯ ವರ್ತನೆಯನ್ನು ಕಂಡು ಬೈಯ್ಯುತಾರೆ, ಬಡೀತಾರೆ. ಎಂದು ಭಯದಿಂದ ದೂರಸರಿದು ಥರ್ ಥರ್ ರ್ ರ್ ರ್ ನಡಗುತ್ತ ಮಳೆಯಲ್ಲಿ ತೋಯಿಸಿಕೊಂಡ ಗುಬ್ಬಿಯಂತೆ ಮುದ್ದಿಯಾಗಿ ಒಂದು ಮೂಲೆಯಲ್ಲಿ ಹೋಗಿನಿಂತ ಪುಟ್ಟಯ್ಯ.

ಸಂಗೀತ ಸುಧೆಯನ್ನು ಈ ಪುಟ್ಟ ಕಂಠದಲ್ಲಿಟ್ಟು ಕಳಿಸಿದ ದೈವವನ್ನು, ಹುಟ್ಟುತಲೇ ಪುಟ್ಟಕೂಸಿನ ಕಂಣು ಕಿತ್ತುಕೊಂಡು ದೈವವನ್ನು ವಂದಿಸಬೇಕೋ ನಿಂದಿಸಬೇಕೋ............

ಪುಟ್ಟಯ್ಯ.... ಎಂದು ಮುಂದೆ ಬಂದರು ಚಂದ್ರಶೇಖರಯ್ಯನವರು.... ಆಗ ಪುಟ್ಟಾರ್ಯ ಅಂಜುತ್ತ ಗಡಗಡ ನಡುಗಿ ತತ ತಪ್ಪಾಯಿತು ಮಾಮಾ!.... ಇನ್ನೊಮ್ಮೆಂದೂ ನೀವಿಲ್ಲದ ಸಮಯದಲ್ಲಿ ಈರೀತಿ ವರ್ತಿಸೋದಿಲ್ಲವೆಂದು ತರತರಿತದ ಧ್ವನಿಯಲ್ಲಿ ತಡವರಿಸುತ್ತ ಉತ್ತರಕೊಟ್ಟ.... ಚಂದ್ರಶೇಖರಯ್ಯನವರು ಸಮೀಪಹೋಗಿ ನನ್ನಯ್ಯ ! ಪುಟ್ಟಯ್ಯ !! ಎಂದು ಆತ್ಮೀಯತೆಯಿಂದ ಎತ್ತಿ ಅಪ್ಪಿಕೊಂಡರು. ಚಂದ್ರಶೇಖರಯ್ಯನವರಿಗೆ ದಳ ದಳ ಳ ಳ ಳ ಆನಂದಾಶ್ರುಧಾರಿಯಾಗಿದೆ.... ಮರುಕ್ಷಣದಲ್ಲಿ ಚಂದ್ರಶೇಖರಯ್ಯನವರ ಬಾಹುಪಾಶದಿಂದ ಬಂಧಮುಕ್ತನಾಗಿ ಪಾಕಶಾಲೆಗೆ ಜಿಗಿದ ಈ ಕುರುಡ ಬಾಲಕ, ನಮ್ಮ ಚರಿತನಾಯಕ...........

ನನ್ನ ಅಳಿಯ ಪುಟ್ಟಯ್ಯ ಕುರುಡ. ಕುರುಡನ ಬಾಳು ಬರಡು ಬಾಲಿಲ್ಲದ ಶೋಳು. ಇವನಿಗೆ ಯಾವ ಉದ್ಯೋಗ ಕಲಿಸಬೇಕು?

ಕಲಿಸಬೇಕು? ಯಾವ ಉದ್ಯೋಗ ಬರುತ್ತಿದೆ? ಕುರುಡ ಕೈ ಇದ್ದೂ ಪಕ್ಕೈಲ, ಕಾಲಿದ್ದೂ ಹೆಳವ, ಜೀವವಿದ್ದೂ ನಿರ್ಜೀವ, ಏನಿದ್ದೂ ಏನು ಪ್ರಯೋಜನ? ಕಣ್ಣಿದ್ದರೆ ಮಾತ್ರ ಈ ಎಲ್ಲವದರ ಉಪಯೋಗ? ಹಾಗಾದರೆ ಪುಟ್ಟಯ್ಯ ಹೇಗೆ ಭುವಿಯಲ್ಲಿ ಬದುಕಬೇಕು? ನನ್ನ ಸಹೋದರಿ ಸಿದ್ಧಾಂಬೆಯ ವಂಶ ದೀಪವನ್ನು ಅದಾವ ರೀತಿ ಕಾಯುವದು? ನನ್ನ ಸಹೋದರಿಯ ಆಶೆಯಂತೆ ನಾನು ಜೀವದಿಂದ ಇರುವವರೆಗೂ ಸಲಹುತ್ತೇನೆ, ಮುಂದೆ ನಾನು ತೀರಿದ ಮೇಲೆ ಪುಟ್ಟಯ್ಯನ ಗತಿಯೇನು? ಕುರುಡರ ಬಾಳು ಬೀಳು! ಕುರುಡರು ಭಿಕ್ಷೆಬೇಡಿ ಬದುಕುತ್ತಿದ್ದಾರೆ! ಅದರಂತೆ ನನ್ನ ಪುಟ್ಟಯ್ಯನು ಭಿಕ್ಷೆ ಬೇಡುವ ಬೀದಿಬಿಖಾರಿಯಾಗಬೇಕೆ? ಪುಟ್ಟಯ್ಯ ಭಿಕ್ಷೆ ಬೇಡಬಾರದು. ಯಾರ ಹಂಗಿಲ್ಲದೆ ಸ್ವತಂತ್ರನಾಗಿ ಬಾಳಬೇಕು. ಹಾಗಾದರೆ ನಾನು ಇವನಿಗೆ ಯಾವ ಉದ್ಯೋಗ ಕಲಿಸಬೇಕು?........ ಎಂಬ ಪ್ರಶ್ನೆಗಳ ಪ್ರೇತಗಳು ಪರ್ವತಾಕಾರವಾಗಿ ಕರಾಳಯುಕ್ತವಾಗಿ ಪ್ರಹರಿಸಿ ಚಂದ್ರಶೇಖರಯ್ಯನವರನ್ನು ಹುಚ್ಚರನ್ನಾಗಿರಿಸಿದ್ದವು, ರೊಚ್ಚಿಗೆಬ್ಬಿಸಿದವು........ ಆದರೆ ಇಂದು ಪುಟ್ಟಯ್ಯನ ಸಂಗೀತವನ್ನು ಕೇಳಿದ ಕೂಡಲೆ ಪ್ರಶ್ನೆಗಳ ಪ್ರೇತಗಳು ಮಾಯವಾದವು. ಕಾಣದಾದವು.

ಬೆಳೆವ ಮರದ ಕುರುಹು ಎಳೆತನದಲ್ಲಿ ತೋರಿಸಿ "ನನ್ನ ಮುಂದಿನ ಮಾರ್ಗ ಇದೆ" ಎಂದು ತೆವೀರಿಸಿಕೊಟ್ಟಿದ್ದಾನೆ, ತನ್ನ ದಾರಿ ತಾನು ಕಂಡುಕೊಂಡಿದ್ದಾನೆ.

ಈ ದಾರಿ ಸರಳವಿದೆ ಸುಲಲಿತವಿದೆ ಎಂದು ನಿಶ್ಚಯಿಸಿ ಪ್ರಸನ್ನ ವದರಾದರು. ಚಂದ್ರಶೇಖರಯ್ಯನವರು...............

ಒಂದು ದಿನ ಶುಭಮುಹೂರ್ತದಂದು, ಸೂರ್ಯೋದಯದ ಸಮಯದಿ ಪುಟ್ಟಾರ್ಯನೊಂದಿಗೆ ಸ್ನಾನಮಾಡಿ, ಮಡಿಬಟ್ಟೆ ಧರಿಸಿ, ದೇವರ (ಶಿವ) ಪೂಜೆ ಮಾಡಿ (ಸಿ) ಜೊತೆಗೆ ಶಾರದಾ ಫೋಟೋ ಹಾರ್ಮೋನಿಯಂ ಮೊದಲಾದ ಸಂಗೀತ ಸಜ್ಜಿಕೆಗಳನ್ನಿಟ್ಟು ಶೃಂಗರಿಸಿ ಪೂಜಿಸಿ, ಮಂಗಲ ಪಾಡಿದರು. ಈ ಮಂಗಲ ಸಮಯದಿ ಪುಟ್ಟಾರ್ಯನನ್ನು ತಮ್ಮ ಮುಂದೆ ಕುಳ್ಳಿರಿಸಿಕೊಂಡು.

ಗುರುದೇವೋ ಮಹಾದೇವೋ
ಗುರುದೈವೋ ಸದಾಶಿವಃ
ಗುರುದೈವಾತ್ ಪರನ್ನಾಸ್ತಿ, ತ
ಸ್ಮೈ ಶ್ರೀ ಗುರುವೇ ನಮಃ

ಜಯಬಸವೇಶ ಭಕ್ತಜನಭಾಗ್ಯ ಶುಭೋದಯ ವೀರಶೈವ ನಿ।
ರ್ಣಯ ಪರಮಾವತಾರ ಶರಣಾಗತ ರಕ್ಷಕ ಚಿದ್‌ಘನಪ್ರಭಾ।
ಮಯ ಜಗದಾದಿ ದೇಶಿಕ ಪುರಾತನ ಪುಂಗವ ಶಾಂಭವೈ ಪುರಾ।
ಶ್ರಯ ಜಯ ಸೋಮನಾಥ ಜಯದೇವ ಜಯಾವಿರತಂ ಶಿವಾಧವಾ!

ವಾಗರ್ಥಾ ವಿವ ಸಂಪೃಕ್ತೌ
ವಾಗರ್ಥಃ ಪ್ರತಿಪತ್ತಯೇ
ಜಗತಃ ಪಿತರೌ ವಂದೇ
ಪಾರ್ವತೀ ಪರಮೇಶ್ವರೌ

ಜಯಮಂಗಲಂ ಜಯನಮಃ ಪಾರ್ವತಿಪತೇ ಹರಹರ ಮಹಾದೇವ! ಚಂದ್ರಶೇಖರಯ್ಯನವರು ಮುಂದೆ ಅನತಾರೆ ಹಿಂದೆ ಪುಟ್ಟಾರ್ಯ ಅನತಾನೆ ಈ ಸನ್ನಿವೇಶ ನೋಡುವವರ ಕಂಗಳಿಗೆ ಮಂಗಲದವತಾರವಾಗುತ್ತಿತ್ತು. ಪುಟ್ಟಾರ್ಯನ ವಾಣಿ ಸ್ಪಷ್ಟವಾಗಿ, ಸುಕಂಠದೊಡಗೂಡಿ ಸ್ಫುಟವಾಗಿ, ಬರುವದನ್ನು ಕಂಡ ಚಂದ್ರಶೇಖರಯ್ಯನವರಾನಂದಕ್ಕೆ ಅಡಿಯಿಲ್ಲ ಮುಡಿಯಿಲ್ಲ.

ಸ್ತೋತ್ರ ಮುಗಿದನಂತರ– ಚಂದ್ರಶೇಖರಯ್ಯನವರು ಹಾರ್ಮೋನಿಯಂದಲ್ಲಿ ಸ ರಿ ಗ ಮ ಪ ದ ನಿ ಬಾರಿಸಿ ತೋರಿಸಿ, ಈ ರೀತಿ ಬಾರಿಸು ಪುಟ್ಟಯ್ಯಾ! ಎಂದು ಹಾರ್ಮೋನಿಯಂ ಮುಂದಿಟ್ಟಾಗ– ಪುಟ್ಟಾರ್ಯ ಪ್ರತಿ ಹೇಳಿಸಿಕೊಳ್ಳದೆ ಸ ರಿ ಗ ಮ ಪ ದ ನಿ ಬಾರಿಸುತ್ತ, ಆಕಾರಯುಕ್ತವಾಗಿ ಹಾಡಹತ್ತಿದಾಗ ಸರಸ್ವತಿಯ ವಿದ್ವತ್ ಗಣಿತ ಸ್ವರ ಮಣಿತ, ಲಯದ ಕುಣಿತಗಳು ಪುಟ್ಟಾರ್ಯನಪುಟ್ಟ ನಾಲಿಗೆಯಿಂದ ಪುಟಿಯುವಂತೆ ಭಾಸವಾಗತಾ ಇತ್ತು. ೧ ಸಲವಲ್ಲ ೧೦ ಸಲ ಪಾಠಹೇಳಿಕೊಟ್ಟರೂ ಬಾರಿಸಲಿಕ್ಕೆ ಬಾರದ ಅದೆಷ್ಟೋ ವಿದ್ಯಾರ್ಥಿಗಳನ್ನೂ ಕಂಡ ಚಂದ್ರಶೇಖರಯ್ಯನವರಿಗೆ ಈ ಪುಟ್ಟಾರ್ಯನ ಚುರುಕು ತನವನ್ನು ಕಂಡು ಚಕಿತರಾಗುತ್ತಾರೆ. "ವಿದ್ಯೆ ಕಲಿಯಲು ಬಂದಿಲ್ಲ, ಪುಟ್ಟಾರ್ಯನನ್ನು ಕಲಿ

ಯಲು ವಿದ್ಯೆಯೇ ಒಲಿತು ಬಂದಿದೆ" ಯೆಂದು ಅದಾವುದೋ ಅಪ್ರತ್ಯಕ್ಷವಾಣಿ ಚಂದ್ರಶೇಖರಯ್ಯನವರಿಗೆ ಕೇಳಿಬಂದಿತು. ಕಣ್ಣಿಲ್ಲದ ಪುಟ್ಟಯ್ಯನಲ್ಲಿ ಅದೆಂತು ದೇಣಿಗಿ. ತುಂಬಿದ್ದಾನೆ ದೇವ, ಹಾರ್ಮೋನಿಯಂ ಬಾರಿಸುವಾಗ ಕೈ ಬೆರಳಿನ ಓಟವನ್ನು ಹಾಡುವ ನಾಲಿಗೆಯ ಅಲೆದಾಟವನ್ನು ಕಂಡು ಚಂದ್ರಶೇಖರಯ್ಯನವರು ಆಶ್ಚರಾನಂದದಲ್ಲಿ ವಿಹರಿಸ ಹತ್ತಿದರು.................. ಬೇರೆ ಬೇರೆ ಹೇಳಿಕೊಡಿ ಮಾ ಮಾ! ಎಂದು ಪುಟ್ಟಾರ್ಯ ವಿನಯದಿಂದ ನುಡಿದಾಗಲೇ ಬಹಿರ್ ಪ್ರಪಂಚಕ್ಕೆ ಬಂದಿಳಿದರು. ಚಂದ್ರಶೇಖರಯ್ಯನವರು. ಅಕ್ಷರಕೆ ಲಕ್ಷಾರ್ಥ ಹೇಳಿ ಬೃಹಸ್ಪತಿ ಬ್ರಹ್ಮಾದಿ ದೇವತೆಗಳನ್ನು ಸೋಲಿಸಿದ ಷಣ್ಮುಖನಂತೆ ಈ ಪುಟ್ಟಾರ್ಯ ಚಂದ್ರಶೇಖರಯ್ಯನವರ ಕಣ್ಣಿಗೆ ಕಂಡು ಬಂದ ಅಂಜಿಕೆ ತಂದ.

ದಿನದ ಪಾಠ ತಪ್ಪದೇ ಹೇಳಿಸಿಕೊಂಡು ಅದನ್ನು ಪಾಠಮಾಡಿ ಮತ್ತೆ ಮರುಗಳಿಗೆಯಲ್ಲಿ ಒಪ್ಪಿಸಿ, ಮುಂದೆ ಹೇಳಿ ಎಂದು ಕೇಳಿ ಕಾಡಿಕಾಡಿ ಕಲಿಯ ಹತ್ತಿದ ಹುಡುಗ; ಇದೆಂಥ ಶ್ರೀ ಬೆಡಗಕಲಿಯುವದರಲ್ಲಿ ಎಂದೂ ಆಲಸ್ಯ ತಾತಲಿಲ್ಲ; ತೋರಿಸಲಿಲ್ಲ. ಸರಳೆ, ಜಂಟಿ, ಅಲಂಕಾರ, ಖಟಗ್, ಖಟ್‌ತಾನ, ಕೂಟತಾನಗಳನ್ನು ಕ್ರಮವಾಗಿ ಅಭ್ಯಸಿಸಿದ. ವಚನ, ಚೀಜ್, ತತ್ವಪದಗಳನ್ನು ಸರಳವಾಗಿ ಬಾರಿಸುತ್ತ ಹಾಡುವದಕ್ಕೆ ಸಮರ್ಥನಾದ; ಸಂಗೀತದ ಸಾರಥಿಯಾದ.

೧೦–೨೦ ವರುಷ ಹಗಲು ರಾತ್ರಿಯೆನ್ನದೆ ಕಷ್ಟಪಟ್ಟು ಕಲಿತರೆ ತೀರದ ಪಾಂಡಿತ್ಯ ಚಂದ್ರಶೇಖರಯ್ಯನವರಲ್ಲಿ ಒಳಗೊಂಡಿತ್ತು; ಬಳಸಿಕೊಂಡಿತ್ತು. ಇಂಥಾ ಅಪಾರ ಪಾಂಡಿತ್ಯವನ್ನು ಅಳೆಯುವ ಅಳತೆಗೋಲಂತೆ ಕಂಡು ಬಂದ ಈ ಅಂಧ. ಎಂಥ ಬುದ್ಧಿಶಕ್ತಿ–ಎಂಥ ವಿಚಾರದುಕ್ತಿ..............................

ವಿಚಾರಿಸಿದಂತೆ ಅದ್ಭುತವಾಗಿ ಅನಂತತೆಯ ಕುರುಹಾಗಿ ಕಾಣತಾ ಇತ್ತು.

ವಯದಲ್ಲಿ ಬಾಲಕ; ವಿದ್ಯೆಯಲ್ಲಿ ಪಾಲಕ, ದೇಹದಲ್ಲ ತುಣುಕು; ಬುದ್ಧಿಯಲ್ಲಿ ಚುರುಕು, ಸಾಧನೆಯಲ್ಲಿ ಚಾಲಕ; ಸಾಧ್ಯತೆಯಲ್ಲಿ ನಾಯಕ, ಸಮತೆಯಲ್ಲಿ ಸುಧಾರಕ; ಸಾಮರ್ಥ್ಯತೆಯಲ್ಲಿ ಭೋಧಕನಾಗಿ ಪರಿಶೋಭಿಸಹತ್ತಿದ ಪುಟ್ಟಾರ್ಯ. ಅಣಿಸಿಕ್ಕರೆ ಅಣಿಮಾದಿಯ ಅಣಿಯಲ್ಲಿ ಅಣಿಯಾಗುವ ಪ್ರಾಮಾಣಿ

ಕತೆಯನ್ನು ಸಡೆದೀ ಪುಟ್ಟಾರ್ಯನ ಪ್ರಗತಿಯ ಪುಷ್ಪ ಪವಿತ್ರತೆಯಲ್ಲಿ ಪಕಳಿಸಿ (ಅರಳಿ) ನಯವಾಗಿ ನಲುಗಿ; ವುಲುಗಿ ಒಲುವಿನಿಂದ ಬಲುವಾಗುವದರಲ್ಲಿತ್ತು. ವಯಸ್ಸಿನ ಗಾತ್ರದಿಂದ ಹುಡುಗನಾಗಿದ್ದರೂ ಹುಡುಗತನದ ಉಡಾಳತೆಯ ಗಾಳಿಇವನ ಬಾಳಿನಲ್ಲಿ ಬೀಸಿದಾಳಿ ಮಾಡಲಿಲ್ಲ, ಪ್ರತಿಯಾಗಿ ಗಾಂಭೀರ್ಯತೆಯ ಗಾರುಡಿ ಬಾಳಗರಡಿಯಲ್ಲಿ ಮಲ್ಲಕುಸ್ತಿಯಾಡಿ; ಮಹಿಮತ್ವದ ಮಹಡಿಯಲ್ಲಿ ಬೀಡುಬಿಟ್ಟಿತ್ತು; ನಡ ಕಟ್ಟಿಸಿಂತಿತ್ತು

ದೇವರ ಮೇಲಿರುವ ಹೂವಿನಂತೆಪುಟ್ಟಾರ್ಯನ ಅಧ್ಯಯನ ಎಡರು ತೊಡ ರುಗಳಿಲ್ಲದೆ ನಿಬಿಡಾಗಿ ಮುಂದೋಡುತ್ತಿತ್ತು. ಬಿಡುವಿಲ್ಲದ ಸಂಗೀತಾಧ್ಯಯನ ದಲ್ಲಿ ಪುಟ್ಟಾರ್ಯ ೮ ವರುಷದ ಗಡಿದಾಟಿ ೯ ನೇ ವರುಷದ ಖಡಿಯಲ್ಲಿ ಅಡಿಇಟ್ಟ. ಇಷ್ಟರೊಳಗಾಗಿ ಶ್ರೀ ಚಂದ್ರಶೇಖರಯ್ಯನವರಲ್ಲಿ ಒಂದು ಹೊಸ ವಿಚಾರ ಸುಳಿ ದಿತ್ತು; ಮೊಳೆದಿತ್ತು.

ಅದು ಯಾವದು ?........... ನಮ್ಮ ಪುಟ್ಟಯ್ಯ ಜಗತ್‌ಪ್ರಸಿದ್ಧ ಕಲಾ ಕಾರನಾಗುತ್ತಾನೆ. ಇನ್ನು ನನ್ನಲ್ಲಿ ಇಟ್ಟುಕೊಳ್ಳುವದು ಅಷ್ಟೊಂದು ವಿಹಿತ ವಲ್ಲ. ಕರ್ನಾಟಕದ ಗಂಧರ್ವ ಗಾಯಕನೆಂದು ಕೀರ್ತಿವೆತ್ತ ಗಾನಯೋಗಿ ಪಂಡಿತ ಪಂಚಾಕ್ಷರ ಗವಾಯಿಗಳವರಲ್ಲಿ ಸೇರಿಸಬೇಕು. ಎನ್ನೋಣವಿಚಾರ. ಈ ವಿಚಾರ ಯೋಗ್ಯವಿದೆ. ಅನರ್ಘ್ಯವಿದೆ.

ಇಷ್ಟರಲ್ಲಿ ಪಂಚಾಕ್ಷರಿಯವರು ಹಾವೇರಿಗೆ ದಯಮಾಡಿಸಿದ್ದರು.

ಪುಟ್ಟಾರ್ಯನನ್ನು ಕರೆದುಕೊಂಡು ಪಂಚಾಕ್ಷರ ಗವಾಯಿಗಳ ಸನ್ನಿಧಿಗೆ ಬಂದು ೧೯೨೨ ರಲ್ಲಿ ಗವಾಯಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

ಯಾರು ತಾವು ? ಯಾವ ಊರವರು ? ಎಂದು ಕೇಳಿದರು ಗವಾಯಿಗ ಳವರು. ಸುಗೀತ ಸಾರ್ವಭೌಮರು, ಪಂಚಾಕ್ಷರಿಯವರು. ನಾವು ದೇವಗಿರಿ ಯವರು. ನನ್ನ ಹೆಸರು ಚಂದ್ರಶೇಖರಯ್ಯ ಈ ಕುರುಡ ಮಗು ನನ್ನ ಅಳಿ ಯನೆಂದು ಚಂದ್ರಶೇಖರಯ್ಯನವರು ದೀನತೆಯಿಂದ ಹೇಳಿದರು,

ಈ ಹುಡುಗನ ಹೆಸರು ಏನು? ಎಂದು ಗವಾಯಿಗಳು ಕೇಳಿದರು. "ಪುಟ್ಟಾರ್ಯ" ನಾನು ಪ್ರೇಮಕ್ಕಾಗಿ ಪುಟ್ಟಯ್ಯ ಪುಟ್ಟಯ್ಯ ಎಂದು ಕರೆಯುತ್ತೇನೆಂದು ಚಂದ್ರಶೇಖರಯ್ಯನವರು ಹೇಳಿದರು, ಮಹಾಗುರುವೆ! ಇವನನ್ನು ತಮ್ಮ ಸನ್ನಿಧಿಯಲ್ಲಿ ಇಡಬೇಕು ಎಂಬಾಶೆಯಿಂದ ಬಂದಿದ್ದೇನೆ ನನ್ನೀ ಬೇಡಿಕೆಯನ್ನು ಮಾನ್ಯಮಾಡಿ ಉದ್ಧರಿಸಬೇಕೆಂದು ಸಾಷ್ಟಾಂಗನೆರಗಿ ನದು; ಪುಟ್ಟಾರ್ಯನನ್ನು ಗುರುಗಳ ಪಾದದಲ್ಲಿ ಹಾಕಿದರು.

ತಮ್ಮಾ ನಿನ್ನ ಹೆಸರೇನು?

ಪುಟ್ಟಾರ್ಯ.

ನಿನಗೆ ಹಾಡಲು ಬರುತ್ತಿದೆಯಾ?

ಬರುತ್ತಿದೆ ಗುರುಗಳೇ! ಎಂದು ದಿಟ್ಟತನದಿಂದ ಉತ್ತರವಿತ್ತ. ಚಿಕ್ಕಂದಿನಿಂದಲೂ ಇಲ್ಲಿಯ ವರೆಗಿನ ವಿಷಯವನ್ನು ಚಂದ್ರಶೇಖರಯ್ಯನವರು ಈ ಮೊದಲೇ ತಿಳಿಸಿದ್ದರು.

ಹಾಗಾದರೆ ಒಂದು ಹಾಡು ಪುಟ್ಟಾರ್ಯ, ಎಂದು ಗವಾಯಿಗಳವರು ಅಪ್ಪಣೆ ಕೊಡಿಸಿದರು.

ಆಗ ಪುಟ್ಟಾರ್ಯ ಗುರುಗಳಿಗೆ ವಂದಿಸಿ, ಹಾರ್ಮೋನಿಯಂ ಬಾರಿಸುತ್ತ ತನ್ನ ಎಳೆಯ ಧ್ವನಿಯಿಂದ ಶೃತಿಲಯ ಬದ್ಧವಾಗಿ

ತೋರದಯ್ಯ ಸುಖ।
ತೋರದಯ್ಯ ಸುಖ॥

ಬೇರ ಬೇರೆ ಭಾವಿಸಿ ಬ್ರಹ್ಮಜ್ಞಾನವೊಂದಿಲ್ಲದವಗೆ॥
ನಿಗಮಾಗಮವನೋದಿ ಸುಗುಣ ಸಂತತಿಗೂಡಿ।
ಜಗದೊಳವಾಂತು ತನ್ನ ಬಗೆಯನಾರಯ್ಯದಿರೆ॥
ಕಪಟವಳಿದು ಕೋಟಿಜಪವನೆಸಗಿ ಬಲು।
ತಪವನೆ ಮಾಡಿ ತತ್ವದುಪದೇಶ ವಡೆಯದೆ॥
ಹಿಂಗದಣಿಮಾದಿ ಶಿದ್ದಿ ಯುಂಗಮಾಗಿ ಪೇರ್ಮೆಲೋಕಂ।
ಡಂಗುರವೆನಿಸಿ ಶಂಭುಲಿಂಗದನುವರಿಯದಿರೆ॥

ತೋರದಯ್ಯ ಸುಖ
ತೋರದಯ್ಯ.................

ಎಂಬ ನಿಜಗುಣರ ಹಾಡನ್ನು ಸ್ವಾರಸ್ಯವಾಗಿ ಹಾಡಿದ ಪುಟ್ಟಾರ್ಯ ಗವಾಯಿಗಳ ಉತ್ತರ ಏನು ಬರುತ್ತದಿಯೋ ಎಂದು ಅವರ ಮುಖವನ್ನೇ ನೋಡುತ್ತ ಕುಳಿತಿದ್ದರು ಚಂದ್ರಶೇಖರಯ್ಯನವರು; ಹಾಡು ಮುಗಿದನಂತರ ಕೆಲಹೊತ್ತು ಸುಮ್ಮನಿದ್ದು....ತದನಂತರ ಎಂಥ ಮಾಧುರ್ಯ ತುಂಬಿದ್ದಾನೆ ದೇವ ಈ ಹುಡುಗನ ಕಂಠದಲ್ಲಿ ಶೃತಿಲಯಗಳ ಗತಿ ಬಿಡದೆ ಹಾಡುವ ಈ ಹುಡಗನ ಮತಿ ಚಿಕ್ಕದಲ್ಲ. ಇವನಿಗೆ ಚನ್ನಾಗಿ ಕಲಿಸಿದರೆ ಒಂದು ಎಳ್ಳೇ ವಸ್ತುವಾಗುತ್ತಾನೆ- ಎಂದು ಉತ್ಸಾಹದಿಂದ ನುಡಿದರು- [ಗವಾಯಿಗಳವರು, ಅದಕ್ಕಾಗಿಯೇ ತಮ್ಮ ಪಾದಸನ್ನಿಧಿಗೆ ತಂದಿದ್ದೇನೆ ಗುರುಗಳೆ! ಎಂದು ನುಡಿದರು ಚಂದ್ರಶೇಖರಯ್ಯನವರು.

ಆಗಲಿ............ " ನಿಮ್ಮ ಇಚ್ಛೆಗೆ ನಾವು ಎರಡಿಲ್ಲ. ಕುರುಡರಿಗಾಗಿಯೇ ನನ್ನ ಸಂಸ್ಥೆ ಇದೆ; ಹುಟ್ಟಿದೆ. ನಾನಾದರೂ ಕುರುಡ. ನನ್ನ ಬಳಗವೇ ಇಂಥಾ ಕುರುಡರು. ಕುರುಡರ ಉದಾರ್ಧಕ್ಕಾಗಿಯೇ ನಾನು ಬದುಕಿದ್ದೋದು. ಕುರುಡರ ಜೀವನ ಬರಡಲ್ಲ ಎನ್ನುವ ಮಾತನ್ನು ಜಗತ್ತಿಗೆ ತೋರಿಸಿಕೊಡುವದಕ್ಕಾಗಿ ಗುರುಕುಮಾರಯೋಗಿಯ ಕೃಪಾದಿಂಧ ಟೊಂಕಕಟ್ಟಿನಿಂತಿದ್ದೇನೆ, ಎಂದು ಹೇಳಿದ ಗವಾಯಿಗಳವರಲ್ಲಿ ನಿಶ್ಚಲತೆ ತುಂಬಿತ್ತು; ನಿರ್ಧಾರತೆ ಕಂಡು ಬರುತ್ತಿತ್ತು,

ಪುಟ್ಟಾರ್ಯ!

ಏನು ಗುರುಗಳೆ?

ಎಷ್ಟೇ ಕಷ್ಟಬಂದರೂ ಸಹಿಸಿಕೊಂಡು ನಮ್ಮಲ್ಲಿದ್ದು ಕಲಿಯುತ್ತೀಯಾ? ಕಲಿಯುತ್ತೇನೆ ಗುರುಗಳೆ!

ನಿನ್ನ ಮನೆಮಾನ ಎಲ್ಲರ (ವ) ನ್ನು ಮರೆತು ನೆಮ್ಮದಿಯಿಂದ ನಮ್ಮಲ್ಲಿರಲು ನಿನಗೆ ಸಾಧ್ಯವಿದೆಯೆ?

ತಮ್ಮ ಕೃಪಾ ಆದರೆ ಸಾಧ್ಯವಿದೆ ಗುರುಗಳೇ!

ಇಂದಿನಿಂದ ನೀನು ನನ್ನವನು. ನಿನ್ನವರನ್ನುವವರಾರುನಿನ್ನ ಸಮೀಪ ಬರುವಂತಿಲ್ಲ. ಯಾವಾಗಲೂ ನೀನು ನನ್ನ ಜೊತೆಗೇ ಇರಬೇಕು.

ತಮ್ಮ ಮಾತಿಗೆ ಪ್ರತಿಯಿಲ್ಲ ಗುರುಗಳೇ! ಎಂದು ಪುಟ್ಟಾರ್ಯ ಗುರುಗಳ ಪಾದಗಳಲ್ಲಿ ಸಾಷ್ಟಾಂಗವೆರಗಿದ.

ಗುರುಗಳಿಗೆ ಅದಾವದೋ ಆತ್ಮೀಯತೆಯ ಭಾವ ಮೂಡಿಬಂದು ಪುಟ್ಟಯ್ಯಾ! ಎಂದು ಪುಟ್ಟಾರ್ಯನನ್ನು ಅಪ್ಪಿಕೊಂಡರು.

ನನ್ನ ಆಸರವು ತಪ್ಪಿತು, ಈಶ್ವರನಿಗೊಪ್ಪಿತು. ಕಟ್ಟೆಯ ಕಲ್ಲು ಕಟ್ಟೆಗೆ ಹೊಂದಿತು. ಎಂದು ಸಮಾಧಾನದೊಂದಿಗೆ ಗುರುಗಳಿಂದ ಅಪ್ಪಣೆ ಪಡೆದು ದೇವಗಿರಿಗೆ ಮರಳಿದರು. ಚಂದ್ರಶೇಖರಯ್ಯನವರು.





# ಗುರುವಿನದಾಸ, ನಿರತದಭ್ಯಾಸ

ಶರಣರ ವಚನವ ಮೀರದೆ ।
ಅತ್ತಿತ್ತಲುಂ ಜಾರದೆ ।
ಬೇರೊಂದಿಚ್ಛೆಯಂ ಕೋರದೆ ।
ಪರವಸದಿಂ ತಾರದೆ ।
ಭಕ್ತಿಯಂ ಪಾರದೆ ।

" ರಕ್ಷಾ ಶತಕ "

ಹರಿಹರನಂತೆ ಗುರು * ಪಂಚಾಕ್ಷರನು ಭುವಿಯಲ್ಲಿ ಪೊಡವಿಪಾಲಿಪನಂತೆ ಪರಿಶೋಭಿಸಿದ್ದನು. ಭಕ್ತನಾಗಿ; ಶಕ್ತನಾಗಿ ವಿರಕ್ತಪಥದಲ್ಲಿ ವ್ಯಕ್ತಿತ್ವವನ್ನು ಸಾಗಿಸಿದ್ದನು ಪಂಚಾಕ್ಷರ ಶಿವಯೋಗಿ. ಪ್ರಪಂಚದ ಪಾತಕಗಳ ರಹಿತನಾಗಿ, ಕಾಮನ ಕಾಕ ವಾಸನೆಗೆ ಕಾಯವಿಡದಿಹ ಕಾಯಕಯೋಗಿ, ಕುಮಾರ ಶಿವಯೋಗಿಯ ವಾಕ್ಯದಂತೆ ಲೋಕದ ಚಾಕರಿಗಾಗಿ ಕಾಯ ಕರಗಿಸುವ ಸಮಾಜ ಸೇವಕನಾಗಿ, ಗಾಯಕನಾಗಿ; ಗಂಧರ್ವನಾಯಕನಾಗಿ ಪಂಚಾಕಕ್ಷರಯೋಗಿ ಪಂಚಮುಖೇಶನ ಸಂಚಯದಲ್ಲಿ ಸಂಚರಿಸಿದ್ದನು.

ನಿಮ್ಮ ಪಾದಾಬ್ಜಮಂ ಬಿಡೆಂ
ಸೀಳ್ದೊಡಂ ಪೋಳ್ದೊಡಂ ಪೊಯ್ದಡಂ ಬಿಡೆಂ
ಅಭವ ಬಲವಿಡಿದೆಂ ಪಾಜೆಂ ಶಂಕರಾ !

" ರಕ್ಷಾ ಶತಕ "

ಎಂದು ನಮ್ಮ ಪುಟ್ಟಾರ್ಯನು ಚಂದ್ರಶೇಖರಯ್ಯನವರ ಸಹಾಯದಿಂದ ಪಂಚಾಕ್ಷರ ಗುರುವಿನ ಪಾದದಡಿ ಪಿಡಿದನು; ಮುಡಿದನು. ಚಿನ್ನ ಸೋನಿಯಲ್ಲಿ; ಕುಂಚು ಚಿತ್ರಕಲಾವಿದನಲ್ಲಿ, ಪುಷ್ಪ ಪೂಜಾರಿಯಲ್ಲಿ, ಮಂಣು ಮಣ್ಣೆ

---

* ಪಂಚಾಕ್ಷರ ಶಿವಯೋಗಿಯ ಬಗ್ಗೆ ಹೆಚ್ಚಿನ ಮಾಹಿತಿಗಾಗಿ "ಜೀವನ ಕವನ.' ಕೃತಿ ಓದಿರಿ

ಗಾರನಲ್ಲಿ, ಕಾಗದ ಕವಿಯಲ್ಲಿ, ತಂತಿ ತಂಬೂರಿಯಲ್ಲಿ ಮಿಲಿತವಾದರೆ ಎಷ್ಟೊಂದು ಬೆಲೆಯೋ ಹಾಗಾಯಿತು. ಪುಟ್ಟಾರ್ಯನ ಸುಸ್ಥಿತಿ,

ಮಂದಿ ಮಂದೀಯಂದು ಮಂದಿ ನಂಬಲಿಹೋದ ।
ಮಂದಿ ಬಿಟ್ಟಾರ ನಡುನೀರ । ನನ್ನಯ್ಯ ।
ತಂದಿ ನನ ಕೈ ಬಿಡಬ್ಯಾಡೋ ॥

ಎಂದು- ತಂದೆ-ತಾಯಿಗಳಿಲ್ಲದ ತಬ್ಬಲಿಯಾದ ಪುಟ್ಟಾರ್ಯ ಗುರುವಿನಲ್ಲಿ ಮೊರೆಯಿಟ್ಟಂತಿತ್ತು ಅವನ ಈಗಿನ ಸ್ಥಿತಿ.

ಈ ಸಮಯದಲ್ಲಿ ಪಂಚಾಕ್ಷರ ಗವಾಯಿಗಳ ಸಂಗೀತ ಶಾಲೆಯಲ್ಲಿ ೩೦-೪೦ ಜನ ಸಂಗೀತ ಕಲಿಯುವ ವಿದ್ಯಾರ್ಥಿಗಳಿದ್ದರು. ಬೆಳಗಿನ ನಾಲ್ಕು ಗಂಟೆಗೆ ಏಳಬೇಕು. ನಿತ್ಯಲೂ ಶಿವಸ್ತೋತ್ರ ಗುರುಪ್ರಾರ್ಥನೆ ಯಾದನಂತರ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುವ ಉಚ್ಚ ಸಂಪ್ರದಾಯದ ಆಗರವಾಗಿತ್ತು ಪಂಚಾಕ್ಷರಿಯವರ ಸ್ಥಾನಿಕ ಸಂಗೀತ ಶಾಲೆ. ಇಲ್ಲಿಯ ನೇಮ ಕೆಲವು ದಿವಸ ಕ್ರಮದಂತೆ ಕಂಡು ಬಂದರೂ ಕ್ರಮೇಣ ಈ ನೇಮ ಅಭ್ಯಾಸಧಾಮವಾಗಿ ಪರಿಣಮಿಸಿತು ಪುಟ್ಟಾರ್ಯನಿಗೆ. ಡಾಕ್ಟರ್ ಹೇಳಿದ್ದೂ ರೋಗಿ ಬಯಸಿದ್ದೂ ಒಂದೇ ಆದಂತಾಯಿತು. ಹುಟ್ಟು ಕಲಾ ಜೀವಿಯಾದ ಪುಟ್ಟಾರ್ಯ ಮತ್ತಿಷ್ಟು ಆಸ್ಥೆವಹಿಸಿ ಕಲಿಯ ಹತ್ತಿದ, " ಬೆರಳು ಸಿಕ್ಕರೆ ಹಸ್ತವನ್ನೇ, ಹಸ್ತ ಸಿಕ್ಕರೆ ಶರೀರ ಬಳಸುವ " ಕುಶಲಾಗ್ರ ಬುದ್ಧಿಯುತ ಪುಟ್ಟಾರ್ಯ ೧-೨ ವರುಷಗಳಲ್ಲಿ ಹಾರ್ಮೋನಿಯಂ ನುಡಿಸುವಲ್ಲಿ ಅಗ್ರಗಣ್ಯನಾದ " ಖ್ಯಾಲ " " ಠುಮ್ರಿ " ಗಾಯಕಿಗಳನ್ನು ಹಾರ್ಮೋನಿಯಂದಲ್ಲಿ ಭಾರಿಸುವಾಗ "ಮೇಂಡ್" "ಜಾರ್" "ಗಮಕತಾನ್" ಗಳನ್ನು ತಗೆಯುವದನ್ನು ಕಂಡರೆ ಶ್ರೋತೃಗಳಿಗೆ ಆಶ್ಚರ್ಯವಾಗುತ್ತಿತ್ತು. ಸಾಧ್ಯವಾಗದ ಕೆಲಸಗಳನ್ನು ಹಾರ್ಮೋನಿಯಂದಲ್ಲಿ ಬಾರಿಸಿ ತೋರಿಸುವದನ್ನು ಕಂಡು ಗುರುವರ್ಯರು ಆನಂದ ತುಂದಿಲರಾಗುತ್ತಿದ್ದರು. ತಾವುಗಳು ಹಾಡುವಾಗ ಪ್ರೋಗ್ರಾಮ್ ಮಾಡುವಾಗ ತಮ್ಮ ಸಾಥಿಗಾಗಿ ಪುಟ್ಟಾರ್ಯ ಹಾರ್ಮೋನಿಯಂ ತೆಗೆದುಕೊಳ್ಳುತ್ತಿದ್ದರು. ಪುಟ್ಟಾರ್ಯನ ಹಾರ್ಮೋನಿಯಂ ಕೇಳುತ್ತ ಆನಂದದಿಂದ ಹಾಡುತ್ತ ಕುಳಿತರೆ ಸಮಯ ಹೋದದ್ದೆ ಗೊತ್ತಾಗುತ್ತಾ ಇದ್ದಿಲ್ಲ. ಗುರುಗಳು [illegible] ( ಡಂಗ್ )

ಗನ್ನು ಒಂದೂ ಬಿಡದಂತೆ ಹಾರ್ಮೋನಿಯಂದಲ್ಲಿ ಬಾರಿಸಿ ತೋರಿಸುತಿದ್ದ ಪುಟ್ಟಾರ್ಯ. ೧–೨ ವರ್ಷಗಳಲ್ಲಿ ಯಾರು ಪಡೆಯದೇ ಇದ್ದ ಪ್ರಗತಿಯನ್ನು ಪುಟ್ಟಾರ್ಯನಲ್ಲಿ ಕಂಡು; ಗುರುಗಳು ಪುಟ್ಟಯ್ಯ ! ನೀನು ನನಗೆ ತಕ್ಕ ಶಿಷ್ಯನಾಗಿ ಬಂದಿದ್ದೀಯಾ! ಎಂದು ಪ್ರೃಥುವಾಗಿ ಮೈದಡವಿ ಮೈಮರೆಯುತ್ತಿದ್ದರು. ಪುಟ್ಟಾರ್ಯನ ದೈವೀಶಕ್ತಿಯನ್ನು ಬುದ್ಧಿ ಚಾತುರ್ಯವನ್ನು ಕಂಡು ಒಂದೊಂದು ಸಲ ಗುರುಗಳೂ ಕೂಡಾ ಆಶ್ಚರ್ಯ ಚಕಿತರಾಗುತ್ತಿದ್ದರು. ಪುಟ್ಟಾರ್ಯನ ಸ್ವರ ಜ್ಞಾನವನ್ನು ತಾಲವಿಜ್ಞಾನವನ್ನೂ ಕಂಡು. ಗುರುವರ್ಯರು ಗಾಯನ ಪಾಠ (ಉತ್ತರಾದಿ ಹಾಗೂ ದಕ್ಷಿಣಾದಿ) ಸುರು ಮಾಡಿದರು. ಸುರು ಮಾಡಿದ್ದೇ ತಡ ಪ್ರವಾಹದ ಗುಂಟ ಓಡುವ ತೆರೆಯಂತೆ ಪಾಠದ ಮೇಲೆ ಪಾಠ ತಪ್ಪದೇ ಹೇಳಿಸಿಕೊಂಡು ಶ್ರಮದಿಂದ; ಕ್ರಮದಿಂದ ಅಧ್ಯಯನ ಮಾಡುತಿದ್ದನು. ನಮ್ಮ ಬಾಲಾರ್ಯ; ಪುಟ್ಟಾರ್ಯ, ನಿದ್ರಾದೇವಿಯ ಕೃಪೆಯ ಬಯಸದೆ, ನಿದ್ರಾ ಮಹಾ ತಾಯಿಯ ಮಡಿಲ ತ್ಯಜಿಸಿ, ಆಲಸ್ಯದಧಿದೇವತೆಯ ದೃಷ್ಟಿಯಲ್ಲಿ ಕೃತಘ್ನ ನಾಗಿ, ಸದಾಧ್ಯಯನ ಮಗ್ನನಾಗಿ ಕಾಲಕಳೆಯುವ ಪುಟ್ಟಾರ್ಯನ ಸ್ಥಿತಿ, ಸದ್ಗತಿಯ ಭಿತ್ತಿಯಂತೆ ಉದ್ಮತಿಯ ಸತ್ತಿಗೆಯಂತೆ ಕಂಡುಬರತಾ ಇತ್ತು

ಪುಟ್ಟಾರ್ಯನ ಸಂಗೀತಭ್ಯಾಸ ಯಥಾವತ್ತಾಗಿ ಸಾಗಿತು.... ಮಹಾ ಮಹಿಮನಾದ ಪಂಚಾಕ್ಷರನ ಸನ್ನಿಧಿಯಲ್ಲಿ ಬೆಳೆಯುತ್ತಿರುವ ಪುಟ್ಟಾರ್ಯನ ಪ್ರಗತಿಯ ಅಂಕೆಗೆ ಸಂಖೆಯಿಲ್ಲ.

ಪಂಚಾಕ್ಷರಿಯುವರ ಜೀವನ; ಅವರ ಸಂಗೀತ ಗಾಯನ; ಧರೆಯ ಜನರಿಗ್ಗೆ ಬದುಕುವ. ಸಂಜೀವಿನಿಯಾಗಿ ಪರಿಣಮಿಸಿತು. ಹೀಗಾಗಲು ಯಾವ ಮಹತ್ವ ಅಡಗಿದೆ ಪಂಚಾಕ್ಷರಿಯುವರಲ್ಲಿ ? ಅವರು ಈ ಮಹತತೆಯಲ್ಲಿ ಬದುಕುವದಕ್ಕೇನು ಕಾರಣ ? ಇದನ್ನು ಓದುಗರು ಅರಿತುಕೊಳ್ಳುವದು ಮೊದಲ ಕರ್ತವ್ಯ; ಸೊಗದವ್ಯ.

ನಿಸ್ಪೃಹಃ ಸರ್ವ ಕಾಮೇಭ್ಯೋಯುಕ್ತ ಇತ್ಯುಚ್ಯತೇತದಾ ।। ಎಂಬ ವುಕ್ತಿಯಂತೆ ಜಗದ ಭೋಗಭಾಗ್ಯಗಳಿಗೆ ಮಾರು ಹೋಗದೆ, ವಿರಕ್ತಿ ಜೀವನ ದಲ್ಲಿ ವಿಹರಿಸಿ; ವರವಿರಕ್ತನಾಗಿ; ಪರಮಪುಷ್ಪವಾಗಿ ಅರಳಿ ತತ್ವ ಮಕರಂದ

ವನ್ನು ಬೀರಿದ ಹಾನಗಲ್ಲಿನ ಕುಮಾರ ಶಿವಯೋಗಿಯು. ಅಧರ್ಮದಲ್ಲಿ ಲೀನವಾದ ಸಮಾಜದುದ್ಧಾರವಾಗಬೇಕಾದರೆ ಪಂಚಾಚಾರ ಅಷ್ಟಾವರಣಗಳು ಅರಿವಾಗಬೇಕು. ಈ ಅರಿವಾಗಬೇಕಾದರೆ ಗುರು ವರ್ಗ ನಿರ್ಮಾಣವಾಗಬೇಕು. ಈ ಗುರುವರ್ಗನಿರ್ಮಾಣವಾಗಬೇಕಾದರೆ ಗುರುಗಳನ್ನು ತಯಾರಮಾಡುವ ಯೋಗಮಂದಿರ ಮೊದಲು ಸಿದ್ಧವಾಗಬೇಕು. ಅಂದಾಗ ಜಗತ್ತಿನ ಕಲ್ಯಾಣ ಸಾಧ್ಯ. ಎನ್ನುವ ಮಹತ್ವಾಕಾಂಕ್ಷೆಯಿಂದ ಅನಂತ ಕಷ್ಟಪಟ್ಟು ಇಲಕಲ್ (ಚಿತ್ತರಗಿ) ಮಹಾಂತ ಶಿವಯೋಗಿಗಳು ತೋರಿಸಿದ ಜಾಗೆಯಲ್ಲಿ ಮಂದಿರಕಟ್ಟಬೇಕೆಂದು ಸಂಕಲ್ಪಿಸಿದನು. ಈ ಹಾನಗಲ್ಲಿನ ಶಿವಯೋಗಿ- ಕೊನೆಗೆ ಮಹಾಕೂಟ ಐಹೊಳ್ಳಿ, ಪಟ್ಟದಕಲ್, ಬನಶಂಕರಿಗಳ ಮಧ್ಯದಲ್ಲಿ ಪರಿಶೊಭಿಸಿದ ಮಲಾಪಹಾರಿಣಿಯ ಶೆರಗಿನಲ್ಲಿ ಮಂದಿರ ಕಟ್ಟುವದನ್ನು ಮಹಾಂತ ಶಿವಯೋಗಿಗಳ ಅಪ್ಪಣೆಯ ಮೇರೆಗೆ ನಿರ್ಧಾರವಾಯಿತು. ಈ ಸ್ಥಾನ ಶಿವ-ಯೋಗಕ್ಕಾನುಕೂಲವಾದ ಸ್ಥಾನವೇನೋ ನಿಜ. ಆದರೆ ಕಾಡುಮೃಗಗಳಿಂದ, ಗಿಡಗಂಟಿಗಳಿಂದ, ಗಿರಿಗಹ್ವರಗಳಿಂದ ಗಿಜಿಗಿಜಿಯೆನ್ನುತಿತ್ತು, ದುರ್ಗಮಯವಾಗಿತ್ತು. ಈ ಸ್ಥಾನದಲ್ಲಿ ಜನರು ತಿರುಗಾಡುವದೊತ್ತಟ್ಟಿಗಿರಲಿ ಆಸಪಾಸ್ ದೃಷ್ಟಿ ಹಾಕುತ್ತಿದ್ದಿಲ್ಲ. ಅಷ್ಟೊಂದು ಭಯಂಕರ ಸ್ಥಿತಿಯಲ್ಲಿತ್ತು ಈ ಕಾಡು. ಇಂಥಹದರಲ್ಲಿ ಹಾನಗಲ್‌ಯೋಗಿ ಬಂದು ವಾಸಮಾಡಿ ಕಠಿಣತರವಾದ ತಪಸ್ಸಾಚರಿಸಿ, ಶಿವನೊಲಿಸಿ, ಸಂಕಲ್ಪ ಸಿದ್ಧಿಸಿಕೊಂಡ, ಮಂದಿರವ ಕಟ್ಟಿಕೊಂಡ. ಮಂದಿರವಾದ ಮೇಲೆ ಮಕ್ಕಳಿಗೇನು ಕಡಿಮೆ? ಅನಂತ ಕೂಡಿದರು. ಸ್ವತಃ ಸ್ವಾಮಿಗಳು ಮಕ್ಕಳಿಗೆ ಆಚಾರ ವಿಚಾರಗಳನ್ನು ಕಲಿಸಿ, ಶಿವಪೂಜೆಯ ಕ್ರಮ ತಿಳಿಸಿ, ಶಿವಾನುರಾಗಕ್ಕೆಳಸಿದರು. ಶ್ರೀ ರುದ್ರಾಧ್ಯಯನ; ವೇದ ಪಠಣ; ನಿಜಗುಣರ ಷಟ್‌ಶಾಸ್ತ್ರ, ಬೋಧನ, ಪುರಾಣ ಪುಣ್ಯ ಕಥನ; ಕೀರ್ತನಗಳ ಜ್ಞಾನಮಾಡಿಸಹತ್ತಿದರು. ಇದರಿಂದ ಈ ಮಂದಿರ ಶಿವಯೋಗಮಂದಿರವಾಗಿ ಕಂಗೊಳಿಸಿತು. ಅಂದಿನ ಭಯಾನಕ ಸ್ಥಿತಿ ಅಳಿದು ಭಕ್ತಿಭಾವವು ಮೊಳೆತು ನಿಂತಿತ್ತು. ನೋಡುವವರ ಕಂಣಿಗೆ ಬಲು ಶೋಭಾಯಮಾನವಾಗಿ ಕಾಣಸ್ತಾ ಇತ್ತು ಈ "ಶಿವಯೋಗಿಮಂದಿರ"..................
ಮಲಾಪಹಾರಿಯ ಶೆರಗಿನಲ್ಲಿ, ಗಿರಿ ಕಂದರಗಳ ಬಂದರದಲ್ಲಿ; ತರುಲತೆಗಳ ತಾರತಮ್ಯದಲ್ಲಿ, ಗಿಡ ಮರಗಳ ಗೂಡಿನಲ್ಲಿ. ತರತರದ ಪುಷ್ಪ ಮಂಟಪದಲ್ಲಿ ವಿರಾಜಮಾನವಾಗಿದೆ ಈ ಶಿವಯೋಗಮಂದಿರ.

ಅಲ್ಲಿಗಲ್ಲಿಗೆ ಬೆಳೆದ ಮಲ್ಲಿಗೆಯ ಬಳ್ಳಿಗಳು, ಗುಂಪು ಗುಂಪಾಗಿ ಅರಳ್ದ ಮಲ್ಲಿಗೆ ಪುಷ್ಪಗಳು, ಸೊಲ್ಲುಸೊಲ್ಲಿಗೆ ಸೊಂಪು ಸೋರ್ವ ಪುಷ್ಪ ಸರೋವರಗಳು, ಥಟ್ಟ ದಿಟ್ಟಾಗಿ ಬೆಳೆದ ಹುಲ್ಲಿನಗಟ್ಟಿಗಳು, ಹದಿಬದಿಯಲ್ಲಿ ಬನದ ಬೀದಿಗಳು, ಒಂದೊಂದರಿಂದಾಗಿ ಸುಂದರವಾಗಿ ನಿಂದ ಮಾಂದಳಿರಗಳು, ತಗಿಮಿಗಿಯಾಗಿ ಬೀಗಿ ಮುಗಿಲ ಮುಟ್ಟುವ ತೇಗು ತೆಂಗಿನ ತೋಪುಗಳು, ಫಲ ಬಲದಿ ನಲುಗಿ ಬೆಳೆದುಳಿದ ಫಲದಾಳಗಳು, ಕಂಪಿಂಪು ಕಾರುವ ಸುಗಂಧ ವೃಕ್ಷಗಳು, ರಂಗು ರಂಗಾರವಾಗಿ ರಂಗವಲ್ಲಿ ಹಾಕುವದಕೆಂದೇ ರಂಗೇರಿದ ಆಕಾಶ ಮಲ್ಲಿಗೆಗಳು. ಒಂದೇ ಎರಡೇ ಅನಂತವಾಗಿ ಬೆಳೆದು ಬೆಳಗಿದೆ ಇಲ್ಲಿ ವನಸೌಂದರ್ಯ.

ನಿಚ್ಚಳದೊಳೆಸೆವ ತಿಳಗೊಳನ ಕಲಕಾಡಿ ಬಿರಿ।
ದಚ್ಚಲರ ಧೂಳಿಗಳ ಚೆಲ್ಲಾಡಿ ಸಲೆಮುದಂ ।
ಪೆರ್ಚಿ ತರುಲತೆಯನಣೆದಾಡಿ ಮರಿದುಂಬಿಗಳ ಕೂಡಿಕೊಂಡೀ ಬನ
ನಿಚ್ಚ ಮಲೆವೆಲರೆಂಬ ಸೊಕ್ಕಾನೆ ತಾನೆ ತ ।
ನ್ನಿಚ್ಛೆಯಿಂ ತಿರುಗುತಿವೆ ತೊಲತೊಲಗಿ ವಿರಹಿಗ।
ಳೆಚ್ಚರದೊಳೆಂದೆತ್ತಲುಂ ಪ್ರಯ್ಯುಲಿಡುವಂತೆ ಕೂಗುತಿವೆ ಕೋಗಿಲೆಗಳು ॥

" ಜೈಮಿನಿಭಾರತ "

ಈರೀತಿ ವರ್ಣಿಸುವ ತೆರದಿ ಶೋಭಿಸಿದೆ ಶಿವಯೋಗಮಂದಿರ, ಬನದ ಬಿಂದಿರ. ಶೃಷ್ಟಿಸೌಂದರ್ಯದ ಸೊಬಗು ಈ ಮಂದಿರದ ಸುತ್ತ ಬಂದು.ಕೇಂದ್ರೀ ಕೃತವಾದಂತೆ ತೋರತಾಯಿದೆ. ಮಂದಾರ, ಪಾರಿಜಾತ, ಪಾದರಿ. ಬಕುಳ; ಸೇವಂತಿಗೆ, ಜಾಜಿ, ಜೂಜಿ, ಕಣಗಲ, ದಾಸಾಳ, ಸುಮಲ್ಲಿಗೆಗಳಾದಿ ಪುಷ್ಪ ವಲ್ಲರಿಯಲ್ಲಿ ಜರಿದು ಜಿಯ್‌ಗುಟ್ಟಿ ಹರಿದಾಡುವ ಬೃಂಗಿಗಳ ಗುಂಜಾರ ದಿಂದೊಪ್ಪಿದ್ದು ಈ ಮಂದಿರ, ವನ ಚಂದಿರ,

ತರುಣ ಪಲ್ಲವದ ವಿಸ್ತಾರದಿಂ ನೇರದಿಂ
ಸರಗೈವ ಕಪಿಲಕೋಚ್ಚಾರದಿಂ ಸಾರದಿಂ
ಸುರಿವ ಪೊದೊಂಗಲ ತುಷಾರದಿಂ ಸ್ವೈರದಿಂ ಸಲ್ಲಾಪಕೆಳಿಸಿ ಬಳಸಿ॥
ಮೊರೆವ ತುಂಬಿಗಳ ಝೇಂಕಾರದಿಂ ತೋರದಿಂ
ಗರಿಪಕ್ವಮಾದ ಫಲ ಭಾರದಿಂ ಕೀರದಿಂ
ಕರೆಮಸೆಯುತಿರ್ಪ ಸಹಕಾರದಿಂ ತೀರದಿಂ ಪೆಲ್ಲಿಯುಂ ನಂದನದೊಳು ॥

ತನುವಿಗೆ ತಂಪು; ಮನಸಿಗೆ ಮಂಪು, ಕಿವಿಗೆ ಇಂಪು, ನಾಸಿಕಕೆ ಸೊಂಪು ಜಂಪರಿಸುವ ಜಿಂಜರ, ಈ ಮಂದಿರ. ಸೀಳಾಗಿ ಹರಿದಿರುವ ಮಲಾಪಹಾರಿ ಹೊಳೆಯಿಂದ ಬಾಳಾಗಿ ಬೆಳೆದಿರುವ ಬನದ ಬೆಳೆಯಿಂದ ಪಶು ಪಕ್ಷಿಗಳ ತೂಷಾ ರದಿಂಪಿಸಿಂದ. ವಟುಗಳ ಶಿವ ಮಂತ್ರಗಳ ಘೋಷದಿಂದ. ತಾಳಾಗಿ ತೂರಿ ಬರುವ ಸಂಗೀತದಿಂದೊಡಗೂಡಿದ ಶಿವಭಜನಗಳಿಂದ, ಸರಳಾಗಿ ಸಾಗಿಬರುವ ಸಾಹಿತ್ಯದಿಂದೊಡಗೂಡಿದ ಕಾವ್ಯಾಧ್ಯಯನದ ಧ್ವನಿತರಂಗಗಳಿಂದ. ಸಾಲಾಗಿ ಸಾರುವ ಸಾಧಕರ ಪಾತ್ರಗಳಿಂದ, ಮೇಳಾಗಿ ಬರುವ ಶಿವಸ್ತೋತ್ರಗಳಿಂದೊ ಪ್ಪಿದೆ, ಶಿವಯೋಗಮಂದಿರದೆ.

ಇಂಥಾ ಪವಿತ್ರ ಸೀಮೆಯಲ್ಲಿ, ತಪೋ ಭೂಮಿಯಲ್ಲಿ, ಕುಮಾರಸ್ವಾಮಿ ಯಲ್ಲಿ ಬೆಳೆದ ಪಂಚಾಕ್ಷರ ಗವಾಯಿಗಳಿಗೆ ಸ್ವಾಭಾವಿಕವಾಗಿ ಮಹಿತ್ವದ ಪಟ್ಟ ಗಟ್ಟಿಯಾಗಿತ್ತು.

ಹಾನಗಲ್ ಶಿವಯೋಗಿಯ ಆಧ್ಯಾತ್ಮದ ಗರಡಿಯಲ್ಲಿ ಒಡನಾಡಿದ ಪಂಚಾ ಕ್ಷರರ ತಲೆಬುರಡಿ ಪರಮಾತ್ಮನ ಕರಡಿಗೆಯಂತಾಗಿತ್ತು, ಮಹಾತ್ಮರ ಮಹ ಡಿಯಲ್ಲಿ ದೂಡಿತ್ತು.

ಇಂಥವರ ಆಶ್ರಯದಡಿಯಲ್ಲಿ ದಿಡವಿಡದ ಪುಟ್ಟಾರ್ಯರ ಬಾಳು ಬರಡಾ ಗಬಹುದೆ? ಕುರುಡಾಗ ಬಹುದೆ?? ಕೊರಡಾಗ ಬಹುದೆ???.... ಇಲ್ಲ ಪ್ರಗತಿಯ ಪರಡಿಯಲ್ಲಿರಿಸಿತು. ಗಾಯನದೊಂದಿಗೆ ವ್ಹಾಯೋಲಿನ್, (ಪಿಟಿಲು); ಸಾರಂಗಿ, ತಬಲಾ ಮೊದಲಾದ ವಾದ್ಯಗಳನ್ನು ಕಲಿಯ ಹತ್ತಿದ ನಮ್ಮಪುಟ್ಟಾರ್ಯ. ಒಂದಲ್ಲ ಎರಡಲ್ಲ ಸಂಗೀತದ ಎಲ್ಲ ವಾದ್ಯಗಳನ್ನೂ ಕಲಿಯ ಬೇಂಕೆಬ ವಲವಿಕೆಯಿಂದ ನಿಷ್ಠೆಯಿಂದ ಕಷ್ಟತರವಾದ ಅಭ್ಯಾಸ ಮಾಡ ಹತ್ತಿದ- ಇಷ್ಟು ಚಿಕ್ಕ ವಯಸ್ಸಿನಲ್ಲಿ ಒಂದು ವಾದ್ಯ ಕಲೆಯಬೇಕಾದರೆ ಸಾಕು ಬೇಕಾಗಿ ಹೋಗುತ್ತದೆ. ಅಂಥಾದ್ದು ನಮ್ಮ ಪುಟ್ಟಾರ್ಯ ೪-೫ ವಾದ್ಯಗ ಳನ್ನು ಅಭ್ಯಾಸಮಾಡುವದನ್ನು ಕಂಡರೆ,- ಅಲೆಗ್ಝಾಂಡರ ಒಮ್ಮೆಲೆ ಒಂದೇ ಸಮಯಕ್ಕೆ ೨ ವಿಷಯ ಚರ್ಚಿಸುತಿದ್ದ; ೨ ಕಾವ್ಯಗಳನ್ನು ಬರೆಯುತಿದ್ದ- ಅವನಿಗೆ ೨ ಮೆದುಳು ಇದ್ದವು ಎಂಬ ವಿಷಯ ಜ್ಞಾಪಕಕ್ಕೆ ಬಂದು, ಈ ನಮ್ಮ

ಪುಟ್ಟಾರ್ಯನಿಗ ೪-೫ ವರುಷ ಇರಬಹುದೆ? ಎಂದು ವಿಚಾರ ತರಂಗದಲ್ಲಿ ವಿಹರಿಸುತ್ತಿತ್ತು ಪಂಚಾಕ್ಷರಿಯವರ ಮನಸಕ್ಕಿ. ಪುಟ್ಟಾರ್ಯನು ತಟ್ಟಿದ್ದೇ ತಾಲ ವಾಗಿ, ಹಾಡಿದ್ದೇ ರಾಗವಾಗಿ, ಹಚ್ಚಿದ್ದೆ ಸ್ವರವಾಗಿ ಪರಿಣಮಿಸುತಿತ್ತು.

ಏನೋ ಪುಟ್ಟ? ನಿನಗ್ಯಾಕೋ ಈ ಹವ್ಯಾಸ? ಕಷ್ಟಪಟ್ಟು ಮೊದಲು ಒಂದೊಂದು ಅಭ್ಯಾಸ ಮಾಡೋ. ಒಳ್ಳೊಳ್ಳೆಯವರು ವುಳ್ಳಾಡುವಾಗ ಗುಳ್ಳೆವ್ವ ತಲೆ ಹಾಕಿದಳೆಂದ ಹಾಗೆ ಆಗಿದೆ ನಿನ್ನ ಪಾಡು. ಅತಿಆಶೆ ಗತಿಗೆಡಿಸಿತಂತೆ. ಒಂದೇ ಬಾರಿಗೆ. ಉತ್ತರಾದಿ, ದಕ್ಷಿಣಾದಿ ಗಾಯನ, ಹಾರ್ಮೋನಿಯಂ ಪಿಟಲು, ತಬಲಾ, ಸಾರಂಗಿ ಸುರುಮಾಡಿದಿಯಲ್ಲ ಇದರಲ್ಲಿ ನಿನಗೆ ಯಾವದೂ ಬರು ವದಿಲ್ಲ. "ಆಗಸರ ನಾಯಿ ಹಳ್ಳಾನೂ ಕಾಯಲಿಲ್ಲ ಮನೀನೂ ಕಾಯಲಿಲ್ಲ; ಅನ್ನುವ ಹಾಗೆ ನಿನಗ್ಯಾವುದೂ ಪೂರ್ಣವಾಗುವದಿಲ್ಲ. ನೆಲವಿಗೆ ಹಾರದ ಬೆಕ್ಕು ಮುಗಿಲಿಗೆ ಹಾರ ಹೊರಟಂತಾಗಿದೆ ನಿನ್ನ ಪಾಡು. ಸುಮ್ಮನೆ ನಾನು ಹೇಳಿದಂತೆ ಕೇಳು. ಮೊದಲು ಒಂದು ಕಲಿ. ಎಲ್ಲವೂ ಒಮ್ಮೆಲೆ ಕಲಿಯು ತ್ತೇನೆನ್ನುವ ಆಶೆ ಬಿಡು! ಎಂದು ಸರಿಪಾತಿಕರು ಅಂದಾಗ "ಗುರುವಿನ ಕೃಪೆ ಯಿದ್ದರೆ ಯಾವುದು ಅಸಾಧ್ಯ" ವೆಂದು ಅವನ ಬಾಯಿ ಬಡಿದು ಬಿಟ್ಟ ಪುಟ್ಟಾರ್ಯ. ಗುರುವಿನಲ್ಲಿ ಅಚಲ ಭಕ್ತಿಯುಳ್ಳವನಾದ ಪುಟ್ಟಾರ್ಯನಿಗೆ ಆದಾ ವುದು ಅಸಾಧ್ಯವೆನ್ನುವ ಪ್ರಶ್ನೆಯೇ ಬರುತ್ತಿದ್ದಿಲ್ಲ. ಗುರುವಿನ ಹರಕೆಯಿ ದ್ದರೆ ಎಲ್ಲವರಲ್ಲೂ ಜಯಗಳಿಸುತ್ತೇನೆ ಎನ್ನುವ ನಿಷ್ಠಾಭಾವದಿಂದ ಅಧ್ಯಯನ ಶಾಲಿಯಾದ.

ಪುಟ್ಟಾರ್ಯನ ಪಾಠಪ್ರವೃತ್ತಿಯನ್ನು ಕಂಡು ಪಂಚಾಕ್ಷರಿಯವರು; ಅದಾ ವುದೋ ಆಶಾಕಿರಣ ಬೀರಿದರು. ತಂದೆ ಕುಮಾರ ಶಿವಯೋಗಿ ಅಂದು ನುಡಿದ ಭವಿಷತ್ ವಾಣಿಯ ಸದುತ್ತರ ಈ ಪುಟ್ಟಾರ್ಯನೇ ಎಂದು ಅರಿತು ಕೊಂಡರು..................

ಒಂದುದಿನ ಪುಟ್ಟಾರ್ಯನನ್ನು ಕರೆದು ಪುಟ್ಟಯ್ಯಾ ನಿನಗೆ ಶಿವದೀಕ್ಷೆ ಮಾಡಿಸಬೇಕೆಂದು ಮಾಡಿದ್ದೇವೆ. ಇದಕ್ಕೆ ನಿನ್ನ ಒಪ್ಪಿಗೆಯೆ?

ದೀಕ್ಷೆ ಅಂದರೆ ಏನು ಗುರುಗಳೇ!

ದೀಕ್ಷೆ ಅಂದರೆ.

ಮೋಕ್ಷಮಾರ್ಗದ ಮೊದಲ ಸೋಪಾನ; ತವ ತತ್ವ ಸಾಧನ ಪಾಪವನ್ನು ಪರಿಹರಿಸುವ ಪರಮೇಶನ ಕೃಪಾಣ; ಈದೀಕ್ಷೆ.

ದೀಯತೇ ಲಿಂಗ ಸಂಬಂಧಃ
ಕ್ಷೀಯತೇಚ ಮಲತ್ರಯಂ ।
ದೀಯತೇ ಕ್ಷೀಯತೇ ತಸ್ಮಾತ್ಸಾ
ದೀಕ್ಷೇತಿ. ನಿಗಧ್ಯತೆ ॥

ಲಿಂಗ ಸಂಮ್ಮಂದವನ್ನುಂಟು ಮಾಡಿ, ಆಣವಮಲ ಕಾರ್ಮಿಕಮಲ ಮಾಯಾಮಲಗಳೆಂಬ ತ್ರಿವಿಧ ಮಲತ್ರಯಗಳನ್ನು ನಾಶ ಮಾಡುವದಕ್ಕೆ ದೀಕ್ಷೆ ಎಂದು ಹೆಸರು. ಶ್ರೀಗುರುವು ಶಿವದೀಕ್ಷಾರೂಪವಾದ ಕತ್ತರಿಯ ಪ್ರಯೋಗದಿಂದ ಶಿಷ್ಯನಲ್ಲಿರತಕ್ಕಂಥ ಸಮಸ್ತ ಪಾಪಗಳನ್ನು ಕತ್ತರಿಸಿ ಶಿವಲಿಂಗಜ್ಞಾನವನ್ನುಂಟು ಮಾಡುವನು. ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳ ಮಲತ್ರಯಗಳನ್ನು ನಾಶಮಾಡುವ ಮಹತ್ಸಾಧನ ಶಿವ-ದೀಕ್ಷಾ ಸಮಯದಿ ಇಷ್ಟಪ್ರಾಣ ಭಾವಲಿಂಗತ್ರಯಗಳ ಅರಿವು ಮಾಡಿ ಕೊಟ್ಟು ಲಿಂಗ ಕಟ್ಟುತ್ತಾನೆ ಗುರು.

ಲಿಂಗವೆಂದರೇನು ಗುರುವೆ ?
ಲಿಂಗ ಅಂದರೆ—

ಲಿಂಗಂ ಶಿವಂ ಶಿವಂ ಲಿಂಗಂ

ಲಿಂಗವೆಂದರೆ ಶಿವನು. ಭವದ ಕುತ್ತದಲಿ ಬಿದ್ದು ಕತಕತನೆ ಕುದಿದು ಕುಂದುವ ಮಂದಮತಿಯರ ಬಂಧನವ ಬಿಡಿಸುವ ಭಗವಂತನು. ಅಂಗದ ಮೇಲೆ ಮಂಗಲಮುಕ್ತವಾಗಿ ಭಂಗತರಮಾದ ಭವತಾಪಗಳನ್ನು ಬಯಲು ಮಾಡುವ ಲಿಂಗ ಸಾಕ್ಷಾತ್ ಪರಬ್ರಹ್ಮ ಪರಶಿವಲಿಂಗನೇ ಸಂಗ. ಸಂಗನೇ ಲಿಂಗ.

ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ. ಎಂದೆನಿಸುವಲಿಂಗವು, ಅತ್ಯತಿಷ್ಠದ್ದಶಾಂಗುಲಂ ಎಂದೆನಿಸುವ ಲಿಂಗವು, ಅಣುರೋಣೀ

ಯಾನ್ ಮಹತೋ ಮಹೀಯಾನ್ ಎಂದೆನಿಸುವ ಲಿಂಗವು. ಅಯಂ ಮೇ. ಹಸ್ತೋ ಭಗವಾನ್ ಎಂದೆನಿಸುವ ಲಿಂಗವು; ಅಯಂ ಮೇ ಬಗವತ್ತರಃ ಎಂದೆನಿಸುವ ಲಿಂಗವು,ಶ್ರೀಗುರುಲಿಂಗ ಜಂಗಮ ರೂಪಾಗಿ ಇಷ್ಟ ಪ್ರಾಣಸ್ತಥಾ ಭಾವಂ ತ್ರಿಧಾಮೇಕಂ ವರಾನನೇ, ಎಂಬುದಾಗಿ ತ್ರಿವಿಧವು ಏಕೀಭವಿಸಿ ಲಿಂಗ ರೂಪಾಗಿ ಎನ್ನ ಕರಸ್ಥಲಕ್ಕೆ ಬಂದು ಕರತಳಾಮಳಕವಾಗಿ ತೋರುತಾಯಿದೆ.

ಆಹಾ ಎನ್ನ ಪುಣ್ಯವೆ! ಆಹಾ ಎನ್ನ ಭಾಗ್ಯವೆ! ಆಹಾ ಎನ್ನ ಸತ್ಯವೇ! ಆಹಾ ಎನ್ನ ನಿತ್ಯವೆ! ಶಿವಶಿವ ಮಹಾದೇವ

ಮಹಾದೇವ ನೀನೇ ಬಲ್ಲೆ ಪುರುಲಿಂಗಪೆದ್ದಿ ವಿಶ್ವೇಸ್ವರ, ಅವನೇ ಲಿಂಗ ನಾಗಿ ಬಂದಪರಿಕಂಡು ಈರೀತಿ ಶರಣರು ಹಾಡಿ ಹಾಡಿ ಕುಣಿದಿದ್ದಾರೆ; ಮಣಿ ದಿದ್ದಾರೆ.

ಮಾಡುವಾತ ಗುರುವಯ್ಯ
ಮಾಡಿಸಿಕೊಂಬಾತ ಭಕ್ತನಯ್ಯ
ಮಾಡುವ ಮಾಡಿಸಿಕೊಂಬುವ ಈ
ಎರಡರ ಚೈತನ್ಯವೇ ಲಿಂಗವಯ್ಯ
ಸಂಗನ ಬಸವಂಣನು ಸ್ಥೂಲವನೀಕರಿಸಿ
ಸೂಕ್ಷ್ಮವ ಕರಸ್ಥಲದಲ್ಲಿ ಆಯ ಕರಿಸಿ
ತೋರಿದನಾ ಬಸವಂಣನನಿಲವನ್ನು ನೆನಿಸಿ
ಬದುಕಿದೆನು ಕಾಣಾ ಕಲಿದೇವರ ದೇವ ॥

ಎಂದು ಲಿಂಗದ ಮಹಿಮೆಯನ್ನು ಹೊಗಳಿಪ್ಪಾನೆ ಮಹಾಮಹಿಮ ಮಡಿವಾಳ ಮಾಚಿ ತಂದೆಗಳು.

ಲಿಂಗಮಧ್ಯೇ ಜಗತ್ಸರ್ವಂ
ತ್ರೈಲೋಕ್ಯಂ ಸಚರಾಚರಂ ।
ಲಿಂಗ ಬಾಹ್ಯೇ ಪರಂನಾಸ್ತಿ
ತಸ್ಮಾಲಿಂಗಂ ಪ್ರಪೂಜಯೇತ್ ॥

ಲಿಂಗದಲಿ ಅನಂತಕೋಟಿ ಬ್ರಹ್ಮಾಂಡಗಳು ಅಡಗಿವೆ. ಲಿಂಗರೂಪಿ ಯಾದ ಶಿವನಲ್ಲಿ ಶಿವರೂಪಿಯಾದ ಲಿಂಗದಲ್ಲಿ ಜಗತ್ತೆ ಅಡಕವಾಗಿದೆ. ಲಿಂಗ

ವನ್ನು ಗುರುವಿನಿಂದ ಪಡೆದುಕೊಂಡು ಸದಾಚಾರಿಯಾಗಿ ಬಾಳಿದರೆ ಜೀವನ್ಮುಕ್ತಿ ಕಟ್ಟಿಟ್ಟಬುತ್ತಿ. ಜಗತ್ತನ್ನೇ ನೋಡುವ ಕನ್ನಡಿ ಈ ಲಿಂಗ. ಮುಕ್ತಿಗೆ ಸಾಧನ ಈ ಲಿಂಗ. ಲಿಂಗಧಾರಣವಿಲ್ಲದಲೇ ಯಾವನೂ ಮುಕ್ತನಾಗುವದಿಲ್ಲ ದೇವನಾಗುವದಿಲ್ಲ.

ಇಂದ್ರನೀಲಮಯಂ ಲಿಂಗಂ ವಿಷ್ಣುಃಪೂಜಯತೆ ಸದಾ ।
ವಿಷ್ಣುತ್ವಂ ಪ್ರಾಪ್ತವಾಂಸ್ತೇನ ಸಾದ್ಭುತೈಕಂ ಸನಾತನಂ ॥
ಬ್ರಹ್ಮಾಪೂಜಯತೇ ನಿತ್ಯಂ ಲಿಂಗಂ ಶೈಲಮಯಂ ಶುಭಂ !
ತಸ್ಯ ಸಂಪೂಜನಾತ್ತೇಸಪ್ರಾಪ್ತಂ ಸೂರ್ಯತ್ವ ಮುತ್ತಮಂ ॥
ತಾಮ್ರಂ ಲಿಂಗಂ ಸದಾಕಾಲಂ ಭಕ್ತ್ಯಾ ದೇವೋ ದಿವಾಕರಃ ।
ತ್ರಿಕಾಲಂ ಯಜತೇ ತೇನಪ್ರಾಪ್ತಂ ಸೂರ್ಯತ್ವಮುತ್ತಮಂ ॥
ಮುಕ್ತಾ ಫಲಮಯಂ ಲಿಂಗಂ ಸೋಮಃ ಪೂಜಯತೇಸದಾ ।
ಸೋಮೇನ ಪ್ರಾಪ್ಯತೇ ತೇನ ಸೋಮತ್ವಂ ಸತತೋಜ್ವಲಂ ॥
ಲಿಂಗಂ ಹೇಮಮಯಂ ಕಾಂತಂ ಧನದೋರ್ಜಯತೆ ಸದಾ ।
ತೇನಾ ಸೌಧನದೋ ದೇವೋ ಧನದತ್ವಮವಾಪ್ತವಾನ್ ॥
ಏವಂ ದೇವಾಸ್ಸಗಂಧರ್ವಾಸ್ಸಯಕ್ಷೋರಗ ರಾಕ್ಷಸಾಃ ।
ಪೂಜಯಂತಿ ಸದಾಕಾಲಂ ಈಶಾನಂ ಸುರನಾಯಕಂ ॥
ಸರ್ವಂ ಲಿಂಗಮಯಂ ಲೋಕಂ ಸರ್ವಂ ಲಿಂಗೇಪ್ರತಿಷ್ಠಿತಂ ॥
ತಸ್ಮಾತ್ಸಂ ಪೂಜಯೇಲ್ಲಿಂಗಂ ಯಚ್ಛೇತ್ಸಿದ್ಧಿ ಮಾತ್ಮನಃ

॥ಲಿಂಗ ಪುರಾಣ॥

ಇಂದ್ರ ನೀಲಮಯವಾದ ಲಿಂಗವನ್ನು ವಿಷ್ಣುವು ಪೂಜಿಸಿ ವಿಷ್ಣುತ್ವಂ ಹೊಂದಿದನು. ಶಿಲಾಮಯವಾದ ಲಿಂಗವನ್ನು ಪೂಜಿಸಿ ಬ್ರಹ್ಮನು ಪದವಿ ಪಡೆದನು. ತಾಮ್ರಮಯವಾದ ಲಿಂಗವನ್ನು ಭಕ್ತಿಯಿಂದ ಪೂಜಿಸಿ ಬ್ರಹ್ಮ ಸೂರ್ಯತ್ವವನ್ನು ಪಡೆದನು ಸೂರ್ಯನು.ಮುತ್ತು ವಿಕಾರವಾದ ಲಿಂಗವನ್ನೂ ಚಂದ್ರನು ಪೂಜಿಸಿ ಸೋಮತ್ವವನ್ನು ಪಡೆದನು. ಸುವರ್ಣಮಯವಾದ ಲಿಂಗವನ್ನು ಕುಬೇರನು ಪೂಜಿಸಿ ಸಂಪತ್ ಕುಮಾರನಾದನು. ಹೀಗೆ ಸಕಲ ಗಂಧರ್ವರು ಯಕ್ಷ, ರಾಕ್ಷಸ, ಕಿನ್ನರ ಕಿಂಪುರಷ; ಪ್ರತಿಯೊಬ್ಬರು ಸುರನಾಯಕನಾದ ಲಿಂಗಸ್ವರೂಪಿಯಾದ ಶಿವನನ್ನು ಪೂಜಿಸುತ್ತಾರೆ. ಈ ಲೋಕವೆಲ್ಲ ಸರ್ವವೂ ಸಮ್ಮಿಲಿತವಾಗಿದೆ. ಕಾರಣ ಸಕಲ ಶಿದ್ಧಿಗಳನ್ನು ಶಿದ್ದಿಸಿಕೊಳ್ಳ

ಬೇಕಾದರೆ ಲಿಂಗವನ್ನು ಪೂಜಿಸಬೇಕು- ಇದೇ ಮಾತನ್ನು ಸ್ಕಂದ ಪುರಾಣದ ಕೇದಾರ ಖಂಡದ ೩ ನೇ ಅಧ್ಯಾಯದಲ್ಲಿ

ಇಂದ್ರ ನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ ।
ಬ್ರಹ್ಮಾಮಣಿಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ॥
ಇಂದ್ರೋರತ್ನಮಯಂ ಲಿಂಗಂ ಚಂದ್ರೋ ಮುಕ್ತಾಮಯಂತಥಾ ।
ಭಾನುಸ್ತಾಮ್ರಮಯಂ ಲಿಂಗ ಪೂಜಯತ್ಯ ನಿಶಂ ಶುಭಂ ॥
ರೌಪ್ಯ ಲಿಂಗಂ ಕುಭೇರಶ್ಚ ಪಾಶೀ ಚಾಲಕ್ಷಮೇವಚ ।
ಯಮೋ ನೀಲಮಯಂ ಲಿಂಗಂ ರಾಕಸಂ ನೈಋತೋತಥಾ ॥
ಕಾಶ್ಮೀರೋ ಲಿಂಗಂಪವನಂ ಅರ್ಚಯಂತ್ಯ ನಿಶಂ ವಿಭೋಃ ।
ಏವಂತೇ ಲಿಂಗಿತಾಃ ಸರ್ವೇಲೋಕಪಾಲಾಃ ಸವಾಸವಾಃ ॥
ತಥಾ ಸರ್ವೇಪಿ ಗಂಧರ್ವಾಃಪಾ ತಾಲೇ ಕಿನ್ನರೈಸ್ಸಹ ।

ವಿಷ್ಣು ಇಂದ್ರ ನೀಲಮಣಿಮಯ ಲಿಂಗವನ್ನು, ಬ್ರಹ್ಮನು ಮಣಿಮಯ ಲಿಂಗವನ್ನು, ಇಂದ್ರನು ರತ್ನಮಯ ಲಿಂಗವನ್ನು; ಕುಬೇರನು ಬೆಳ್ಳಿಯ ಲಿಂಗವನ್ನು, ಯಮನು ನೀಲಮಯ ಲಿಂಗವನ್ನು ಸದಾ ಪೂಜಿಸುವಂತೆ ಎಲ್ಲ ದೇವಾದಿದೇವತೆಗಳು ಬೇರೆ ಬೇರೆ ಲಿಂಗವನ್ನೂ ಪೂಜಿಸಿ ತಮ್ಮ ತಮ್ಮ ಸ್ಥಾನಗಳನ್ನೂ ಭದ್ರವಾಗಿರಿಸಿಕೊಂಡಿದ್ದಾರೆ.

ನಿಧನ ಪತಯೇನಮಃ ನಿಧನ ಪತಾಂತಿಕಾಯನಮ:
ಊರ್ಧ್ವಾಯನಮಃ ಊರ್ಧ್ವಲಿಂಗಾಯನಮ:
ಹಿರಣ್ಯಾಯನಮ: ಹಿರಣ್ಯಲಿಂಗಾಯನಮ:
ಸುವರ್ಣಾಯನಮ: ಸುವರ್ಣ ಲಿಂಗಾಯನಮಃ
ದಿವ್ಯಾಯನಮಃ ದಿವ್ಯಲಿಂಗಾಯನಮಃ
ಭವಾಯನಮಃ ಭವಲಿಂಗಾಯನಮಃ
ಶರ್ವಾಯನಮಃ ಶರ್ವಲಿಂಗಾಯನಮಃ
ಶಿವಾಯನಮಃ ಶಿವಲಿಂಗಾಯನಮಃ
ಆತ್ಮನೇನಮಃ ಆತ್ಮಲಿಂಗಾಯನಮಃ
ಪರಮಾಯನಮಃ ಪರಮಲಿಂಗಾಯನಮಃ
ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂ
ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ

ಈ ರೀತಿ ಲಿಂಗದ ಮಹತ್ವವನ್ನು ಯಜುರ್ವೇದ ತೈತ್ತರೀಯ ಪ್ರಕರಣ ೧೦ ರಲ್ಲಿ ೧೬ನೇ ಅಧ್ಯಾಯದಲ್ಲಿ ಈ ರೀತಿ ಹೊಗಳಲ್ಪಟ್ಟಿದೆ.

ಜ್ಯೋತಿಯು ಮುಟ್ಟಿದ ಬತ್ತಿ ಎಲ್ಲ
ಜ್ಯೋತಿಯಪ್ಪವಯ್ಯ ಸಾಗರವ
ಮುಟ್ಟಿದ ನದಿಗಳೆಲ್ಲ ಸಾಗರವಪ್ಪಯ್ಯ ಪ್ರಸಾದವ
ಮುಟ್ಟಿದ ಪ್ರದಾರ್ಥವೆಲ್ಲ ಪ್ರಸಾದವಪ್ಪವಯ್ಯ ಲಿಂಗವ
ಮುಟ್ಟಿದಂಗವೆಲ್ಲ ನಿಮಂತಪ್ಪವಯ್ಯ ॥

ಎಂದು ಸಾರಿದ ಸಕಲೇಶ ಮಾದರಸರ ಅನುಭವವಂತೆ ಗುರುವಿನಿಂದ ದೀಕ್ಷಾಯುತನಾಗಿ ಲಿಂಗಧರಿಸಿ ಯಜಿಸಿದರೆ ಲಿಂಗವೇ ತಾನಾಗಿ ಭವಭಂಗ ವಿರಹಿತನಾಗಿ ಲಿಂಗಗುಣಗಳಿಂದ ಹಿತನಾಗಿ ಮಹಾಲಿಂಗವೇ ತಾನಾಗುವನು.

ಕಾರಣ ನೀನು ಲಿಂಗಯುತನಾಗಿ, ಶಿವಪೂಜಾಸಕ್ತನಾಗಿ, ಭವಬಂಧನ ದಲ್ಲಿದ್ದು ಜಯಿಸಬೇಕು ಪುಟ್ಟಾರ್ಯ. ಲಿಂಗದಲ್ಲಿ ತನು ಮನವಿರಿಸಿದರೆ ಸಾಧ್ಯ ವಾಗದೇ ಇದ್ದದ್ದು ಸಾಧಿಸುತ್ತದೆ. ಇಚ್ಛಿಸಿದ ಇಷ್ಟಾರ್ಥಗಳು ಸಿದ್ಧಿಸುತ್ತವೆ. ಕಾರಣ ನೀನು ದೀಕ್ಷಾ ಮಾಡಿಸಿಕೊಳ್ಳಬೇಕು.ಎಂದು ಸುಧೀರ್ಘ ಉಪನ್ಯಾಸ ಮಾಡಿವರು.ಪಂಚಾಕ್ಷರ ಗವಾಯಿಗಳವರು ಉಪನ್ಯಾಸವನ್ನುಕೇಳಿ. ಗುರುವೆ! ತಮ್ಮಗಳ ಅಪ್ಪಣೆಯಂತೆ ನಾನು ದೀಕ್ಷಾಯುತನಾಗಿ .ಇಷ್ಟಲಿಂಗವನ್ನು ನಿಷ್ಠೆ ಯಿಂದ ಪೂಜಿಸಿ ಇಷ್ಟಾರ್ಥವನ್ನು ಶೃಷ್ಟಿಸಿಕೊಳ್ಳುತ್ತೇನೆಂದು ಪುಟ್ಟಾರ್ಯ ಗುರು ಗುರುವಿಗೆರದನು.

ಸಂತೋಷಯುಕ್ತರಾದ ಪಂಚಾಕ್ಷರ ಗುರುವರ್ಯರು ತಮ್ಮ ದೀಕ್ಷಾ ಗುರು ಗಳಾದ ಕಂಚಕಲ್ ಬಿದರೆ ಪಟ್ಟಾಧ್ಯಕ್ಷರನ್ನು ಕರೆಸಿ ದೀಕ್ಷಾ ವಿಧಾನಗಳನ್ನು ಸಿದ್ಧಪಡಿಸಿ, ಪುಟ್ಟಾರ್ಯನಿಗೆ ದೀಕ್ಷಾಕಾರ್ಯವೆಸಗಲಣಿಮಾಡಿ ಕೊಟ್ಟರು.

ಬಾಲಕ ಪುಟ್ಟಾರ್ಯನಿಗೆ ಪಟ್ಟದ ಮಹಾಸ್ವಾಮಿಗಳು ವಿಧಿ ಪೂರ್ವಕವಾಗಿ ದೀಕ್ಷೆ ಮಾಡಿದರು.

ಪುಟ್ಟಾರ್ಯ ಇದು ಶಿವಸ್ವರೂಪಿಯಾದ ಲಿಂಗ. ಇದು ಯಾವಾಗಲೂ ನಿನ್ನಂಗದ ಮೇಲೆ ಮಂಗಲಯುಕ್ತವಾಗಬೇಕು; ಇದನ್ನು ಅಗಲಿಸದೆ ಭಕ್ತಿ

ಭಾವ ಬೆರಿಸಿ ಪೂಜಿಸಬೇಕು. ಸ್ನಾನಮಾಡಿ ಲಿಂಗವ ಪೂಜಿಸಿ ಪ್ರಸಾದ ಲಿಂಗಕ್ಕರ್ಪಿಸಿ ಸುಪ್ರಸಾದವನ್ನಾಗಿ ಸ್ವೀಕರಿಸಬೇಕು. "ಓಂ ನಮಃ ಶಿವಾಯ" ಈ ಮಂತ್ರ ಮಹಾಮಂತ್ರ ನಿನ್ನನ್ನು ಭವದಾಟಿ ಶಿವನಲ್ಲಿ ನಾಟಸುವ ಮೇಟ ಮಂತ್ರ. ಇದು ಸದಾ ನನ್ನ ಹೃದಯ ಮಂದಿರದ ಮೂರ್ತಿ ಮಂತಾಗಿರಲಿ. ಇದನ್ನು ಸ್ಮರಿಸಿದರೆ ಜಪ ತಪಗಳ ಸ್ಮರಣೆ, ಇದನ್ನು ಮರೆತರೆ ಕಟ್ಟಿಟ್ಟದ್ದು ಧಾರುಣ. ಕಾರಣ ಮರಣಾಂತ್ಯದ ವರೆಗೂ ಮರೆಯದೆ ಜಪಿಸಿ ಸ್ವಪಸಿಯಾಗು

> ದತ್ತಂ ಲಿಂಗಮಿದಂ ವತ್ಸ ನ ಕದಾ ಚಿದ್ವಿಯೋಜಯ ।
> ಪ್ರಾಣವದ್ರಕ್ಷಣೀಯಂ ಹಿ ಪ್ರಾಣಲಿಂಗಮಿದಂ ತವ ॥
> ಉತ್ತಮಾಂಗೇಗಲೇಕಕ್ಷೇ ತಥಾವಕ್ಷಸ್ಥಲೇಪಿವಾ ।
> ಕರಸ್ಥಲೇಪಿ ವಾನಿತ್ಯಂ ಸಾವಧಾನೇನ ಧಾರಯ ॥
> ಪ್ರಮಾದಾತ್ಪತಿತೇ ಲಿಂಗೇ ಭಿನ್ನ ಚೋರಾದಿಭಿರ್ಹೃತೇ ।
> ಪೀಠಾಂದುತ್ಕೃ ಮಿತೇವಾಪಿ ಸಹಪ್ರಾಣಾ ನ್ಸರಿತ್ಯಜ॥

"ಸೂಕ್ಷ್ಮ ತಂತ್ರ"

ಈ ನಿನ್ನ ಪ್ರಾಣಲಿಂಗವನ್ನು ನಿನ್ನ ಪ್ರಾಣದಂತೆ ರಕ್ಷಿಸು. ಯಾವಾಗಲೂ ಅಗಲಿಸಬೇಡ. ಅಜಾಗರೂಕತೆಯಿಂದ ಲಿಂಗವು ಭಿನ್ನವಾದರೆ ಪ್ರಾಣವನ್ನು ಬಿಡಬೇಕು. ಇದಕ್ಕೆ ತಪ್ಪಿ ಆತ್ಮದ್ರೋಹವೆಸಗುವದೆಂದರೆ ಕುಂಭೀಪಾತ ನರಕ ಬಯಸಿದಂತೆ. ಎಂದು ಪಟ್ಟದ ದೇವರು ಉಪದೇಶಿಸಿದರು. ಪುಟ್ಟಾರ್ಯನಿಗೆ ಎಲ್ಲಿಲ್ಲದ ಆನಂದವಾಗಿದೆ. ಮಾಂಸಪಿಂಡ, ಮಂತ್ರಪಿಂಡವಾಗಿ ಪರಿಣಮಿಸಿದ ಕಾರಣ.

> "ವೇಧಾದೀಕ್ಷೆ ಮಂತ್ರದೀಕ್ಷೆ ಕ್ರಿಯಾದೀಕ್ಷೆಯೆಂಬ ತನುತ್ರಯಂಗಳ ಪೂರ್ವಾಶ್ರಯವಕಳೆದು ಲಿಂಗತ್ರಯಂಗಳ ಸಂಬಂಧಿಸಿದನು ಅದೆಂತೆಂದೊಡೆ ವೇಧಾ ದೀಕ್ಷೆಯೆಂದು ಶ್ರೀಗುರು ತನ್ನ ಶಿಷ್ಯನ ಮಸ್ತಕದೇ ಸಂಯೋಗ ಮಾಡಿಸುದು ಮಂತ್ರದೀಕ್ಷೆಯೆಂದು ಶ್ರೀಗುರು ದೇವನು ಪ್ರಣವ ಪಂಚಾಕ್ಷರಿಯ ಮಂತ್ರವ ಕರ್ಣದಲ್ಲಿ ಉಪದೇಶಿಸುದುದು ಕ್ರಿಯಾದೀಕ್ಷೆಯೆಂದು, ಆ ಮಂತ್ರ ಸ್ವರೂಪವೇ ಇಷ್ಟಲಿಂಗ ಸ್ವರೂಪವ ಮಾಡಿ ಕರಸ್ಥಲದಲ್ಲಿ

ಸಂಬಂಧಿಸುವದೇ ವೇಧಾದೀಕ್ಷೆಯಿಂದ ಕಾರಣ ತನುವಿನ ಪೂರ್ವಾ
ಶ್ರಯವೇ ಅಳಿದು ಪ್ರಾಣಲಿಂಗ ಸಂಬಂಧವಾಯಿತ್ತು. ಕ್ರಿಯಾ
ದೀಕ್ಷೆಯಿಂದೇ ಸ್ಥೂಲ ತನುವಿನ ಪೂರ್ವಾಶ್ರಯದಳಿದು ಇಷ್ಟ-
ಲಿಂಗ ಸಂಬಂಧವಾಯಿತ್ತು, ಹೀಗೆ ಅಂಗತ್ರಯಗಳಲ್ಲಿ ಲಿಂಗ
ತ್ರಯಗಳ ಧರಿಸಿದೆನಯ್ಯ ಮಹಾಲಿಂಗಗುರು ಶಿದ್ಧೇಶ್ವರ ಪ್ರಭುವೆ

ಎಂಬ ಪಚಸವನ್ನು ತನ್ನಾತ್ಮದಲ್ಲಿ ಪಚನಮಾಡಿಕೊಂಡು ಪರಮ ದೀಕ್ಷಾದಕ್ಷಾಗಿ ಕಂಗೊಳಿಸಿದನು.

ದೀಕ್ಷಾಗುರುವಿನ ಉಪದೇಶವನ್ನು ಮರೆಯದೇ ನಡೆಸಲಿಕ್ಕನುವಾದನೀ ಪುಟ್ಟಾರ್ಯ ದಿಕ್ಷಾರ್ಯ. ದಿನಕ್ಕೆರಡುಬಾರಿ ಗುರುಪಂಚಾಕ್ಷರರ ಜೊತೆಗೆ ಪಕ್ಕಾ ಮಡಿಯಾಗಿ ವಿಧಿಪೂರ್ವಕ ಶಿವಾರ್ಚನ ತೀರಿಸಿಕೊಂಡು ಪ್ರಸಾದವನ್ನು ಲಿಂಗಕ್ಕರ್ಪಿಸಿ ಶಿವಪ್ರಸಾದವನ್ನಾಗಿಸಿ ಸೇವಿಸುತ್ತಿದ್ದನು.

ಶಿವಾನುರಾಗಿಯಾಗಿ ಸಂಗೀತಾನುರಾಗಿ ಪುಟ್ಟಾರ್ಯ ಒಪ್ಪಿದ ಅಭ್ಯಾಸ ನಿರತನಾಗಿ ಭಾವಪರವಶನಾಗಿ ಟಾಯಮ್ಮಿನ ಅನಂತಗಡಿ ದಾಟದ ದಾಟು ತ್ತಿದ್ದ. ಗಾಯನ ಮುಂತಾದ ೪–೫ ವಾದ್ಯಗಳನ್ನು ಕಲಿಯುತ್ತಿದ್ದ ಪುಟ್ಟಾರ್ಯ ಈ ಎಲ್ಲದರಲ್ಲಿ ಜಯ ಪಡೆಯುತ್ತಾನೆ ಎನ್ನುವ ಭರವಸೆಯನ್ನು ಗುರುವರ್ಯರು ಕಂಡುಕೊಂಡು ದಿನಂಪ್ರತಿ ತಪ್ಪದೆ ಪಾಠ ಹೇಳಿಕೊಡುತ್ತಿದ್ದರು. ಹೀಗಾಗಿ ಪ್ರಗತಿಯ ಪಥವು ಹುಡುಕುತ್ತ ಬಂದಿತು; ನಿಂದಿತು. ಗುರುವಾಗಿ ತಂದೆ ಯಾಗಿ ತಾಯಿಯಾಗಿ ಬಂಧುವಾಗಿ ಗುರುವರ್ಯರು ಪುಟ್ಟಾರ್ಯನನ್ನು ಸಾಕಿ ಸಲಹಿ ಶಿಕ್ಷಣ ನೀಡುತ್ತಿದ್ದರು. ಇದನ್ನರಿತ ಪುಟ್ಟಾರ್ಯ ಒಂದುದಿನ.

ಪೂರ್ವ ಜನುಮದ ಪುಣ್ಯದ ಬಲದಿಂ।
ಗುರುವಾಗಿ ಪಂಚಾಕ್ಷರ ಶಿವಯೋಗಿ॥
ಕುರುಡನಾದ ನನಗಾಶ್ರಯವಿತ್ತು ಮುದದಿಂ।
ಸ್ವರಪದಂಬುಧಿಯಲ್ಲಿ ಈಸಿಸಿದ ಪರಮ ತ್ಯಾಗಿ॥
ಪರದೇಶಿಯಾದ ನನಗೆ ತಾಯ್ ತಂದೆಯಾಗಿ॥
ಸಿರುತಡಿಂ ಸಲಹುವುತಿಪ್ಪರು ಪಂಚಾಕ್ಷರಿ॥
[illegible] ।

ಮಂಗಳತ್ವದಲಿ ಧಾರೆಯಾದ ಧರೆಯ ಭೋಗಿ ||
ಯಂತ ಪಾವನಗೊಳಿಸಿದ ಈ ಪರಮವಿರಾಗಿ |
ಸುರನಾಗಿ ಭುವಿಯ ಬೆಳಗಲು ಶಾರದೆಯಣುಗಾಗಿ ||
ಗುರು ಕುಮಾರನ ಕುವರನಾಗಿ ತೊಳಗಿ ಬೆಳಗಿ |
ಮೆರೆಯುತಿಹರು ಸದ್‌ಗುರು ಪಂಚಾಕ್ಷರಯೋಗಿ ||

ಈ ರೀತಿ ಭಕ್ತಿಯುತನಾಗಿ ತನ್ನ ಬುದ್ಧಿಗನುಗುಣವಾಗಿ ಸಾಹಿತ್ಯ ರಚಿಸಿ ಸಂಗೀತದಲ್ಲಿ ತಲ್ಲೀನನಾಗಿ ಹಾಡುತ್ತಿದ್ದ ಪುಟ್ಟಾರ್ಯ. ಈ ಪದ್ಯದಲ್ಲಿ ಉಚ್ಚ ಮಟ್ಟದ ಛಂದಸ್ಸಾಲಂಕಾರಗಳಿಲ್ಲದಿದ್ದರೂ ಭಕ್ತಿ ಶೃಂಗದಲಂಕಾರಕ್ಕೆ ಕೊರತೆ ಯಿಲ್ಲ. ಶಿಕ್ಷಣ ಪಡೆಯದೆ ಈರೀತಿ ಸಾಹಿತ್ಯವನ್ನು ರಚಿಸುವ ಪುಟ್ಟಾರ್ಯನ ಬುದ್ಧಿ ಶಕ್ತಿಯನ್ನು ಕಂಡು ಆದಾವ ಕವಿ ಅಚ್ಚರಿ ಪಡಲಾರ? ಅಕ್ಷಿಯಿಲ್ಲ ಶಿಕ್ಷಣ ವಿಲ್ಲ ಈರೀತಿ ಸಾಹಿತ್ಯದ ಪದ್ಯಗಳನ್ನು ಗುರುವಿನಮೇಲೆ ಶಿವನ ಮೇಲೆ ರಚಿಸಿ, ಅದಕ್ಕೆ ಕಳೆಕಟ್ಟುವಂತೆ ಸಂಗೀತ ಜೋಡಿಸಿ ಹಾಡಿ ಕುಣಿದಾಡುವ ಪುಟ್ಟಾರನಲ್ಲಿ ದೈವ, ಹಸ್ತದ ಮನೆ ಮಾಡಿಕೊಂಡಿದೆ ಎಂದು ಕಂಡುಕೊಂಡರು ಗುರುವರ್ಯ ಪಂಚಾಕ್ಷರರು, ಹುಟ್ಟುತ್ತಲೇ ತಾಯ್ತಿಸಿದ್ಧಾಂಬೆ ವಂಚನೆಯಿಲ್ಲದೆ ಎರಡು ಕುಚ ಗಳ ಅಮೃತ ಶರಧಿಯನ್ನು ಪಾನಮಾಡಿಸಿದ್ದಾಳೆ. ಅಂತೇ ಶಾರದೆಯ ಸಂಗೀ ಸಾಹಿತ್ಯ ಕುಚಗಳನ್ನು ಪಾನಮಾಡಲು ಅಣಿಯಾಗಲಿದ್ದಾನೆ, ಈನಮ್ಮ ಪುಟ್ಟಾರ್ಯ. ಎಂದು ನಿಶ್ಚಮಿಸಿಕೊಂಡು. ಅಮರಕೋಶ, ಶಭರಶಂಕರ ವಿಳಾಸ; ಕುಮಾರ ಸಂಭವ, ರಘುವಂಶ ಮುಂತಾದ ಕನ್ನಡ ಸಂಸ್ಕೃತ ಗ್ರಂಥಗಳನ್ನು ಪಂಡಿತರಿಂದ ಪುಟ್ಟಾರ್ಯನಿಗೆ ಹೇಳಿಕೊಡಲಿಕ್ಕೆಂದು ನೇಮಿಸಿದರು ಪಂಚಾಕ್ಷರಿ ಯವರು. ಗುರುವರ್ಯರು ಇಷ್ಟು ಅನುಕೂಲ ಮಾಡಿಕೊಟ್ಟರೆ ಬಿಟ್ಟಾನೆಯೇ ಈ ಪುಟ್ಟಾರ್ಯ ದಿನವಿಡೀ ಪ್ರಯತ್ನಪಟ್ಟು ಎಲ್ಲ ಕಾವ್ಯಗಳನ್ನು ಗ್ರಹಿಸಿ ಅಭ್ಯ ಸಿಸಿಮನನ ಮಾಡಿಕೊಳ್ಳಹತ್ತಿದನು.

ಸೂಜಿಗಲ್ಲಿಸತ್ತ ಸೂಜಿಗಳು ಆಶ್ರಯಿಸಿ ಬರುವಂತೆ ಈ ಪುಟ್ಟಾರ್ಯ- ನತ್ತ ಕಾವ್ಯ ಶರಧಿಯೇ ಹರಿದು ಬಂದಿತು, ಚುಂಬಿಸಿತು, ಸತತಭ್ಯಾ ಸದ ಬಲದಿಂದ ೪-೫ ವರುಷಗಳಲ್ಲಿ ಸಂಗೀತ ಶಾರದೆಯ ಸಾಹಿತ್ಯ ಶಾರದೆಯ ಭದ್ರಬುನಾದಿಯಲ್ಲಿ ತನ್ನ ಬುದ್ಧಿ ಮುದ್ರಿಯನ್ನೊತ್ತಿ ಪಾಂಡಿತ್ಯದ ಚಿದ್ರೆಯಾಗಿ ಸಾಹಿತ್ಯ ಸಂಗೀತ ಭಾಂಡಾರದ ಭದ್ರೆಯಾಗಿ ಪರಿಶೋಭಿಸದನೀ ಆರ್ಯ ಪುಟ್ಟಾರ್ಯ.

ಗಾನಯೋಗಿಯ ಕೀರ್ತನ ಈತನ ಸಂಗೀತದೊಂದಿಗೆ ನಡೆನರೆ ಕಾರ್ಯಕ್ರಮ ಸಾಗಿದರೆ ಜಗದ ಜನ ಬೊಟ್ಟುಕಚ್ಚಬೇಕು; ಅಚ್ಚರಿಯಬೇಕು. ಅಷ್ಟೊಂದು ಅದ್ಭುತ ಅಗಮ್ಯವಾಗಿರುತ್ತಿತ್ತು ಸಂಗೀತದಿಂದೊಡಗೂಡಿದ ಪಂಚಾಕ್ಷರ ಗವಾಯಿಗಳವರ ಕೀರ್ತನ ಗಾಯನ ಕಾರ್ಯಕ್ರಮ.

ಗುರುವರ್ಯರು ಹೋದ ಹೋದಲ್ಲಿ ತಮ್ಮ ಪ್ರೋಗ್ರಾಮಿನೊಂದಿಗೆ ಪುಟ್ಟಾರ್ಯನನ್ನು ಕರೆದುಕೊಂಡು ಕಾರ್ಯಕ್ರಮ ಮಾಡಹತ್ತಿದರು.

ಒಮ್ಮೆ ಹುಬ್ಬಳ್ಳಿಯ ನಾಗರಿಕರು ಪ್ರಸಿದ್ಧ ಹಾರ್ಮೋನಿಯಂ ವಾದಕರಾದ ದಿ। ಗೋವಿಂದರಾವ್ ಟೆಂಬೆಯವರ ಕಾರ್ಯಕ್ರಮ ಏರ್ಪಡಿಸಿದ್ದರು. ಅವರ ಕಾರ್ಯಕ್ರಮ ಕೇಳಲು ಪಂಚಾಕ್ಷರಿಯವರು. ಪುಟ್ಟಾರ್ಯ ಇನ್ನಿತರ ಶಿಷ್ಯರೊಂದಿಗೆ ಹೋದರು. ಇವರನ್ನು ಹೃತ್‌ಪೂರ್ವಕವಾಗಿ ಸ್ವಾಗತಿಸಿದರು. ಗೋವಿಂದರಾವ್ ಟೆಂಬೆಯವರ ಕಾರ್ಯಕ್ರಮ ಬಲು ರಸವತ್ತಾಗಿ ಸಾಗಿತು. ಗೋವಿಂದರಾವ್ ಟೆಂಬೆಯವರ ಕೈಯಲ್ಲಿ ಹಾರ್ಮೋನಿಯಂ ಮಾತನಾಡುತ್ತಿದೆ ಎನ್ನುವಷ್ಟು ಕರತಲಾಮಲಕವಾಗಿತ್ತು. ಪಾಂಡಿತ್ಯ ಪೂರ್ಣವಾದ ವೈವಿಧ್ಯಪೂರ್ಣವಾದ ಟೆಂಬೆಯವರ ಹಾರ್ಮೋನಿಯಂ ವಾದನ ಕೇಳಿದ ಪುಟ್ಟಾರ್ಯನಿಗೆ ನಾನೂ ಇವರ ಮುಂದೆ ಹಾರ್ಮೋನಿಯಂ ಬಾರಿಸಿ ತೋರಿಸಬೇಕೆನ್ನುವ ಆಶೆಯಿಂದ ಕುಳಿತಿದ್ದ ಇವನ ಮನದಾಶೆಯನ್ನು ಜ್ಞಾನಿಗಳಾದ ಪಂಚಾಕ್ಷರ ಗುರುವರ್ಯರು ಅರಿತು. ಕಾರ್ಯಕ್ರಮದ ಸಂಚಾಲಕರನ್ನು ಗೋವಿಂದರಾವ್ ಟೆಂಬೆಯವರನ್ನು ವಿಚಾರಿಸಿ ಕಾರ್ಯಕ್ರಮದ ಮಧ್ಯದಲ್ಲಿ ಈ ಪುಟ್ಟಾರ್ಯನ ಕಾರ್ಯಕ್ರಮವನ್ನು ಇಡಿಸಿದರು. ಕಲಾವಂತ ಕಲಾವಂತನನ್ನು ಆದರಿಸಬೇಕು ಅಂದರೆ ಆಜೀವ ಕಲಾರ್ಜನೆಯೆನಿಸಿಕೊಳ್ಳುತ್ತಿದೆ. ಈ ಮಾತಿಗೆ ತಕ್ಕವರಿದ್ದರು ಕಲಾಜೀವಿ ಟೆಂಬೆಯವರು. ಅಂತೇ ಚಿಕ್ಕ ಪುಟ್ಟಾರ್ಯನ ಹಾರ್ಮೋನಿಯಂ ವಾದನಕ್ಕೆ ಅವಕಾಶ ಮಾಡಿಕೊಟ್ಟು ತಾವು ಮುಂದೆ ಕುಳಿತರು..

ಪುಟ್ಟಾರ್ಯ ಗುರುವರ್ಯರಿಗೆ ನಮಸ್ಕರಿಸಿ ವೇದಿಕೆಯ ಮೇಲೆ ಬಂದು ಹಾರ್ಮೋನಿಯಂದ ಮುಂದೆ ಕುಳಿತ. ಆಗ ಜನರಲ್ಲಿ ಪಿಸುಮಾತಿನ ಗದ್ದಲ ಜೋರಾಯಿತು. ಪಂಡಿತರಾದ ಗೋವಿಂದರ್ರಾವ್ ಟೆಂಬೆಯವರು ವೈಚಿತ್ರ

ಪೂರ್ಣವಾಗಿ ಹಾರ್ಮೋನಿಯಂ ನುಡಿಸಿದ್ದಾರೆ. ಇವರು ಬಾರಿಸಿದ ಮೇಲೆ ಮತ್ತ್ಯಾರೂ ಹಾರ್ಮೋನಿಯಂ ಬಾರಿಸಬಾರದು. ನೋಡಲಿಕ್ಕೆ ಕಂಣಿಲ್ಲ; ಬಡಕಲು ಶರೀರ. ಹಾರ್ಮೋನಿಯಂ ದಷ್ಟೇ ಎತ್ತರವಾದ ಈ ಹುಡುಗ ಏನು ಬಾರಿಸುತ್ತಾನೆ; ಎನ್ನುವದೇ ಜನರ ಪಿಸುಮಾತಿನ ತಾತ್ಪರ್ಯವಾಗಿತ್ತು.

ವೇದಿಕೆಯ ಮೇಲೆ ಒಂದು ವ್ಯಕ್ತಿ ಒಂದು ಲೌಡಸ್ಪೀಕರಿನಲ್ಲಿ ಬಾಯಿಟ್ಟು .... ಮಹಾಜನರಲ್ಲಿ ಒಂದು ವಿಜ್ಞಾಪನೆ. ಉಭಯಗಾಯನ ವಿಶಾರದರೂ ಕರ್ನಾಟಕದ ಗಂಧರ್ವಗಾಯಕರೂ ಆದ ಪರಮಪೂಜ್ಯ ಪಂಡಿತ ಪಂಚಾಕ್ಷರ ಗವಾಗಳವರ ಶಿಷ್ಯರಾದ ಚಿಕ್ಕ ವಯಸ್ಸಿನ ಈ ಅಂಧ ಬಾಲಕ ಈಗ ಹಾರ್ಮೋನಿಯಂ ನುಡಿಸುತ್ತಾನೆ. ಕಾರಣ ಶಾಂತಚಿತ್ತರಾಗಿ ಕಾರ್ಯಕ್ರಮಕ್ಕ ಸುಕೂಲ ಮಾಡಿಕೊಡಬೇಕು ಎಂದು ಪ್ರಾರ್ಥನೆ. ಎಂದು ಕಾರ್ಯದರ್ಶಿಗಳು ಸೂಚಿಸಲಾಗಿ ಸಭೆಯಲ್ಲಿ ಶಾಂತತೆ ಪಸರಿಸಿತು.ಕಾರ್ಯಕ್ರಮ ಸುರುಆಯಿತು.

ಪುಟ್ಟಾರ್ಯನು. ಹಾರ್ಮೋನಿಯಂದಲ್ಲಿ ರಾಗ ವಿಸ್ತಾರ ಮಾಡಿ ತಾಳ ಹಚ್ಚಿ ಸ್ವರಾಲಾಪ, ಖಟಗ, ಮೇಂಡ್ ಗಮಗ ಕಟ್ ತಾನಗಳಿಂದ ಕೈ ಚಳಕತನ ಪ್ರದರ್ಶಿಸ ಹತ್ತಿದ, ಭಲೆ.... ಭಲೆ.... ವ್ಹಾ. ವ್ಹಾ. ಎಂದು ಜನಸ್ತೋಮ ಉತ್ಸಾಹದಿಂದ ಕೇಳಹತ್ತಿದರು. ಮೂರ್ತಿ ಸಂಣದಾದರೂ ಇದರ ಕೀರ್ತಿ ಸಂಣದಿಲ್ಲಾ ಹುಡುಗನಾದರೂ ಚಿಂತಿಲ್ಲ ದೊಡ್ಡವರನ್ನೂ ದಡ್ಡರನ್ನಾಗಿ ಮಾಡುವ ಪಾಂಡಿತ್ಯ ತುಂಬಿದೆ ಇವನಲ್ಲಿ. ಈ ಹುಡುಗನ ಕಂಣು ಕುರುಡಾಗಿ ಕೈಯೇ ಕಂಣಾಗಿದೆ! ಎಂಥ ಹಾರ್ಮೋನಿಯಂ ವಾದನ! ಅಬ್ಬಾ! ಟೆಂಬೆಯರನ್ನು ಈ ಹುಡುಗ ಮರೆಸುತ್ತಾನೆ! ಭಲೆ! ಶಹಬ್ಯಾಸ್!.... ಎಂದು ಜನರು ಉದ್ಗಾರ ತೆಗೆದು ಚಪ್ಪಾಳೆ ತಟ್ಟಿ ತಮ್ಮ ಉತ್ಸಾಹ ವ್ಯಕ್ತಪಡಿಸುತ್ತಿದ್ದರು. ಜನರ ಈ ಪ್ರೋತ್ಸಾಹನ ಅರಿತುಕೊಂಡು ಮತ್ತಿಷ್ಟು ಹುರುಪಿನಿಂದ ಕುಣಿಕುಣಿದು ಹಾರ್ಮೋನಿಯಂ ಬಾರಿಸಹತ್ತಿದ ಪುಟ್ಟಾರನನ್ನು ಕಂಡರೆ– ಹಾವಾಡಿಗ ತನ್ನ ಪುಂಗಿನಾದದಿಂದ ಹಾವನ್ನು ಆಡಿಸಿ ತಾನು ಅದರೊಡನೆ ಆಡಿ ಕುಣಿದಾಡುವಂತೆ, ಈ ಪುಟ್ಟಾರ್ಯ ತನ್ನ ಹಾರ್ಮೋನಿಯಂ ವಾದನದಿಂದ ಪ್ರೇಕ್ಷಕರನ್ನು ಆಡಿಸಿ ತಾನು ಆಡಿ ಕುಣಿದಾಡುವ ದೃಶ್ಯ ಅಪೂರ್ವವಾಗಿತ್ತು—

ಎಡೆಬಿಡದೆ ೩೦ ನಿಮಿಷಗಳವರೆಗೆ ವೈಚಿತ್ರ ಭರಿತವಾಗಿ ಹಾರ್ಮೋನಿಯಂ ನುಡಿಸಿ ಪುಟ್ಟಾರ್ಯ ಮುಗಿಸಿದಾಗ ಪಟ ಪಟ ಪಟ.... ಕರ.... ತಾ.... ಡ....ನ ವ್ಹಾ ವ್ಹಾ ಕ್ಯಾ ಕಹನೆ.... ಜನರ ಹರುಷದಾಟ ಕೂಗಾಟ ಅರ್ಭಾಟ ವಾಯಿತು...............

ಟೇಂಬೆಯವರು ಹರುಷದಿಂದ ವೇದಿಕೆಯ ಮೇಲೆಬಂದು ಶಹಬ್ಬಾಸ್ ಬೇಟಾ ! ಕ್ಯಾಕರಾಮತ ಹೈತುಮ್ಹಾರ ಹಾಥಮೆ! ಎಂಮು ಹರುಷದಿಂದ ಪುಟ್ಟಾರ್ಯನ ಬೆನ್ನು ಚಪ್ಪರಿದಸಿರು ಟೇಂಬೆಯುರು.

ತುಮ್ಹಾರಾ ನಾಮ ಕ್ಯಾ ಬಾಬಾ ?

ಮೇರಾ ನಾಮ ಪುಟ್ಟ.

ಪುಟ್ಟ ? ಏ ಕೈಸೆಂ ನಾಮ ?

“ಪುಟ್ಟ” ನಾಮಕಾ ಅರ್ಥ ಛೋಟಾ.... ಹೋತಾ ಹೈ. ಓಹೋ.... ಛೋಟಾ.... ಹ ಹ ಹ ಹ ಹ.... ನಾಮ ಛೋಟಾ ಕಾಮ ಬಡಾ.... ಎಂದು ಗೇಲಿ ಮಾಡಿ ಇಡೀ ಸಭೇಯನ್ನೇ ನಗೆಗಡಲಿನಲ್ಲಿ ಕೆಡುಹಿದರು. ಟೇಂಬೆಯವರು.

ಆಪ್ ಬಡೇ ಕಲಾಕಾರ್ ಹೈ. ಆಪಕಾ ಮೂಹ್‌ಸೆ ಐಸಾ ಬಾತ ಮತ್ ಆನಾ. ಎಂದು ನುಡಿದ ಪುಟ್ಟಾರ್ಯನ ಕಿಂಕಿರ ವೃತ್ತಿಯ ಕಂಡು ಬೆರಗಾದರು ಟೇಂಬೆಯವರು. ಪಾಂಡಿತ್ಯದಿಂದ ತುಂಬಿದ ಪುಟ್ಟಾರ್ಯನ ಹೃದಯ ಗರ್ವದ ಗವಿಯಾಗದೆ ಸದ್‌ವಿನಯದ ಚವಿಯಾಗಿತ್ತು. ಕಿಂಕರತೆಯ ಭಾವದುಂಬಿತ್ತು; ಬಿಂಬಿಸಿತ್ತು.

ಅಪಾರ ವಿದ್ಯೆ, ವಿದ್ಯೆಗೆತಕ್ಕ ವಿನಯ, ವಿನಯಕ್ಕೆ ತಕ್ಕ ರೂಪ, ರೂಪಕ್ಕೆ ತಕ್ಕ ಪ್ರಗತಿಯತವಾದ ಪುಟ್ಟಾರ್ಯನ ಮಾತು. ಹುಬ್ಬಳ್ಳಿ ಜನರ ಮನೆ ಮಾತಾಯಿತು. ಹಾಗೇ ಹಬ್ಬುಹಬ್ಬುತ್ತ ಕರ್ನಾಟಕದ ತುಂಬಬ ಸರಿತು; ಪಸರಿಸಿತು.

ಗುರುವರ್ಯರ ಆನಂದಕ್ಕೆ ಆಳತೆಯಲ್ಲ.............. ಪುಟ್ಟಾರ್ಯ ಇಷ್ಟು, ಚಿಕ್ಕ ವಯಸ್ಸಿನಲ್ಲಿ ಈ ಅಪಾರ ವಿದ್ಯೆಯನ್ನು ಕಲಿಯ ಬೇಕಾದರೆ ಬಹಳ ಅಭ್ಯಾಸ ಮಾಡಿರಬೇಕಲ್ಲವೆ? ಎಂದು ಯಾರಾದರು ಕೇಳಿದರೆ. ನಾನೇನು

ಅಭ್ಯಾಸ ಮಾಡಿದ್ದೇನೆ? ನನ್ನ ಕಷ್ಟದಭ್ಯಾಸ ನಿಮಿತ್ಯ ಮಾತ್ರ.... ಪೂಜ್ಯಗುರು ಪಂಚಾಕ್ಷರಿಯಿಂದ ನನಗಿಷ್ಟು ವಿದ್ಯೆಹೊನಲಾಗಿ ಹರಿದು ಬಂದಿದೆ, ಆರಾಧ್ಯ ಗುರು ಕುಮಾರ ಶಿವಯೋಗಿಯ ಕೃಪಾಬಲದಿಂದ ನೆಲೆಯಾಗಿನಿಂತಿದೆ. ಎಂದು ಥಟ್ಟನೆ ಉತ್ತರಿಸುತ್ತಿದ್ದ ಪುಟ್ಟಾರ್ಯ.

ಈ ಪುಟ್ಟಾರ್ಯನ ಶಿಷ್ಟಾಚಾರವನ್ನು ಕಂಡು ಗುರುವರ್ಯ ಪಂಚಾಕ್ಷರ ಗವಾಯಿಗಳವರು. ತಮ್ಮ ಸ್ಥಾನದ ಪಟ್ಟ ಮುಂದೆ ಇವನಿಗೆ ಕಟ್ಟಬೇಕೆಂದು ನಿರ್ಧರಿಸಿ ಮತ್ತಿಷ್ಟು ಕಳಕಳಿಯಿಂದ ಅಭ್ಯಾಸ ಮಾಡಿಸಹತ್ತಿದರು.

ಮಳೆಯಲ್ಲಿ ಜಡೆಮಳೆ ಜಡಿದಂತೆ ಸಿಬಿಡಾಗಿ ನಡಯಿತು. ಪುಟ್ಟಾರ್ಯನ ಅಧ್ಯಯನ ಗಾಡಿ.... ಗಾಡಿ ಓಡಿ ಓಡಿ ೧೫ ವರುಷದ ಗಡಿ ದಾಟಿತು.

ಸರ್ವಜ್ಞನೆಂಬುವನು ಗರ್ವದಿಂದಾವನೆ?
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ
ಪರ್ವತವೇ ಆದ ಸರ್ವಜ್ಞ ॥

ಎಂಬಂತೆ ಅನಂತರಿಂದ ಕನ್ನಡ ಸಂಸ್ಕೃತ. ಹಿಂದಿ ಕಲಿತು ಸಾಹಿತ್ಯ ಗುಂಡಾರವಾದಂತೆ; ಶ್ರೀಗುರು ಪಂಚಾಕ್ಷರಿಯಿಂದ ಉಭಯಗಾಯನ ವಾದನಗಳನ್ನು ಗುರುವಿನ ದಾಸನಾಗಿ ನಿರತದಭ್ಯಾಸಮಾಡಿ ಪುಟ್ಟಾರ್ಯ ಸಂಗೀತ ಭಾಂಡಾರವಾದನು.



# ಹರೆಯದ ಹಂದರ, ಬ್ರಹ್ಮಚರ್ಯ ಬಂಧುರ.

ಇತಿಸಪ್ತಮಹಾಯಾನೆಖಿಲಶ್ರುತಿ
ಪಾರಂಗತತಾಂ ಗತೋ ವಟುಃ॥

ಬ್ರಹ್ಮಚಾರಿಯಾದ ಶಂಕರಾಚಾರ್ಯನು ತನ್ನ ಬಾಲ್ಯದಲ್ಲೆ ಎಲ್ಲ ವೇದ ಗಳಲ್ಲಿ ಪಾರಂಗತನಾದನು. ಅಕ್ಕಮಹಾದೇವಿ ಬಾಲಕಿಯಾದಾಗಲೇ ಶಿವಾ ನುಭವ ಪಾರಂಗತಳಾಗಿದ್ದಳು. ಬಸವಣ್ಣನವರು ಚಿಕ್ಕವರಿದ್ದಾಗ ತಂದೆ ತಾಯಿಗಳುಉಪನಯನ ಮಾಡಬೇಕೆಂದು ವೈಕದಿ ಬ್ರಾಹ್ಮಣ ರನ್ನು; ಪಂಡಿತರನ್ನು ಕರೆಯಿಸಿದಾಗ ಶಾಸ್ತ್ರ ಸಮ್ಮತವಾಗಿ ಉಪ ನಯನವನ್ನು ನಿರಾಕರಿಸಿದನು. ಇನರುತೆ ನಮ್ಮ ಪುಟ್ಟಾರ್ಯನೂ ಕೂಡಾ ಬಾಲ್ಯದಲ್ಲಿಯೇ ಕನ್ನಡ, ಸಂಸ್ಕೃತ, ಹಿಂದೀ, ಗಾಯನ, ವಾದನಗಳಲ್ಲಿ ಅದ್ವಿತೀಯ ಪಾಂಡಿತ್ಯ ಪಡೆದು ಪಂಡಿತರ ಸಭೆಯಲ್ಲಿ ಭಾಗವಹಿಸಿ ವಿದ್ವಾಂ ಸರನ್ನು ಬೆರಗು ಗೊಳಿಸುವ ಸಾಮರ್ಥ್ಯವನ್ನು ಪಡೆ ; ಪಡೆದಿದ್ದಾನೆ.

ವಿದ್ಯೆಯ ವಾಹಿನಿ ಹರಿದಂತೆ ವಯಸ್ಸಿನ ವಾಯು ಹರಿದು ಹರಿದು ಹರೆಯದಂಬುಧಿಯಲ್ಲಿ ಕೂಡಿತು. ಹದಿನೆಂಟರ ಹದ್ದು ದಾಟಿ ತುಂಬು ಹರೆಯದ ಹಂದರದಲ್ಲಿ ದೇಹವಿರಿಸಿದ ಪುಟ್ಟಾರ್ಯ. ಪ್ರಾಯದ ಪ್ರಭಾವದಿಂದ ಬಡಕಲು ದೇಹ ಸದೃಢವಾಯಿತು, ದುಂಡು ದುಂಡಾಗಿ ಬೆಳೆದಿತ್ತು.

ನೀಳವಾದ ತೋಳು, ಸಬಳಾದ ಕಾಲು, ಮುದ್ದಾದ ಮುಖದ ಜಾಲು, ಉದ್ದಾಗಿ ಶುದ್ಧಾಗಿ ಅರಳ್ದ ಸಂಪಿಗೆಯಾಕಾರದ ಮೂಗಿನ ಕವಲು ಕಾಳಗದ ಕಲಿಯಂತೆ; ಗರಡಿಯ ಹುಲಿಯಂತೆ ತುಂಬಿಸಿಂತ ವಟ್ಟಪುಟ್ಟ ದೇಹದೇಸುಲ ಒಪ್ಪಾಗಿ ಓರಣವಾಗಿ ಬೆಳೆದಿದೆ; ಕಾಮರೂಪ ತಾಳಿದೆ. ಕಣ್ಣಿಲ್ಲದಿದ್ದರೂ ಮಿಸುನಿ ವರ್ಣದ ದೇಹ ಮಂದಾರದ ಮೇಣೆಯಂತೆ; ಸೌಂದರ್ಯದ ಖಣಿಯಂತೆ; ಮಾಟಾಗಿದೆ; ನೇಟಾಗಿದೆ. ಸದಾ ಹಸನ್ಮುಖಿಯಾ ಗಿರುವ ಪುಟ್ಟಾರ್ಯನ ನಗೆಮೊಗ ಸೊಗದಾಗಸದ ತಂಗಿದಿರನಂತೆ ಗೋಚರಿಸು ತಿತ್ತು ನೋಡುವವರ ಕಣ್ಣಿಗೆ.

ಈ ಗಾನಮಣಿಯ ತನು ತಣಿಸುವ ಆರಗಿಣಿ (ಹೆಂಣು) ಯಿಲ್ಲದ ಕಾರಣ ಮಾನವು ಕಾಮನಾಟಕದ ಅಟ್ಟದ ಏಣಿ ಹತ್ತಿ ಏರಿ; ಇಣುಕಿ; ಕೆಣಕಿ; ಕೆಳಗಿ ಳಿಯುತ್ತಿತ್ತು.

ಹೀಗಾಗುವದು ಸ್ವಾಭಾವಿಕ ! ಪ್ರಾಯದ ಪ್ರದೇಶದಲ್ಲಿ ಪ್ರಹರಿಸಿದ ಪುರುಷನು ಹೆಂಣು ಬಸುವದು ಪ್ರಕೃತಿಯ ನೇಮ. ಈ ಕಟ್ಟಳೆಗೆ ಕಟುಬಿದ್ದ ಪುಟ್ಟಾರ್‍ಯನು ಕಾಮಶರದ ಚುಚ್ಚು ಬಾಧೆಯಿಂದ ಹುಚ್ಚನಾದ; ಬಿಚ್ಚಿ ಯಾರ ಮುಂದೂ ತಿಳಿಸದಾದ.

ಹರಿಹರಾದಿಗಳು ಈ ಕಾಮನ ಪಾಶಗೆ ಬಲಿಯಾಗಿದ್ದಾರೆಂದಾಗ ಈ ಪುಟ್ಟಾರ್‍ಯನಸಾಡೇನು. ಇದೇ ವಾಸನೆಯಲ್ಲಿ ಪುಟ್ಟಾರ್‍ಯ ಊಟಮಾಡಿ ರಾತ್ರಿ ಸಮಯದಲ್ಲಿ ಮಲಗಿದ............................................................

ರಾತ್ರಿ ಮಿಕ್ಕಿತು; ನಿದ್ರೆ ತುಟ್ಟಿಯಾಗಿ ದಕ್ಕಿತು; ಅದರಲ್ಲಿಯೇ ಕನಸು ಕುಕ್ಕಿತು.

ಕನಸಿನ ಸಾಮ್ರಾಜ್ಯದಲ್ಲಿ ವಿಹರಿಸುತ್ತಿದ್ದಾನೆ ಪುಟ್ಟಾರ್‍ಯ ಹಚ್ಚಹಸಿರು ಪೈರುಗಳಿಂದ, ಬತ್ತ ನೆತ್ತಗಳ ಗದ್ದೆಗಳಿಂದ, ಹುಲ್ಲು ಗದ್ದೆಗಳಿಂದ ಭೂದೇವಿ ಹಸಿರು ಸೀರೆಯುಟ್ಟಂತೆ ಕಂಣಿಗೆ ಕಂಡುಬರತಾ ಇತ್ತು, ವನದೇವಿ ಸೌಂದ ರ್‍ಯದ ಶರಧಿಯಲ್ಲಿ ಈಸುಬಿದ್ದಿದ್ದಾಳೆ. ಇದಕ್ಕೆ ಮೆರುಗೊಟ್ಟಂತೆ ಆಚ್ಛಾಧಿತ ವಾದ ನಿರಭ್ರವಾದ ಆಕಾಶ. ಆಕಾಶದಲ್ಲಿ ಮುತ್ತಿನ ಮಾಲೆಯಂತೆ; ರತ್ನ ದೊಡ್ಡಿಯಂತೆ, ವಜ್ರ ದುಡ್ಯಾಣದಂತೆ ಝುಗಝುಗಿಸುತ್ತಿರುವ ನಕ್ಷತ್ರಗಳು. ಇವುಗಳ ಮಧ್ಯದಲ್ಲಿ ರಾಜನಂತೆ, ಕಾಂತಿಯ ಕಾಂತಾರದಂತೆ, ಹಾಲಾಗಾ ರದ ಹಂದರದಂತೆ ಚಂದಿರ ಬೆಳಗಿ, ಹಿಟ್ಟು ಚೆಲ್ಲಿದಂತೆ ತನ್ನ ಬೆಳದಿಂಗಳನ್ನು ಭೂದೇವಿಯ ಹಸಿರು ಶಿರಗಿನಮೇಲೆ ಚಲ್ಲಿ ಮುತ್ತಿಷ್ಟು ವನದೇವತೆಯನ್ನು ಶಿಂಗ ರಿಸಿದ್ದಾನೆ.

ದೂರದಲ್ಲಿ ಕಾಣುವ ಎರಡು ಅಂದವಾದ ಗುಡ್ಡಗಳು ಭೂದೇವಿಯ ಕುಚದ್ವಯಗಳಂತೆ ಉಬ್ಬಿ ಹರವಾಗಿ ಹಬ್ಬಿವೆ. ಈ ಎರಡು ಗುಡ್ಡಗಳ ನಡುವೆ ಕೊಳವೊಂದು ಹರಿದು ಭೋರ್ಗರೆಯುತ್ತಿದೆ; ಭೂದೇವಿಯ ಕುಚದ್ವಯಗ

ಳಿಂದ ಹೇಿಡು ಬರುವ ಅಮೃತ ಶರಧಿಯಂತೆ. ಈ ಸೌಂದರ್ಯ ನೋಡುತ್ತ ನೋಡುತ್ತ ಈ ಕೊಳದ ಸಮೀಪ ದೊಡ್ಡದಾದ ಬಂಡೆಗಲ್ಲ ಮೇಲೆ ಕೂತನೀ ಪುಟ್ಟಾರ್ಯ.......................ಘುಳಿಘುಳಿಸುತ್ತೇಳುವ ಬೊಬ್ಬಿಗಳಿಂದ; ಕಳಕಳ ನಾದದಿಂದುಂಟಾಗಿ ಮುಂಪೋಷುವ ನೀರ ಸುಳಿಗಳಿಂದ, ಸಳಸಳವಾಗಿ ಸಾಗುವ ತೆರೆಗಳಿಂದ ಜುಳುಜುಳ ಜಳೆಂದ್ ಹರಿವ ಜರಿಗಳಿಂದ, ಜುರ್ ಜುರ್ ಜುರ್‌ರ್‌ರೆಂದು ಜರಿವ ನೊರೆಗಳಿಂದ; ಚಿಲ್ ಚಿಲ್ ಚಿಲಿಲಿಲಿಲೆಂದುಲಿದವ ಶಿಲೆಗಳಿಂದೊಡಗೂಡಿದ ಪ್ರವಾಹದ ಓಟ ಕಣ್‌ಶೆಳೆಯುವ ನೋಟವಾಗಿ, ತನು ತಣಿಸುವ ಭೇಟವಾಗಿ ಕಾಣಸ್ತಾಯಿತ್ತೀ ಕೊಳ, ನಿರ್ಗೊಳ. ಬೆಳದಿಂಗಳ ಬೆಳಕಿನಲ್ಲಿ ತೆರೆಗಳು ಮಿಂಚಿ ಮಿಂಚಿ ಮುಂದೆ ಸಾಗಿದ್ದನ್ನೀಕ್ಷಿಸಿದರೆ ಮುತ್ತು ರತ್ನಗಳ ರಾಶಿಯನ್ನು ಹೊತ್ತು ಹೊರಟಂತೆ ಕಾಣಸ್ತಾಯಿತ್ತು ಈ ಕೊಳ. ಬಂಣ ಬಂಣದ ಮೀನುಗಳು ಕೊಳದಲ್ಲಿ ಓಡಾಡುವದನ್ನೀಕ್ಷಿಸಿದರೆ ಈ ಮುತ್ತು, ರತ್ನಗಳಿಗೆ ಕನ್ನವಿಕ್ಕುವ ಕಳ್ಳರಂತೆ ಕಂಡುಬಂದವೇನೋ, ಅವುಗಳನ್ನು ಕೊಲ್ಲುವದಕ್ಕೆಂದು ಪುಟ್ಟಾರ್ಯ ಕೊಳ್ಳದಲ್ಲಿ ಕಲ್ಲೆಸೆದ.

ಶವ್ ಶವ್ ಶವ್ ಎಂದು ಕಲ್ಲು ಮುಳುಗಿತು. ಕಲಕಲ ಕಲ ಧ್ವನಿ ಮಾಡಿ ಇಡೀ ಕೊಳ್ಳವೇ ನಕ್ಕಿತು. ಮುತ್ತು ರತ್ನಗಳ ರಾಶಿ ಮಾಯವಾಯಿತು, ಮೀನುಗಳ ಸುಳಿವಿಲ್ಲದಾಯಿತು. ಕಲ್ಲಿನಿಂದುತ್ಪನ್ನವಾದ ತರಂಗಗಳು ಗುಂಡಾಕಾರವಾಗಿ ಸುತ್ತುತ್ತ ದಂಡೆಗೆ ಬಂದು ಬಡಿದರೆ ಹೃದಯ ಮಂಡಲಕ್ಕೆ ಬಡಿದಂತಾಗುತ್ತಿತ್ತು ಪುಟ್ಟಾರ್ಯನಿಗೆ. ಹೀಗಾಗಿ ಪುಟ್ಟಾರ್ಯನ ಹೃದಯಾಗರದ ತೆರೆಗಳು ಕಾಮನ ಕಲ್ಲೆಸೆತದಿಂದ ಬಂಡಾಕಾರವಾಗಿ ಸುತ್ತಿ ಸುತ್ತಿ ಸುಸ್ತಿಗೊಳಿಸಲಾರಂಭಿಸಿದವು. ಮನಸ್ಸಿನ ಸ್ಥಿಮಿತ ತಪ್ಪಿತು. ಈ ವಿಷಮಯ ದೃಶ್ಯವನ್ನು ನೋಡಲಾರದೆ ವನದತ್ತ ದೃಷ್ಟಿ ಬೀರಿದ.

ಒಂದೆಡೆ ಗಿಡ ಮರಗಳ ಜಾಡು, ಇನ್ನೊಂದೆಡೆ ಕಂಬುಗ್ರೀವಗಳ ಗೂಡು, ಮತ್ತೊಂದೆಡೆ ಮುಗಿಲಿಗೆ ಮುತ್ತಿಡುವಂತೆ ಬೆಳೆದ ಆಕಾಶ ಮಲ್ಲಿಗೆಗಳು, ಮುಗದೊಂದೆಡೆ ತರ ತರದ ತರು ಲತೆಗಳಿಂದ ಗುಂಪುಗುಂಪಾಗಿ ನಿಂತ ವನಗಾಡು ಮನಸಿನ ಮುಗುಡವನ್ನು ಕಡಿಯಲಿಕ್ಕೆಂದೇ ನಿಂತಂತೆ ಭಾಸವಾಯಿತು; ತೋಷಬೀರಿತು........

ನಿಲೆಯಿಲ್ಲದೆ ನೆಲೆಯಿಲ್ಲದೆ ಎಲ್ಲೆಲ್ಲಿ ನಿಲ್ಲದೆ ನಿಳಿನಿಳಿಸುತ ನಿಡಿದಾಗಿ ನಿರಂತರವಾಗಿ ಬೀಸುತ್ತಿದ್ದ ಸುಳಿಗಾಳಿ, ವನದ ಸುಗಂಧ ದ್ರವ್ಯಗಳನ್ನು ಹೊತ್ತು ತಂದು ಮನಸ್ಸಿಗೆ ಉಲ್ಲಾಸ ಬೀರುತ್ತಿತ್ತು.

ಸುಳಿದು ಬರುವ ಗಾಳಿ ನಾಶಿಕಕೆ ಸುಖವನ್ನೀಯುವಂತೆ ಅದೆಲ್ಲಿಯದೋ ಒಂದು ಧ್ವನಿಯನ್ನು ಹೊತ್ತುತಂದು ಪುಟ್ಟಾರ್ಯನ ಕರ್ಣದ್ವಯಗಳಲ್ಲಿ ಚೆಲ್ಲಿತು. ಸುಮಧುರವಾದ ಧ್ವನಿ ಕೇಳಿ ಪುಟ್ಟಾರ್ಯನ ಕಿವಿಗಳು ನಿಮಿರಿನಿಂತವು. ಎಂಥ ಇಂಪು ತುಂಬಿದ ಕಂಠ ? ಈ ಕಾಡಿನಲ್ಲಿ ಕೇಳಿ ಬರುತ್ತಿರುವ ಕಂಠ ಯಾರದು ? ಎಂದು ಕುತೂಹಲಯುತನಾದ ಪುಟ್ಟಾರ್ಯ. ಬರುಬರುತ್ತ ಆ ಧ್ವನಿ ಸಮೀಪಿಸಿ ನಾನುಹೆಣ್ಣು ಎಂದುಸ್ಪಷ್ಟವಾಗಿ ಉತ್ತರಿಸುವಂತಿತ್ತು. ಹೆಣ್ಣಿನ ಕಂಠ ಸಮೀಪಿಸಿದಂತೆ ಪುಟ್ಟಾರ್ಯ ಮನ ಪಕ್ಷಿ ನಿದ್ದೆಯಿಂದೆದ್ದಂತೆ ಚೇತರಿಸಿ ನಿಂತಿತು........... ಈಕೆ ಯಾರಿರಬಹುದು ? ಈ ಕಾಡಿನಲ್ಲಿ ವಾಸವಾಗಿರುವ ವನಸುಂದರಿಯೇ ? ಅಥವಾ ನನ್ನಂತೆ ಗಂಡು ಬಯಸಿ ಕಾಮ ಪೋಷಿತಳಾದ ಹೆಣ್ಣಿರಬಹುದೆ ? ಎಂದು ಪುಟ್ಟಾರ್ಯ ಪ್ರಶ್ನೆಗಳನ್ನು ಎಣಿಕೆಮೀರಿ ಗುಣಿಸುತ್ತಿದ್ದಾಗ.— ಸುಂದರವಾಗಿ ಹಾಡುವ ಹೆಣ್ಣು ಪುಟ್ಟಾರ್ಯನ ಸಮೀಪಿಸಿತು, ಆಕೆಯ ರೂಪ ಸೌಂದರ್ಯವನ್ನು ನೋಡಿ ಪುಟ್ಟಾರ್ಯ ಬೆಕ್ಕಸ ಬೆರಗಾದ..........

ನೋಡು ನೋಡುತ್ತಿರುವಂತೆ ಸುಂದರಾಂಗದ ಮಾಯಾಂಗನೆ ಪುಟ್ಟಾರ್ಯನ ಮುಂದೆ ನಿಂತಳು ಬಳಕುವ ಬಳ್ಳಿಯಂತೆ. ಆಕೆಯ ರೂಪದತಾವು; ನಿಂತ ನಡಿಗೆಯ ನೇಟು; ದೇಹದ ಮಾಟ; ಬಾರಿಬಾರಿಗೆ ಬೀರ್ವ ಕಡೆಗಂಣಿನ ಕಿರು ನೋಟ, ಹಲ್‌ಕಿರಿದು ಸಾರಿಸಾರಿಗೆ ಸುರಿಸುವ ನಗೆಮೊಗದ ನಗೆಯಾಟ, ಸಪ್ಪಳವಿಲ್ಲದಲೆ ಪಕಪಕನೆ ಪಿಕಳಿಸಿ ಚಪ್ಪರಿಸುವ ಕಂಣೆವೆಗಳ ಕಡದಾಟ, ಕಂಗಳ ಕುಣಿದಾಟ ಸರೋವರದ ಮೀನಾಟದಂತೆಸೆದು ಪುಟ್ಟಾರ್ಯನಿಗೆ ಕಾಮನಾಟದ ಕೂಟವೇರ್ಪಡಿಸಿತು, ತೋರ್ಪಡಿಸಿತು.

ಆಕೆಯ ಕಂಗಳ ಕುಣಿತ, ಅಂಗಾಂಗಳ ಮಣಿತ, ಹುಬ್ಬುಗಳ ಶಿಳಿತ, ಕೊಬ್ಬಿನಂತೆ ಕೊನರಿನಿಂತಾಕೆಯ ಕುಚದಿಬ್ಬುಗಳನ್ನಾಲಿಸುವ ಪುಟ್ಟಾರ್ಯನ ಮನಪಕ್ಷಿಗೆ ಹಬ್ಬದೂಟ, ಸಗ್ಗದಾಟ,

ತೆಳುವಸುರ ಕೊಬ್ಬಿದ ಕುಚಂಗಳ।
ಲಲಿತ ಕಂಬುಗ್ರೀವವನು ಕಂ।
ಡಲಸ ದೀಕ್ಷಿಸುವವರ ಕಂಗಳ ಕಾಂತಿ ಕರಿಗಟ್ಟಿ॥
ಬಳಸಿನಲಿ ನೆಳಿಸಿರ್ದುವೆನೆ ಕೋ।
ಮಳೆಯ ಕೊರಳಿನೊಬ್ಬಳಿಕ್ಕಿದ।
ಳೊಲಿದು ಬೆಳಗುವ ತೊಳಪ ಮುತ್ತಿನ ತೋರಹಾರವನು॥

"ಪ್ರಭುಲಿಂಗಲೀಲೆ"

ಈರೀತಿ ಪ್ರಭುಲಿಂಗಲೀಲೆಯಲಿ ಚಾಮರಸ ವರ್ಣಿಸಿದ ಮಾಯಾಂಗನೆಯಂತೆ ಈ ಸುಂದರಾಂಗಿ ಒಪ್ಪಿದಳು. ರೂಪವಾಹಿನಿಯಂತೆ, ತಾಪ ಹರಣಿಯಂತೆ,ಕಾಮಪ್ರೇರಿಣಿಯಂತೆ; ಪ್ರೇಮ ಕಾರಿಣಿಯಂತೆ, ಭೋಗಮದಮಾನಿಯಂತೆ; ರಾಗದನುರಾಗಿಣಿಯಂತೆ,ಮೋಹ ಲೋಭಿಣಿಯಂತೆ, ರತಿರಾಣಿಯಂತೆ ಈಲಲನಾಮಣಿ ಕಂಡಳೀ ಪುಟ್ಟಾರ್ಯನ ಕಾಮಕಣ್ಣಿಗೆ ಕುಡಿಮೀಸೇದಿಣ್ಣೆಗೆ.

ಸಬಳಾಗಿ ಸರಳಾಗಿ ಬೆಳೆದ ಬಾಳೆದೆಳೆಯಂಥ ತೊಡೆಗಳು, ಗುಂಡಾಗಿ ಚಂಡಾಗಿ ತುಂಬಿದ ತಿಗದ ದಂಡೆಗಳು, ನಯವಾಗಿ ಚಯವಾಗಿ ಏರೇಳಿಯುವ ಉಪರದೆಸಳು, ತವರಾಗಿ ಕವರಾಗಿ ನೆಳ್ಳಾಗಿರುವ ಕಟಿಭಾಗದ ಕೆಳಗುರುಳು, ಬಡಕಾಗಿ ಕಂಣ್‌ಸೆಳೆಯುವ ನಡುಭಾಗದ ಕರುಳು, ಅರೆಚಂಡಿನಂತೆ ಹಿರೆ ಪುಂಡಿಯಂತೆ ಕೆಂಪಾಗುಬ್ಬಿರುವ ಕಪೋಲಗಳು, ಸುಲಿಪಲ್ಲುಗಳು;ಗಲ್ಲದೆಗ್ಗುಗಳು; ದೇಹದಿಬ್ಬಗಳು; ಮೋಹದ ತಗ್ಗುಗಳು; ಚುಂಬನದ ಕೇಂದ್ರವಾದ ತುಟಿದ್ವಯಗಳಾದಿ ಸರ್ವಾಯವಗಳು ಈ ಹೆಂಣಿನಲ್ಲಿ ವೈಶಿಷ್ಟ್ಯಪೂರ್ಣವಾಗಿ ತೋರಿದ್ದವು; ಸಹಕರಿಸಿದ್ದವು.

ಪಾಲ್ಗಡಲ ಫಣಿಯಲ್ಲಿ ಪರಿಶೋಭಿಸುವ ಪೂರ್ಣೇಂದುವಿನ ಪ್ರತಿಬಿಂಬದಂತಿರುವಾಕೆಯ ಮುಖಮಂಡಲವನ್ನು ನೋಡಿದ ಗಂಡಿಗೆ ಭೂಮಂಡಲದ ಅರಿವಾಗುತ್ತಿದ್ದಿಲ್ಲ. ಅಂದಾಗ ಸುಂದರಿಯ ಮುಖಮಂಡಲದ ಮುಂಭಾಗದಲ್ಲಿ ಮಂಡಿಸಿದ ಪುಟ್ಟಾರ್ಯನ ಮುಂಡಕ್ಕೆ ನಭೋಮಂಡಲದ ನೆನಹಿಲ್ಲ; ಜಗದ ಮಂಡಲದ ಪರಿವಿಲ್ಲ.

ಪುಟ್ಟಾರ್ಯನೀಗ ಕಾಮುರಂಗದಲ್ಲಿ ಅಂಗವಿರಿಸಿ ಮನವೆಂಬ ಮಂಗನ ಸಂಗ ಸ್ವೀಕರಿಸಿ, ಅಂಗವಿರಿಸಿ, ಸಂಗನ ಮರೆದು ಅಂಗನೆಯ ಅಂಗಾಂಗಗಳ ಅಂಗೋಪಾಂಗದಲ್ಲಿ ಅಂಗವಿರಿಸಿದ್ದಾನೆ.

ಇದನ್ನರಿತ ಆ ಮಾಯಾಂಗನೆ ಮುಗುಳ್ನಕ್ಕು ನವಿಲ ನಡಿಗೆಯಿಂದ ಮುಂದಾವರಿಸಿದಳು; ತನ್ನ ಗೆಳತಿಯರನ್ನು ಕೈಮಾಡಿ ಕರೆದಳು. ತತ್‌ಕ್ಷಣ ದಲ್ಲಿ ವನಿತೆಯರ ಬಳಗ ಬಂದು ಈಕೆಯನ್ನು ಸೇರಿತು; ಪುಟ್ಟಾರ್ಯನ ಸುತ್ತು ವರಿಯಿತು. ಕಣದಂತೆ ಸುತ್ತುವರಿಯಲ್‌ಪಟ್ಟ ಅಂಗನೆಯರ ಮಧ್ಯ ಪುಟ್ಟಾರ್ಯ ಅತ್ಯಾನಂದಿತನಾಗಿ ಶ್ರೀಕೃಷ್ಣನಂತೆ ಆಡುತ್ತಾನೆ; ಹಾಡುತ್ತಾನೆ. ಇವನ ಹಾಡಿಗೆ ತಾಳವಿಕ್ಕಿ ಕಾಲುತಿಕ್ಕಿ ನೃತ್ಯ ಮಾಡಹತ್ತಿದರು ವನಿತೆಯರು.

ಮುಡಿಜಡಿಯ ಕುಂತಳಂ ಕುಣಿಯೆ ಕಡೆಗಣ್ ಹೊಳೆಯೆ
ನಡುನಳಿಯೆ ಕರ್ಣಪಾಳಿಕೆಯೊಲೆಯೆ ಹಾರ ಹೊಳೆ
ವೆಡೆಯಾಡೆಲಂಬಿಸುವ ಮೇಲುದಿನ ತೆರಹಿನೊಳು-
-ಮೊಲೆಗಳಲುಗಲು ಬಾಗಿದ
ಒಡಲು ಶೋಭಿಸೆ ತಪ್ಪು ತಡೆಮೆಟ್ಟು ವಡಿಗಳೊಳು
ಬಿಡದೆ ನೇವುರ ಝಣಂ ಝಣಂಮೆನಲು ಮಡದಿಯರ
ನಡುವೆ ಸೆಂಡಂ ಹೊಯ್ಯುತಿರ್ದಳೋರ್ವಳು
ಕಾಮನಂಕಮಾಲೆಯ ಪಾಡುತ ||

" ಹರಿಶ್ಚಂದ್ರ ಕಾವ್ಯ "

ಅಳಿಗಳ ಳಕಕೆ ನವಿಲ್ ಮುಡಿಗೆ ಶಶಿ ವದನಕು
ತ್ಪಲ ಕಣ್ಗೆ ಬಿಂಬವಧರಕೆ ಮಾಣಿಕಂ ರದಕೆ
ಬೆಳದಿಂಗಳುಂ ನಗೆಗೆ ಕೋಕಿಲಂ ಧ್ವನಿಗೆ ತಂಬೆಲರುಂ
ಸುಯಿಲ್ಗೊಪ್ಪುವ ||
ಗಿಳಿನುಡಿಗೆ ಲತೆನಡುಗೆ ಚಕ್ರವಾಕಂ ಕುಚ
ಸ್ಥಳಕೆ ಕೃತಕಾಚಲ ನಿತಂಬಕ್ಕೆ ತಳಿರು ಪದ
ತಳಕೆ ರೂಢಿಸಿದ ರೂಪಂ ತಾಳ್ದ ವನಿತೆಯರು ಸುಳಿದರೆಲ್ಲಾ-
-ದೆಸೆಯೊಳು ||

ಈ ರೀತಿ ಒಪ್ಪಿದ ಹೆಂಗಳೆಯರ ಮಧ್ಯದಲ್ಲಿ ಪುಟ್ಟಾರ್ಯ ಹಾಡಿ ಹಾಡಿ ದಣಿದಣಿದು ಕುಣಿಯುತ್ತಿದ್ದಾನೆ. ಮೊದಲು ಕಂಡ ಸ್ತ್ರೀಯಳ ವಿವಿಧ

ಹಾವ ಭಾವಗಳ ಭಂಗಿಗೆ ಮಾರುಹೋಗಿ ಪುಟ್ಟಾರ್ಯ ಆಕೆಯನ್ನು ಸಮೀಪಿಸಿದ ಕೈ ಚಾಚಿದ. ಕಾಮರಾಗದ ಆರ್ತನೆಯಲ್ಲಿ ತನ್ನ ರಾಗ ಬೆರಿಸಿ ಮೋಹದನ; ರಾಗ ಕಣ್ದೆರೆದು ಆತ್ಮದನುರಾಗದ ಕಣ್ಮುಚ್ಚಿ, ಆಕೆಯ ಆಲಿಂಗನಕ್ಕೆ ತವಕ ಪಡುವ ಸ್ಥಿತಿಯಲ್ಲಿದ್ದಾನೆ; ಗತಿಯಲ್ಲ್ಯು ಕಲಿಯುತ್ತಿದ್ದಾನೆ. ಕಾಮದಾಹವೇರಿ ಬಳಿಸಾರಿ ಆನಾರಿಯ ಸೀರಿಯ ಸೆರಗ್ಗಿಡಿದು ಸೆಳೆದು ದೇಹ ಬಳೆಯುವವರಲ್ಲಿದ್ದ.

........................

ಪುಟ್ಟಯ್ಯ....................

ಆದಾವುದೋ ಧ್ವನಿ ಪುಟ್ಟಾರ್ಯನ ಕರ್ಣಗಳಲ್ಲಿ ಪ್ರತಿಧ್ವನಿಸಲಾಗಿ ಬೆದರಿದ, ಬೆಚ್ಚಿ ಬಿದ್ದ, ಹಿಂದುರಿಗಿ ನೋಡಿದ....... ಪೂಜ್ಯ ಗುರು ಪಂಚಾಕ್ಷರಿಯ ಮುಂಡವಿಲ್ಲದ ರುಂಡ ಸೂರ್ಯ ಪ್ರತಿಬಿಂಬದಂತೆ ಗಗನ ಮಂದಿರದಲ್ಲಿ ಪ್ರಕಾಶಿಸುತ್ತಲಿದೆ. ಅದನ್ನು ಕಂಡ ಮೇಲಂತೂ ಪುಟ್ಟಾರ್ಯನ ಝುಂಗಾ ಬಲವೇ ಅಡಗಿತು; ಭಯದಿಂದ ದೇಹವಿಡೀ ನಡುಗಿತು.

ದುಗುಡದಿಂದ ಹಿಂದಿರುಗಿದ ಸ್ತ್ರೀಯರ ಬಳಗ ಮಾಯವಾಗಿತ್ತು; ಅಣಕ ತುಂಬಿದ ಧ್ವನಿಯಲ್ಲಿ ಇಡೀ ವನವೇ ನಕ್ಕಂತೆ ಭಾಸವಾಯಿತು. ಮತ್ತೆ ಹೊರಳಿ ಗುರುವರ್ಯರನ್ನು ನೋಡಿದ ಗುರುವರ್ಯರು ಕೂಡಾ ನಗುತ್ತಿದ್ದರು.

ಪುಟ್ಟಾರ್ಯ ಅಪಮಾನದುಂಬಿದ ಮೊಗ ಭೂದೇವಿಯ ಬೆನ್ನಮೇಲಿರಿಸಿದ

...............

ಪುಟ್ಟಯ್ಯ....

ಈ ಆಶೆ ನಿನಗೇಕೆ ಬಂತು ಕುಮಾರ!? ನೀನೇನು ತಿಳಿದುಕೊಂಡಿರುವಿಯಲ್ಲ ಈ ಸ್ತ್ರೀ ಸಂಗ ಅಷ್ಟೊಂದು ಸುಖತರವಾದುದಲ್ಲ. "ಹೆಂಣಿನ ಸುಖ ಮೊದಲು ಬಲು ಹುರುಪು ತದನಂತರ ಛಲದಾಳಿನಿಲ್ಲುವದು ವುರುಪು" ಹೆಂಣಿನ ಬಲಿಗೆ ಬಲಿಯಾಗಿ ವಿಲಿವಿಲಿ ಒದ್ದಾಡಿ ಸುಲಿಗೆಯ ಇಲಿಯಂತೆ ಬಳಲುವದಕ್ಕಾಶೆ ಮಾಡಲು ಸಿದ್ಧನಾದೆಯಾ?

ಸೀರಿನ ನೆಲೆ ನಾರಿಯು ನೆಲೆ ಕು।
ದರಿಯು ನೆಲೆ ತಿಳಿದವರಿಲ್ಲ ಜಗದಿ ॥

ಅಂದಾಗ ಚಂಚಲೆಯುಕ್ತವಾದ ಹೆಂಣಿನ ಬಂಣಕ್ಕೆ ನಂಬಿ;ದೇಹದವಣ್ಣಿ ಕ್ಕಾಗಿ ಹಿಗ್ಗಿ; ಮಂಣುಗೂಡಬೇಕೆಂದಿರುವಿಯಾ ? ಕಲಿಯುಗದಿ, ಫ್ಯಾಶನ್ನದ ಲಲನೆಯರು ಪತಿಯ ಒಲವಿಗೆ ಒಲಿಯದೆ ಪರಪುರುಷರ ಉಡಿಲಲ್ಲಿ ಓಲಾಡಿ; ನಾರಿ ಕೀರ್ತಿಗೆ ಕೊಡಲಿಪೆಟ್ಟಕ್ಕುತ್ತ ಕುಲೀನರಿಂದ ತುಂಬಿದ ಈ ಕಾಲದಲ್ಲಿ; ಲಲನೆಯರ ಮೋಹದಲಿ ಯುಲಿಯುವದೆಂದರೆ- ಪುಡಿಲಲ್ಲಿ ಶೂಲವಿರಿಸಿ ಕೊಂಡಂತೇ ಸರಿ. ಮಾಡಿಕೊಂಡವನ ಮರೆತು, ಕೂಡಿಕೊಂಡವನಲ್ಲಿ ಬೆರೆತು, ಭಂಡ ಜೀವನ ಬಗೆಸಿ ಬೇಡಿಕೊಂಡರಂಡೆಯರ ಭಂಡಾಟದಿಂದೊಡಗೊಂಡಿದ್ದ ಈ ಕಾಲಖಂಡದಲ್ಲಿ, ಹೆಂಡತಿ ಬೇಕೆಂಬ ಹಂಬಲಿಸುವ ಗಂಡಸರ ಪಾಡು ಕೆಂಪ ದಲ್ಲಿ ಪಿಂಡವಿಟ್ಟಂತಾಗುವದು ಖಂಡಿತವೆಂದು ತಿಳಿದುಕೋ,

ಹೆಂಣಿನ ಕೂಟ ಕಾಲನಕೂಟ ।  
ಹೆಂಣಿನ ಪಾಶ ಯಮ ಪಾಶ ॥  
ಹೆಂಣಿನ ನೋಟ ವಿಷದೂಟ ।  
ಹೆಂಣಿನ ಆಟ ಭವದಾಟ ॥

ಇದನ್ನರಿತೂ ಅನಿಶ್ಚಿತವಾದ; ಸಂಸಾರ ಮೋಹಕ್ಕೆ ಮಾರುಹೋಗಿ, ನಿಶ್ಚಿತವಾದ ನಿರಾಮಯನ ಸಂಸಾರವನ್ನು ಸಂಹರಿಸ ಹೊರಟ ನಿನ್ನೀ ವೃತ್ತಿ ನಿಜವಾಗಿಯೂ ಕೃತಘ್ನವಾದದ್ದು.

ಮರುಳೇ ನೋಡದಿರು ಪರರಸ್ತ್ರೀಯರನು ॥  
ಪರರಸ್ತ್ರೀಯರ ಮೋಹಮಾಡಿದ ರಾವಣನು ನಾಶಾದನು ॥  
ವರ ಮಹಾ ಬಲವಂತ ಕೀಚಕ ಭೀಮನಿಂ ತಾ ಮಡಿದನು ॥  
ದುಷ್ಟ ಪಾಪವಿದು ಸ್ತ್ರೀಯರ ನೋಡುವದು ॥

ಈರೀತಿ ಹಿರಿಯರು ಹಾಡಿದ ಹಾಡಿನ ಅರ್ಥವನ್ನಾದರೂ ಮಾಡಿಕೋ ಪುಟ್ಟಯ್ಯ. ಹೆಂಣಿಗಾಗಿ ಕುರುಕಲ ನಾಶವಾಯಿತು, ಹೆಂಣಿಗಾಗಿ ರಾಮನ ಜೀವ ಸಂಗಾಪಿ ಹೋಯಿತು. ಹೆಂಣಿಗಾಗಿ ಕಡದಾಟ; ಬೈಯ್‌ದಾಟ; ಹೊಡೆ ದಾಟಗಳಿಂದ ಜಗದಾಟ ಶಿವನಾಟವಾಗದೆ ಭವದಾಟವಾಗಿ; ಯಮನಕೂಟ ವಾಗಿ ಪರಿಣಮಿಸಿದೆ, ಹಾಳಾಗಿದೆ, ಹಾಳಾಗುತ್ತಲಿದೆ..... ಅಂತೇ ಶರಣರು ಹೆಂಣಿನಿಂದ ದೂರ ಬಹುದೂರ ಬರುತ್ತಿದ್ದರು;

ಹರಿವ ಹಾವಿಗೆ ಅಂಜೆ।
ಉರಿವ ನಾಲಿಗೆ ಗಂಜೆ।
ಸುರಿಗೆಯ ಮೊನೆಗಂಜೆ।
ಒಂದಕ್ಕಂಜುವೆ ಒಂದಕ್ಕಳಕುವೆ।
'ಪರಸ್ತ್ರೀ, ಪರಧನವೆಂಬೀ ಜೂಜಿಗಂಜುವೆ।
ಮುನ್ನಂಜದ ರಾವಣನೇ ವಿಧಿಯಾದ।
ನಾನಂಜುವೆನಯ್ಯ ಕೂಡಲ ಸಂಗಮದೇವ॥

ಜಗತ್ತಿನಲ್ಲಿ ಯಾವುದಕ್ಕೂ ಅಂಜದ ಬಸವ ಮಹಾತ್ಮನು ಈ ಹೆಂಣಿಗೆ ಅಂಜಿದ್ದಾನೆ, ಅಂಜಿ ದೂರ ಸರಿದಿದ್ದಾನೆ.

ಸಂಸಾರವೆಂಬುದು ಗಾಳಿಯ ಸೊಡರು।
ಸಂಸಾರವೆಂಬುದೊಂದು ಘಟಸರ್ಪ॥

ಎಂದು ತಿಳಿದು ಅಳಿದು ಹೆಂಣಗೂಡಿ ಸಂಸಾರ ಹೂಡಿ ಭವಗೂಡದೆ ಬಾಳಿ ಬೆಳಗಿದರು ನಮ್ಮ ಪುರಾತನರು

ಲಿಂಗ ಪತಿ ಶರಣ ಸತಿ।

" ಗುರುವಿನಿಂದ ದೀಕ್ಷಾಯುತನಾಗಿ ಲಿಂಗ ಪತಿಯನ್ನಾಗಿ 'ಸ್ವೀಕರಿಸಿ ದಂದಿನಿಂದ ನೀನು ಲಿಂಗಯ್ಯನ ಸತಿಯಾಗಿರುವಿ.... ನೀನು ಲಿಂಗಯ್ಯನ ಹೆಂಡತಿಯಾಗಿದ್ದು. ಹೆಂಡತಿಯ ಬಯಸುವ ನಿನ್ನ ವೃತ್ತಿಕಂಡು ರುಂಡಮಾಲ ನಗುವನಯ್ಯ " ಏನೀ ಅಸಮ್ಮಂದ ಅಸಹ್ಯ ವರ್ತನೆ!

ನೀನು ಬಲು ಮರುಳಾಗಿ ಹೆಂಣಿನ ಸುಖ ಬಯಸಿ ಗಿರ್ಕಿ ಹೊಡಿಯುತ್ತಿಯಲ್ಲ, ಅದರಲ್ಲಿ ಅದೆಂತು ಸೌಖ್ಯಕಂಡಿ? ಸೌಂದರ್ಯ ;ಕಂಡಿ?? " ಹೊರಗೆ ಚಂದ ಒಳಗೆ ದುರ್ಗಂಧ "

ಮನುಜ ನೀನೆಡೆ ವಿಡದನುದಿನವೆಳಸುವ;
ವನಿತೆಯೊಳೆನಿಸಲೊಂದಿನಿಸು ಲೇಸಿಹುದೆ॥?
ಮೊಲೆಯ ಮಾಂಸವನು ಮುಡಿಯುನವಿರನು ದೇಹ।
ದೆಲುವನು ಮುಸುಕಿದ ಪಸಿಯ ತೊವಲನು॥
ಪಲವಡೆಯಣನಕ್ಕವನು ಬೇರೆ ಬೇರೆ ನೀ।

ನಲಸದರಸಿ ನೋಡು ಲಲನೆ ಮೋಹನವೆ ॥
ಕರಣದೊಳಿಳಿವ ಮಲವನು ಕಾಂತಿಯೊಳು, ಮುಂ।
ಬರಿವ ಶೋಣಿತವನು ಪೊಸ ಜವ್ವನದೊಳು ॥
ಪರಿಣಾಮುವನು ಚಿತ್ತದೊಳು ಕಪಟವನು, ಬಿ ।
ತ್ತರಿಸಿ ಭಾವಿಸೆ ನಾರಿನಿನಗೆ ಶೋಭನವೆ ॥
ಪಡೆವ ಸಾಯುಸವನು ನಡೆವಲ್ಪ ಸುಖವನು ।
ಕಡೆಯನಿರಸವನು ಕೆಡುವತನುವನು ॥
ಬಿಡದೆ ಬರಿಯರಂಜನೆಯು ಸತಿರತಿಗಾಗಿ ।
ಕೆಡದಿರೆಲವೋ ಶಂಭುಲಿಂಗವನುಳಿದು ॥

" ನಿಜಗುಣ ಶಿವಯೋಗಿ "

ಲೇ ಮನುಜ ! ಹಗಲಿರಳು ಸ್ತ್ರೀಗಾಗಿ ಚಿಂತಿಸುತ್ತಿರುವಿಯಲ್ಲ, ಈ ಸ್ತ್ರೀಯಳಲ್ಲಿ ಏನೂ ಸುಖವಿಲ್ಲ, ಆನಂದವಿಲ್ಲ. ಮೊಲೆಯಲ್ಲಿ ಮಾಂಸ, ಹೊಲಸು ನಾರುವ ತಲೆಗೂದಲು, ಎಲಬು ರಕ್ತನಾಡಿ ನರಗಳಿಂದೊಡಗೂಡಿ ಮೇಲೆ ಚರ್ಮದ ಹೊದಿಕೆಯಾಗಿರುವ ದುರ್ಗಂಧ ತನುವು, ಇಂದ್ರಿಯಗಳಿಂದೀಚೆಗೆ ಸೋರುವ ಕೊಳೆಗಳು, " ಒಳಗೆ ಹೊಲಸು ಮೇಲೆ ಸೊಗಸು " ಈ ಸ್ತ್ರೀ ದೇಹ ನೆಚ್ಚಿದರೆ ನಿನ್ನ ಶರೀರ ಕೊಳೆತ ಹೊಲಸದಿಂದೊಡಗೂಡಿದ ಗಟಾರವಾಗಿ ಪರಿಣಮಿಸುವದು. ವರ ಸುಖವ ಕೊಡುವ ಈಶನನ್ನು ಪ್ರಾರ್ಥಿಸುವದು ಬಿಟ್ಟು ಈ ಹೇಶಿ ಸುಖಕ್ಕಾಶೆ ಮಾಡುವರೆ ಮೂಢಾ ! ಎಂದು ಹೇಳಿರುವ ನಿಜಗುಣ ಶಿವಯೋಗಿಗಳ ಮಾತನ್ನು ಸ್ಮರಿಸಿಕೋ ಪುಟ್ಟಯ್ಯ.

ಮೊಗವು ಕೊಳಕಿನ ಮನೆಯು
ತಿಗವು ತಿಪ್ಪಯಗುಂಡಿ
ಬಗೆದು ನೋಡಲು ಕಾಯ
ತೊಗಲ ಚೀಲವಿದಯ್ಯ
ಬಿಗಿದ ಮೊಲೆಗಳ ಗಂಟು
ಕಂಡ ನೆತ್ತರದಂಟು

ಎಂದು ಶರೀರದ ಕಿಲಬನ್ನು ಮಾರ್ಮಿಕವಾಗಿ ಹೇಳಿದ ವೇಮನಾರ್ಯನ ಮಾತು ನಿನ್ನ ಮನದಲ್ಲಿರಲ್ಲಿ ಪುಟ್ಟಾರ್ಯ.

ಎಲಬಿನ ತಡಿಕೆ
ಮೂತ್ರದ ಕುಡಿಕೆ
ಅಮೇಧ್ಯದ ಮಡಿಕೆ
ಮಲದ ದುರ್ಗಂಧದ ಕಿಡಿಕೆ
ಸುಡಲೀ ದೇಹದ ಸುಖವೇಕೆ !'

ಎಂದು ತನು ಹೇಯಾಳಿಸಿದ್ದಾಳೆ ವಿರಾಗಿಣಿ ಅಕ್ಕ ಮಹಾದೇವಿ ಇದನ್ನು ಮರೆತು ಈ ವಿಷಯಕ್ಕೆಳಸಿ; ಹೊಲಸು ತುಂಬುವ ಹುಳುವಗತ್ತಿಗೆ ತಾಳ ಹಾಕಬೇಡ ಪುಟ್ಟಯ್ಯ. "ಮೂತ್ರಾದಿ ನಾಳದಿಂದ, ಮಲಗಾಳದಿಂದ ರಕ್ತ ಮಜ್ಜಾಸ್ಥಿಗಳ ಮೇಳದಿಂದ, ದುರ್ಗಂಧಕೊಳಗಳಿಂದೊಡಗೂಡಿದ ಈ ಶರೀರವನ್ನು ಮೋಹಿಸುವದೆ?"

ಬಂದ ಯೋನಿಯನ್ನದೆ
ಉಂಡಮೊಲೆಯನ್ನದೆ

ತಾಯ್ತನದಲ್ಲಿ ಮಾಯ್ತನವ ಕಾಣುವ ವಿಷಯ ಲಂಪಟರನ್ನು ಜರಿದು ಮಾತನಾಡಿದ ಜೇವರಗಿ ಷಣ್ಮುಖಸ್ವಾಮಿಗಳ ಉಪದೇಶ ಜ್ಞಾಪಕದಲ್ಲಿರಲಿ.

ತೊಗಲೊಳಗೆ ತೊಗಲ್ಹೊಕ್ಕು
ತಗಲಿ ಬಂದವನೀನು
ಹಗಲಗಿತ್ತಿ ಮಾಯೆಯ
ಹೆಗಲನೇರುವದೇ ಮೂಢಾ ?

ಎಂದು ಕಾಮುಂಡಗಳನ್ನು ಕೆಣಕಿಸುವ ಕಡಕೋಳ ಮಡಿವಾಳ ಶಿವಯೋಗಿಗಳ ಅಮೃತವಾಣಿ ನಿನ್ನ ಮನದೇಣಿಯಲ್ಲಿರಲಿ.

ಈ ರೀತಿ ಸಾರಿದ ಮಹಾತ್ಮರ ನುಡಿ ಮುತ್ತುಗಳನ್ನು ಮರೆತು; ಮಾಯೆಯಲ್ಲಿ ಬೆರೆತು; ಹೆಂಣಗಾಗಿ ಕಣ್ಣಿಟ್ಟು ಸಂಣಾಗುವದ್ಯಾಕಯ್ಯ ಪುಟ್ಟಯ್ಯಾ ?

ಕಾಲನೆಂಬ ಜಾಲಗಾರನು ಕರ್ಮವೆಂಬ ಬಲೆಯ ಬೀಸು
ತಲಿ, ಸಂಸಾರ ಶರಧಿಯಲ್ಲಿಪ್ಪ ಸಕಲ ಪ್ರಾಣಿಗಳೆಂಬ ಮೀನು
ಗಳನ್ನು ಹಿಡಿದು ಕೊಲ್ಲುತ್ತಿದ್ದಾನೆ; ಹಳಿಯುತ್ತಿದ್ದ-
-ನೆಲೆ, ಕಾಮನೆಂಬ ಬೇಟೆಗಾರನು ಕಂಗಳ ತೋಡಿ

ನಲಿ, ಸಿಂದು ಕಳವಳದ ಬಾಣವನೆಸೆದು ಭವವೆಂಬ
ಜಲಿಯಲ್ಲಿ ಸಕಲ ಪ್ರಾಣಿಗಳನು ಕೆಡಹಿ
ಕೊಲ್ಲುತಿರ್ಪ್ಪಾನೆ ಮಾಯೆಯೆಂಬ ರಕ್ಕಸಿ, ಸ-
-ಕಲ ಪ್ರಾಣಿಗಳ ಸಾರವ ಹೀರಿ ಹಿಂಡಿ ಹಿಪ್ಪಿಮಾಡಿ
ಛಲದಿ ಉಃಪೆುದು ಊದುತ್ತಿರ್ಪ್ಪಾಳೆ. ಇಂತಿ ತ್ರಿವಿದಮುಖ-
ದಲ್ಲಿ ಕಾಡುವ ನಿಮ್ಮ ಮಾಯೆಯ ಗೆಲುವೊಡೆ ಆರಾಳ-
-ವಲ್ಲ ಅಖಂಡೇಶ್ವರ ನೀವು ಕರುಣಿಸದ ನ್ನಕ್ಕರ ॥

ಕಾಲ-ಕಾಮ- ಮಾಯೆಗಳ ತ್ರಿವಿದದಲ್ಲಿ ಸಿಕ್ಕು ಚಿತ್ರಹಿಂಸೆಗೆ ಬಲಿಯಾದ ಮನುಷ್ಯನ ಬಾಳು ಹಾಳು. ನಿಮ್ಮ ಮಾಯೆಯ ಗೆಲುವೊಡೆ. ನಿಮ್ಮ ಕರುಣೆ ಆಗತ್ಯ ಅಖಂಡೇಶ್ವರ! ಎಂದು ಬೇಡಿ ಶಿವನೊಲಿಸಿ; ಮಾಯೆಯನು ಮೀರಿ, ಭವವನು ಗೆದ್ದ ಜೀವರಿಗೆ ಷಣ್ಮುಖ ಶಿವಯೋಗಿಗಳ ಹಾದಿಹಿಡಿ.

" ಇರುಳು ಕಂಡ ಕಮರಿಯ ಹಗಲು ಬೀಳ್ವರೆ?

ತಿಳಿದುನೋಡು ಪುಟ್ಟಯ್ಯ. " ಕಾಮವುಳ್ಳವರಿಗೆ ಲಿಂಗಪ್ರೇಮವೆಲ್ಲಿ ಯದೋ ?- ಪುಟ್ಟಯ್ಯ!- " " ಹೆಂಣಿಗಿಚ್ಛೆಸುವವರೆ ಮೂಢಾ? ಇವನು ಕಂಣು ಕಿವಿ ಮೈಗಳಿಂ ಸೋಂಕಬೇಡ" "ಕಾಯಕಾಂತಾರವ ಹೊಕ್ಕು ಬೇಟೆಯನಾಡಿ, ಮಾಯಾ ಮೋಹದ ಮೃಗಗಳ ಕೊಲ್ಲಿರೋ "–

ಎಲ್ಲ ಆಶೆಯ ಬಿಟ್ಟರಿಲ್ಲಿಯೆ ಕೈಲಾಸ
ಎಲ್ಲವನು ಬಯಸಿ ಭ್ರಮಿಸಿದರೆ ನರಕ ತಾ-
ನಿಲ್ಲಿಯೇ ನೋಡ ಸರ್ವಜ್ಞ ॥

ಎಂದು ಹೇಳಿದ ಸರ್ವಜ್ಞನಂತೆ ಮಹಾಯೋಗಿ ಮನ್ಮಥ ಸ್ವಾಮಿಗಳು ಹೀಗೆ ಹೇಳುತ್ತಾರೆ.

ಭವರೋಗ ಜಾಮಜೇಣಂ।
ಐಸೇ ರಸಾಯುನ ಘೇ ಣೇಂ॥
ನಕಾ ಜಾಪೂ ಆಡಪಾಟಿ।
ಖೋಟೀ ಸರ್ವ ಉಪಾಯ॥
ತುಮ್ಹಾಂ ಸಾಂಗತೋ ಸ್ವಹಿತ।

ಶೀವಾ ಚಿತ್ತಯಾ ಬೋಲಾ ॥
ನಾಮ ಮಾತ್ರ ಪ್ರೇಮಂತರಸೇ ।
ಘೇತಾ ನಾಸೇ ಭವರೋಗ ॥
ಮನ್ಮಥಮಷ್ಟುಣೆ ಸುಖೀಹೋಯಿ ।
ಸುಖೀ ಶಂಕರ ಹೇಗಾಯಿ ॥

ವ್ಯರ್ಥವಾದ ಈ ವಿಷಯಗಳನ್ನು ತಪಿಸುವದಕ್ಕಿಂತ ಶಿವನಾಮ ಜಪ ಮಾಡು ! ಅಂದರೆ ಮಾಯೆ ಹರಿದು ಭವ ಜರಿದು ಹೋಗುತ್ತದೆ.

ಎನ್ನ ಕೇಡಿಂಗೆ ಕಡೆಯಿಲ್ಲ ।
ಕಾಯ ವಿಕಾರವೆಂಬ ಕತ್ತಲೆ ಕವಿಯಿತು
ಮನೋ ವಿಕಾರವೆಂಬ ಹುಚ್ಚುನಾಯಿಗಳು ಕಚ್ಚಿ ಒದರುತ್ತಿವೆ ।
ಇಂದ್ರಿಯ ವಿಕಾರವೆಂಬ ಕಾಳರಕ್ಕಸಿ-
ಅಗಿದಗಿದು ನುಂಗುವಳು ।
ಕಾಯಲಾಗದೆ ದೇವಾ ! ಅನ್ಯ ಸಮಯದ
ಗುಮ್ಮಟನ ಕೈವಿಡಿದೆತ್ತಿಕೊಂಡೆ ।
ನಿನ್ನ ಸಮಯದ ಶಿಶು ಬಾವಿಯಲ್ಲಿ
ಬೀಳ್ವುದು ನೋಡುತಿಪ್ಪರೆ ಕರುಣೆ
ಘನಲಿಂಗಿ ಮೋಹದ ಚನ್ನಮಲ್ಲಿಕಾರ್ಜುನ ॥

ಎಂದು ಹಲುಬಿದ ಘನಲಿಂಗ ದೇವನ ಘನತೆಯನ್ನು ಅರಿತುಕೋ, ಕಲೆ ತುಕೋ

ಸಂಸಾರವೆಂಬ ವಿಷವೃಕ್ಷಕ್ಕೆ
ಪಂಚೇಂದ್ರಿಯಂಗಳೇ ಶಾಖೆಗಳು,
ಪಂಚಕ್ಲೇಶಂಗಳೇ ಫಲಗಳು,
ಪಂಚ ವಿಷಯಂಗಳೇ ರಸವು,
ಆ ಫಲವು ಬಯಸಿ ಮೆದ್ದವರೆಲ್ಲ ಮರಣಕ್ಕೊಳಗಾದರು
ಅದನರಿದು !

ಆಫಲವ ನಾನು ಮುಟ್ಟೆನು ಕಾಣಾ-
ನಿಜಗುರು ಸ್ವತಂತ್ರ ಶಿದ್ಧಲಿಂಗೇಶ್ವರ ॥

ಎಂದು ಸಾರಿದ ಶಿದ್ಧಲಿಂಗೇಶ್ವರರ ವಚನವರ್ಥ ಮಾಡಿಕೋ.

ಪರತರ ಸುಷಟ್‌ಸ್ಥಲ ಬ್ರಹ್ಮ ಸ್ವರೂಪ ನಿಜ ।
ಶರಣ ತಾಪ್ಪ ತನನಘುನಪ್ರತಿಮ ಘನಮಹಿಮ ।
ಸುರುಚಿರ ಶಿವಜ್ಞಾನಿ ಕರ್ಮ ಪಾಶಚ್ಛೇದಿ ಸಂಸಾರ ಮಹಾಪಾಪದಂ
ದುರಿತ ವಾರಿಪ್ರಸ್ಥ ತುಲಸೋಘ ಝುಂಝಾವಾತ ।
ಸರಸ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನ ।
ಪರಮ ಸದ್‌ಭಕ್ತಾಂ ತರಂಗ ತೋಂಟದ ಸಿದ್ಧಲಿಂಗ ಕರುಣಾ-
-ಪಾಂಗನು (ಗು. ರಾ. ಜ.)

ಪತ್ನಾಯೆಂಬುದನು ಮೆಟ್ಟಿ, ಕಾಯ ವಿಷಯಗಳನಟ್ಟಿ, ಸಾಯುಪವಕಟ್ಟಿ, ಶಿವನಾಯತವ ತಟ್ಟಿ, ನಿರಕ್ತಾಲಯ ಮುಟ್ಟಿ ಮೆರೆದ ಶಿವಯೋಗಿ ಪುಂಗವ ತೋಂಟದ ಸಿದ್ಧಲಿಂಗ ಗುರುದೇವನ ಮುಖಚಿತ್ರ ನಿನ್ನ ಹೃದಯ ಪಟಲದಲ್ಲಿ-ರಿಸಿಕೊಂಡು ವಿಷಯಾನು ರತಿಯಿಂದ ವಿರಹಿತನಾಗು ! ವಿರತಿಯನ್ನು ಹೊಂದು ಪುಟ್ಟಯ್ಯ.

ಲಿಂಗ ಜಾರಿಗೆ ಮೆಚ್ಚಿ ಮರುಳಾ
ಗಂಗಭಾವವ ತೊರೆದು ಕೃತ್ಯವ
ಹಿಂಗಿ ತೊರಗದು ಮೆರೆವ ಸುಖವದು ಎಂದಿಗಾದಪುದೋ ?

ಎಂದು ಕಳವಳಿಸಿ, ಕಾಲಕರ್ಮ-ಮಾಯೆಯನು ಮೀರಿ ಮಹಾತ್ಮನಾಗಿ ಮೆರೆದ ಮುಪ್ಪಿನ ಷಡಕ್ಷರ ಶಿವಯೋಗಿಗಳ ಜೀವನವನ್ನು ಸ್ಮರಿಸಿಕೋ.

ಬೇಡ ಬೇಡ ಭೋಗ ದೊಡನಾಟ ।
ನೋಡು ನಂಜುವೆರೆಸಿದ ಸವಿಯೂಟ
ಕೇಡು ಕಡೆಯೊಳಪುದು ಮಾಯೆಯ ಕೈಯಾಟ ।

ಎಂದು ಉಪದೇಶಿಸಿದ ನಿಜಗುಣರ ಬೋಧೆ ನಿನ್ನ ಬಾಳಿನ ಬುನಾಧಿಯಾಗಿರಲಿ ಪುಟ್ಟಯ್ಯ.

ಇಂತಪ್ಪ ಭವಶಾಲೆಯೊಳಗೆ ಬಂದೇಂ ದೇವ ?
ಇಂತಿಂತು ಸತ್ತು ಪುಟ್ಟುತ್ತಿಪ್ಪುದ್ದೇಂ ದೇವ ?
ಜನಿಯಿಸುವ ಕಷ್ಟವಿದು ಬದುಕುವ ನಿರೋಧವಿದು
ಅನುಗೆಟ್ಟು ಸಾವ ಸಂಕಟದೊಂದವಸ್ಥೆಯಿದು ॥

ಸಂಸಾರಕ್ಕೊಳಗಾದರೆ, ಮಾಯಾ ಮೋಹಿತರಾದರೆ ಸತ್ತುಹುಟ್ಟುವ ಭವಬಾಧೆ ತಪ್ಪಿದ್ದಲ್ಲವೆಂದು ಹೇಳಿದ ಹರಿಹರನ ಮಾತು ನಿನ್ನ ಹೃದಯದಲ್ಲಿ ಮುತ್ತಾಗಿರಲಿ.

ಸ್ಮರಕಾಲ ಮಾಯಾದಿಗಳ್ಗೆಡೆ ಪದದೊಳ್ತೊ-
ದರಸಿಕ್ಕಿ ಡಂಗುರಂ ಜೋಯ್ಸಿನವರ್ತಿಸುವವಂ
ಹರ ಮಂತ್ರ ಸಿದ್ಧಂ ॥

ಎಂದು ಗಂಭೀರ ವಾಣಿಯಿಂದ ನುಡಿದ ಗಂಡುಗಲಿಗವಿ ಹರಿಹರನ ಬ್ರತ ಚಾರಿತ್ರವನ್ನು ಸ್ವೀಕರಿಸಲನುವಾಗು ಪುಟ್ಟಯ್ಯ.

ಇಂದ್ರಿಯಸಿಕರಂಗಳಂ ಲಿಂಗಮುಖಮಂ ಸಕಲ
ಸುಖ ಪರಿಣಾಮಮಂ ಲಿಂಗ ಮುಂತಾಗಿ
ಸುಖಿಪುದೈವತ್ತಾರನೆಯ ಶೀಲ ॥

ಎಂದು ಸಾರಿದ ಶೀಲ ಶಿಖಾ ಚಕ್ರವರ್ತಿ ಸೋಮನಾಥನ ನುಡಿ ನಿನ್ನೀ ದೇಹಗರಡಿಯಲ್ಲಿರಲಿ.

ಕಂಗಳ ಮುಂದಣ ಕಾಮುವಕೊಂದು
ಮನದ ಮುಂದಣ ಆಶೆಯ ತಿಂದು ॥
ಆತನನರಿ- ಆತರ ವೈರಿ ಮಾರೇಶ್ವರನ ॥

ಎಂದು ಹೇಳಿದ ಕಾಮಾರಿ ಮಾರಿ ತಂದೆಗಳ ವಚನ ನಿನ್ನ ನೆನಹಿನ ಗಡ ಗಿಯಲ್ಲಿ ಅರಿವಿನಗ್ನಿಯಿಂದ ಕುದಿಯಲಿ–

ಕಾಯದ ಗುಣದಲ್ಲಿದ್ದು ಕರಣಂಗಳಂ ತಿಳಿಯದಿರ್ದರೆ ।
ಕಾಯದ ಲೇಸು. ಇಂದ್ರಿಯಂಗಳ ಸಂಸರ್ಗದಲ್ಲಿದ್ದು ।
ಮುಟ್ಟುವ ಸಂಗವ ಬಲ್ಲಡೆ ಆಗುಣದಲ್ಲಿದ್ದು
ಅರಿವುದೇ ಲೇಸು. ಸಗರದ ಬೊಮ್ಮನೊಡೆಯ
ತನುಮನ ಸಂಗಮೇಶ್ವರ ಸಂಗವು ಕೂಡಿ
ಕೂಟಾದ ಮೇಲೆ ಕಾಮದ ಹಂಗೇಕೊ ಅಂಜಿಕೇಕೊ ॥

ಎಂದು ಸಾರಿದ ತನು (ಬವ) ರೋಗವೈದ್ಯನಾದ ಸಗರದ ಬೊಮ್ಮಾರ್ಯನ ಆರ್ಯವಾಣಿ ನಿನ್ನ ಮನದಿ ಬಮ್ಮಾಗ್ರಿರಲಿ.

ಕೈದು ಮನದೊರುವದಕ್ಕೆ ಮೊದಲೇ
ಕಟ್ಟಬೆಲ್ಲಡೆ ಕೈದುವೇನು ಮಾಡುವದು ?

ಹಾವು ಬಾಯಿ ಬಿಡುವುದಕ್ಕೆ ಮೊದಲೇ
ಹಿಡಿದ ಮತ್ತೆ ವಿಷಯವೇನು ಮಾಡುವದು ?
ಮನ ವಿಕಾರಿಸುವದಕ್ಕೆ ಮೊದಲೇ
ಮಹದಲ್ಲಿ ನಿಂದ ಮತ್ತೆ ಇಂದ್ರಿಯಂಗಳೇ-
-ನು ಮಾಡಲಾಪವು ಜಾಂಬೇಶ್ವರ ?

ಮುಂಜಾಗ್ರತೆಯ ರಾಯಸದ ಮುಂಚಣ್ಣಗಳ ಮರ್ಮವಾಣಿ ನಿನ್ನ ಕರ್ಣ ದಲ್ಲಿ ಮಿಣುಕಾಡುತ್ತಿರಲಿ.

ಎನ್ನ ಕಷ್ಟ ಕುಲಜ ಸೂತಕ ನಿಮ್ಮ ಹಸ್ತ ಸ್ಪರ್ಶದಿ ಹೋಯ್ತು !
ತಟ್ಟಿ ಮುಟ್ಟಿದ ಸುಖಂಗಳೆಲ್ಲ ಲಿಂಗಮುಖಕ್ಕರ್ಪಿಸಿದೆನಾಗಿ।
ಎನ್ನ ಪಂಚೇಂದ್ರಿಯಗಳು ಬಯಲಾದವು।
ಎನ್ನಂತರಂಗದಲ್ಲಿ ಜ್ಞಾನಜ್ಯೋತಿಯೆಡೆಗೊಂಡುದಾಗಿ।
ಎನ್ನೊಳಗೂ ಬಯಲಾಯ್ತು. ಸಂಸಾರದ
ಸಂಗದ ಅವಸ್ಥೆಯ ಮೀರಿದ ಕ್ರಿಯೆಯಲ್ಲಿ ತರಹಲವಾಯಿ
ತ್ತಾಗಿ ಬಹಿರಂಗ ಬಯಲಾಯ್ತು. ಅಭಿನವನ ಮಲ್ಲಿಕಾ-
ರ್ಜುನ ನಿಮ್ಮ ಮುಟ್ಟಿದ ಕಾರಣ ನಾನೂ ಬಯಲಾದೆ ॥

ಅಂಗದಲ್ಲಿ ಜ್ಞಾನಜ್ಯೋತಿಯನ್ನು ಬೆಳಗಿಸಿ ಅಂಗಗುಣಾಂಧಃಕ್ಕಾರವನ್ನು ಬಯಲುಮಾಡಿ ಲಿಂಗವ ನೆರೆನಂಬಿ ಕಡೆಗೆ ತಾನೆ ಲಿಂಗದಲ್ಲಿ ಬಯಲಾದ ಮಹಾ ಮಹಿಮ ಡೋಹರ ಕಕ್ಕಯ್ಯನ ಕಕ್ಕುಲತೆಯ ಮಾತು ನಿನ್ನಲ್ಲಿ ಮುಕ್ಕಾಗದೆ ದಕ್ಕಲಿ.

ಕೋಲೊಂವರಳಿ ಹಲವು ಕುಲದ ಗೋವುಗಳ
ಚಲಿಸದೆ ನಿಲಿಸುವಂತೆ, ಏಕಚಿತ್ತನಾಗಿ ಸರ್ವವಿಕಾರ
ಗಳ ಕಟ್ಟುವಡೆದು, ಇಂದ್ರಿಯಂಗಳ ಇಚ್ಛೆ
ಯಲ್ಲಿ ತ್ರಿವಿಧವ ಹಿಡಿದಿರುಹುವರ ಸಂದಿಯಲ್ಲಿ ಸು
ಳುಳದೆ ವಸ್ತುವಿನ ಅಂಗದಲ್ಲಿಯೇ ತನ್ನಂಗ
ತಲ್ಲೀನ ವಾಗಿಪ್ಪುದೇ ಮಹಾ ನಿಜದ
ನೆಲೆ ಗೋಪಿನಾಥ ವಿಶ್ವೇಶ್ವರ ಲಿಂಗವರಿವಕ್ಕೆ ಇದೇ ಬಟ್ಟೆ ॥

ಎಂದು ಕಂಡಾಡಿದ ನುಡಿಗಡಣ ನಿನ್ನ ಒಡಲ ಮಂದಿರದಲ್ಲಿ ಭದ್ರ-ವಾಗಿರಲಿ.

ಹೊರಗಣ ಮಲತ್ರಯಕ್ಕೆ
ಒಳಗಣ ಅರಿವೆ ಸೀಡಾಡಲೇಕೆ
ಅಲ್ಪ ಸುಖಕ್ಕೆ ಮೆಚ್ಚಿ ಕುಕ್ಕುರನಂತೆ ಸಿಕ್ಕಿ
ಸಾಯಲೇಕೆ ನಿಶ್ಚಯವಾಗಿ ಚಿಕ್ಕಯ್ಯ
ಪ್ರಿಯ ಸಿದ್ಧಲಿಂಗವನರಿಯ ಬಲ್ಲಡೆ ?

ಎಂದು ನೀಡಿದ ನುಡಿಸಾಕವನ್ನ ನಿನ್ನ ತನು ಪಾತ್ರೆಯಲ್ಲಿ ಸತ್ ಪಾತ್ರವಾಗಿರಲಿ.

ಕಾಯ ಜೀವವನರಿದೆನೆಂಬವರೆಲ್ಲರೂ
ಹೋದರಲ್ಲಾ ಹೊಲಬುದಪ್ಪಿ !
ಹೊನ್ನು ಹೆಂಣು ಮಣ್ಣಿಗೆ ಹೋರಿಯಾಡುವರೆಲ್ಲರು !
ಬಸವಂಣನ ಬಾಗಿಲಲ್ಲಿ ಬಂಧಿತರಾಗಿ ನೊಂದವರಿಗೇಕೆ
ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ? ಇಲ್ಲ ಇಲ್ಲವೆಂದೆ!

ಎಂದು ಬೋಧಿಸಿದ ವೈರಾಗ್ಯ ನಿಧಿ ಘಟ್ಟಿವಾಳಯ್ಯನವರ ಶ್ರೇಷ್ಠ ವಾಣಿ ನಿನ್ನಂತರಗದಿ ಗಟ್ಟಿಯಾಗಿರಲಿ. ಬ್ರಹ್ಮಚರ್ಯ ವಿರತಿಯ ಜೀವನ ಮುಕ್ತಿಯ ಸೋಪಾನ ವೆಂದು ಉಪದೇಶಿಸಿದ ಗುರುದೇವ ಹಾನಗಲ್ ಯೋಗಿಯ ಬೋಧೆ ನಿನ್ನ ಹೃದಯ ಬಾಂದಳದಲ್ಲಿ ಚೆಂದಿರನಂತೆ ಬೆಳಗಲಿ !

ಹೊನ್ನು ಹೆಂಣು ಮಣ್ಣು ತನ್ನದೆಂಬುವ ಮೂರ್ಖ
ಹೊನ್ನು ಭೂಪಾಲರಿಗೆ ಹೆಂಣೊಲಿದ ಕಾಮುಕಗೆ
ಮಂಣು ಬಲವಂತಂಗಲ್ಲದೆ ಬರಿಯ
ಭ್ರಾಂತಿಯಲಿ ಕಂಣುಗೆಟ್ಟರೆ ಬರುವದೇ ?
ಎನ್ನ ಧನಜ್ಞಾನವೆಂಬಾಗಮದ ವಚನವಿನ್ನರಿದುಕೋ
ಕಂಣಿಲ್ಲದ ನಿನಗೆ ಈ ಮೂರು ಒಲಿಯುವದೆ ?
ಒಲಿತರೆ ಏಕ್ಕುವದೆ ? ಮೂಢಾ ?

ಕಂಣಿದ್ದವರ ಕಂಣಲ್ಲಿ ಕಂಣಿರಿಸಿ ಪತಿಯಾದವನನ್ನು ಕುನ್ನಿಗಿಂತಲೂ ಕಡೆಗಿರಿಸಿ ತನ್ನ ಸ್ವೇಚ್ಛೆಯಲಿ ವರ್ತಿಸಿ ಹೆಂಣಿನಧರ್ಮ ಮರೆತು ತಿರುಗುವ ಹಾದರದ ಹೆಂಣುಗಳ ಈ ಪ್ರಪಂಚದಲ್ಲಿ ಕಂಣಿಲ್ಲದ ನಿನ್ನೊಡನೆ ನನ್ನಿಯಿಂದೊಲಿಯಬಹುದೇನೋ ?

ಸಂಸಾರ ಬಿಟ್ಟುದೇ ಆಚಾರವಯ್ಯಾ;
ಕಾಯದಿಚ್ಛೆಗೆ ಕಂಡವರಿಗೆ
ಕಾರ್ಪಣ್ಯ ಬಡದಿಪ್ಪುದೇ ಶಿಲ; ಸಿ:
ಕಾಯ ಸಕಳೇಶ್ವರ

ಈ ರೀತಿಯುಸಿರಿದ ನುಡಿಗುಸಿರು ನಿನ್ನ ಮನದಗಸಿಯಲ್ಲಿ ಮಿಸುನಿಗುಡಿಯಾಗಿರಲಿ; ಸಕಳೇಶ ಮಾದರಸ ಮೂರ್ತಿ ಪೂಜಾಯ ಮಾನವಾಗಿರಲಿ.

ಕಾಯಕವೇ ಕೈಲಾಸ
ಮಾಯೆ ಕೊಲ್ಲುವ ಕೆಲಸ ।
ಆಯು ಬೆಳೆಸುವದಕೆ ।
ಸಾಹಸವು ಜಗದೊಳಗೆ ।
ಹೇಯ ಸಂಸಾರ ನೀಗುವದಕೆ ॥

ಈ ರೀತಿ!ಬಿತ್ತರಿಸಿದ ಮಹಜ್ಞಾನಿ ಮಾದಯ್ಯನ ಮಾತ್ ಮುತ್ತು ಒತ್ತಾಗಿರಲಿ ನಿನ್ನ ಮನದಿ.

ಅಯ್ಯಾ; ನಿಮ್ಮಲ್ಲಿ ಆಯುವ ಬೇಡುವೆನೆ ?
ಸಂಸಾರಕ್ಕೆ ಅಂಜುವೆ ।
ಅಯ್ಯಾ ! ನಿಮ್ಮಲ್ಲಿ ಸ್ತ್ರೀಯ ಬೇಡುವೆನೇ ?
ಪರಾಂಗನೆಯ ಪಾಪ !

ಈಶ್ವರೀತಿ ಸಾರಿ ಬೀರಿದ ಮಾದರಸರ ವಚನ ಹಾಡು ನಿನ್ನ ಹೃದಯದೇವ ಸದಾ ಹಾಡುತಿರಲಿ.

ವೈರಾಗ್ಯದ ಸೋಪಾನದಿಂದ ಶ್ರೀಗಿರಿಯ ನೇರಿದೆ ।
ಕೈವಿಡಿದು ಕರೆದುಕೊಳ್ಳಾ ಚನ್ನಮಲ್ಲಿಕಾರ್ಜುನಾ ॥

ಎಂದು ಉಪದೇಶ ಮಾಡಿದ ಅಕ್ಕನ ವೈರಾಗ್ಯದಲರು ನಿನ್ನ ವೈಯ್ಯಾರದ ತನುವಲ್ಲಿ ವೈರಾಗ್ಯದ ಬೀಜಬಿತ್ತಲಿ.

ತಾಮಾಡಿದ ಹೆಂಣು ತನ್ನ ತಲೆಯನೇರಿತ್ತು ।
ತಾಮಾಡಿದ ಹೆಂಣು ತನ್ನ ತೊಡೆಯನೇರಿತ್ತು ।
ತಾಮಾಡಿದ ಹೆಂಣು ಬ್ರಹ್ಮನನಾಲಿಗೆಯನೇರಿತು ।
ತಾಮಾಡಿದ ಹೆಂಣು ನಾರಾಯಣನ ಎದೆಯನೇರಿತ್ತು ।
ನೀನ್ಯಾತರದವನೆಲೆ ಮಾನವ ಹೆಂಣನಂಬಲು ।
ನನ್ನೆಯಿಂ ಬಜಿಸು ಶಾಂತ ಚನ್ನಮಲ್ಲಿಕಾರ್ಜುನ ॥

ಎಂದು ಮನ ಮುಟ್ಟುವಂತೆ ಹೇಳಿದ ಮರುಳ ಶಂಕರ ದೇವರ ವರಸುಡಿ ನಿನ್ನ ಹೃದಯಾಗರದಲ್ಲಿರಲಿ.

ಸಂಸಾರವೆಂಬ ಹೆಣ ಬಿದ್ದರೆ ಶಿವ !
ಬಂದ ನಾಯಿ ಜಗಳವ ನೋಡಿರೆ !
ನಾಯಿ ಜಗಳವ ನೋಡಿ ಹೆಣವೆದ್ದು ನಗುತ್ತಿದೆ !
ಗುಹೇಶ್ವರನೆಂಬ ಲಿಂಗ ಅಲ್ಲಿಲ್ಲ ಕಾಣಿರೆ !

ಎಂದು ಮನ ಮರಗುವಂತೆ, ಸಂಸಾರ ವಿಷಯ ಕರಗುವಂತೆ ಪರಮ ಗುರು ಅಲ್ಲಮಪ್ರಭುದೇವರ ದಿವ್ಯವಾಣಿ ನಿನ್ನ ಹೃದಯದಲ್ಲಿ ವೇದ್ಯವಾಗಿರಲಿ

ವಿಷಯವೆಂಬ ಹಸುರೆನ್ನ
ಮುಂದೆ ತಂದು ಪಸರಿಸದಿರಯ್ಯ
ಪಶುವೇನು ಬಲ್ಲದು ?
ಹಸುರೆಂದೆಳೆಸುವದು ! ಕೂಡಲಸಂಗಯ್ಯ !!

ಎಂದು ತೋರಿದೋರಿ ಬೀರಿದ ಬಸವಣ್ಣನವರು ನಿಸ್ಸಂಸಾರಿಯಾದ ಗತಿಯ ತಿಳಿಸಿದ್ದಾರೆ ಅವರ ಮತಿಯಗತಿಯನ್ನು ಅಳೆದು ನೋಡೋ ಪುಟ್ಟಯ್ಯ !

ಹಾವಿನ ಬಾಯಲ್ಲಿ ಸಿಕ್ಕ ಕಪ್ಪೆ !
ಹಾರುವ ನೊಣಕ್ಕಾಶೆ ಮಾಡುವಂತೆ !

ಎಂದು ! ನಿಮ್ಮಂಥ ವಿಷಯ ಮೋಹಿಗಳ ಕುರಿತು- ಮೃತ್ಯುವಿನ ದವಡೆಯಲ್ಲಿ ಸಿಕ್ಕು, ಅದನ್ನರಿಯದೆ ಅಜ್ಞಾನಿಯಾಗಿ ಮಾಯಾ ಮೋಹಕ್ಕೆ ಹಲುಬಿ ನಿಶ್ಚಿತ ಶಿವಸುಖವನ್ನು ಮರೆದರೆ. ಕಪ್ಪೆಯ ಸ್ಥಿತಿಯಂತಾಗುವದು ಎಂದು ಸಾರಿದ್ದಾರೆ ಷಣ್ಮುಖ ಸ್ವಾಮಿಗಳು.

ಇದನ್ನರಿತು ಹೆಂಣಿನ ಬಂಣನೆಗೆ ದಿಂಣನೀಯದೆ ಮಾಯೆಗೆ ಕಂಣಿತ್ತು, ಮೋಹಕ್ಕೆ ತನುವಿರಿಸಿ, ಕಾಮಕ್ಕೆ ಮನವಿರಿಸಿ ವಿಷಯಲಂಪಟನಾಗಿ ಭವ-ಭಾಧೆಯಲ್ಲಿ ಬಳಲಿ ಬೆಂಡಾಗಬೇಡ, ಭೆಂಡ ಜೀವಿತನಾಗಬೇಡ. ರುಂಡ ಮಾಲಾನ ನೆನೆಯುವದು ಬಿಟ್ಟು ರಂಡೆಯರ ಸಂಭೋಗದಿ ಮುಂಡ ವಿರಿಸಿ ಜೊಂಡಿನಲ್ಲಿ ಬಿದ್ದು ಹೊರಳಾಡುವ ಹಂದಿಜೀವ ತೇಯಬೇಡ, ಬಂಡಾಟದಲ್ಲಿ ಬೀಳಬೇಡ.

ಅಸಂತೋಷ ಅತೃಪ್ತಿಗಳಾಗಾರ ಈ ಸಂಸಾರ
ಅನಾಗರಿಕತೆಯ ಅಪಾರ ಈ ಮಾಯದಾಕಾರ
ಅಧರ್ಮದವತಾರ ಈ ಪೆಂಣಿನ ಮೋಹಾಗಾರಾ
ಹೆಂಣಿನಾಶೆಗೆ ಕಂಣಿಟ್ಟು
ಸಂಣಾಗುವದ್ಯಾಕೋ
ಕುನ್ನಿಯಂತೆ ಹೆಂಣಿನ
ಬೆನ್ನು ಹತ್ತುವದ್ಯಾಕೋ

ಮಲೀನವಾದ ಮಾಯಾ ಮಡಲಲ್ಲಿ ದಿಡವಿರಿಸಿ ಕುಲೀನ ಸ್ತ್ರೀಸಂಗದೊಡಲ ಬಯಸುವದೆಂದರೆ ಕುರುಡನಾದ ನಿನಗೆಷ್ಟೂ ಶೋಭಿಸುವದಿಲ್ಲ-

ಎಲಬು ಕಡಿಯುವ ಸ್ವಾನಗೆ ತನ್ನೆಂ-
ಜಲವೇ ತನಗೆ ಸವಿಯುಪ್ಪು
ಜಲ್ಲವೇ ಆ ಎಲಬಿನಲ್ಲಿ ಸವಿ
ಯಿಲ್ಲ ವಿದರಂತೆ ನೀ ಬಯಸಿದ
ಲಲ್ಲೆಯ ದೇಹಸುಖವಿರುವದು. ತಿಳಿಯೋ
ಖುಲ್ಲ ಮಾನವ ಲಲ್ಲೆಯ ಜರಿದುದೂರವಿರು,

ತೊಗಲು,ಮಾಂಸ,ಖಂಡ, ನೆತ್ತರ, ನರ, ಎಲಬುಗಳಿಂದ ಮಲೀನವಾದ, ಮಲಮೂತ್ರಾದಿಗಸಿಗಳಿಂದ ಹೇಶಿಯುತವಾದ ಈ ಕೊಳಕು ದೇಹದ ದಾಹದಲ್ಲಿ ದೇಹವಿರಿಸಿದರೆ ಮೋಹದೆಂಣಿನ ದಾಸನಾಗಿ ಆಕೆಯ ದೇಹದ್ದ ಸಿಯನ್ನು ತೊಳೆ ಯಲೊಮ್ಮೆ ಅಣಿಯಾಗುವದು ಶತಶಿದ್ಧ. ಹುಚ್ಚುಮನಸಿನ ಬೆನ್ನುಹತ್ತಿ ನಿಚ್ಚ ಶಿವರಾತ್ರಿಯ ಸುಖಬಿಟ್ಟರೆ ಹುಚ್ಚುನಾಯಿಯಂತೆ ನೀನು ನಂಬಿದ ವಿಷಯೇಂ-ದ್ರಿಗಳೇ ರೊಚ್ಚಿಗೆದ್ದು ಕಚ್ಚಿ ಕೊಲ್ಲುತ್ತಿವೆ, ಸಾವಿನ ದವಡೆಯಲ್ಲಿ ಚೆಲ್ಲುತ್ತಿವೆ.

ತಾಳಿ ಕಟ್ಟಿದ ಗಂಡಸರ ಕೈಯಿಂದ ಹಾಸಿಗೆ ಮಾಡಿಸಿಕೊಂಡು, ಯಾವು ದಾದುರೊಂದು ನೆವ ಮುಂದೆ ಮಾಡಿ ಗಂಡನನ್ನು ಹೊರನೂಕಿ; ಮಿಂಡನನ್ನು ಕರೆಸಿ; ರಮಿಸಿ ಮತ್ತಚಿತ್ತರಾಗುವ ರಂಡೆಯರ ಭಾಂಡಾರ ಈ ಭೂಮಂಡಾರ. ಇಂಥಹದರಲ್ಲಿ ಕುರುಡನಾದ ನಿನಗೆ ಒಲಿದುಬಂದ ಹೆಂಡತಿ, ಹೆಂಡತಿಯಾಗಿ ವುಳಿಯದೇ ರಂಡೆಯಾದರೆ ನಿನ್ನ ಪಿಂಡಕ್ಕೆ ಕೆಂಡವಿಟ್ಟಂತಲ್ಲವೆ ? ಪುಂಡಗಂಡನ ಕಂಣು ತಪ್ಪಿಸಿ ರಂಡೆಯಾಟ ನಡೆಸುವ ಹೆಂಡಂದಿರಿರುವ ಈ ಕಾಲಗತಿಯಲ್ಲಿ

ನಿನಗೆ ಹೆಂಡತಿಯಾದವಳು ನಿನ್ನ ಕುರುಡ ದೇಹದ ಮುಂಭಾಗದಲ್ಲಿ ಕಾಮನಾ ಟವಾಡ ಹತ್ತಿದರೆ ನೀನೇನು ಮಾಡುವಿ ?

ನೋಡು ಪುಟ್ಟಯ್ಯ ! ವಿಚಾರಿಸದೇ ದುಡುಕಬೇಡ: ಮಡಿಕಿ ಕೆಡಬೇಡ.

ಎಂದು ದೀರ್ಘವಾದ ಉಪದೇಶ ಮಾಡಿದರು; ಗುರುವರ್ಯ ಪಂಚಾಕ್ಷರರು.

ಆಗ ಪುಟ್ಟಾರ್ಯ ಗಡಗಡ ನಡುಗುತ್ತಾನೆ............ ಮಾಯೆಯ ಅಕರಾಳ ಚಿತ್ರವನ್ನು ಕಂಡು ಭಯಗುಟ್ಟುತ್ತಾನೆ. ಹೆಣ್ಣಿನ ಗತಿ ತಿಳಿದು ಸ್ಥಿರ ಮತಿಯುವನಾಗಿ ಗುರುವೆ ! ನನ್ನನ್ನು ಕ್ಷಮಿಸಿರಿ. ಎಂದು ಗುರುಗಳ ಪಾದಗಳಲ್ಲಿ ಭಯ ಭಕ್ತಿಯುತನಾಗಿ ಮಣಿಯುತ್ತಾನೆ. ಇಂದಿನಿಂದ ನಾನು ಮಾಯೆಯನು ಮೀರಿ, ಭವಜಾರಿ ಹೋಗುವ ವಿರತಿ ಜೀವನ ಸಾಗಿಸುತ್ತೇನೆ; ಕಡು ಬ್ರಹ್ಮಚಾರಿಯಾಗುತ್ತೇನೆ. ಎಂದು ಪಾದಮುಟ್ಟಿ ಪ್ರತಿಜ್ಞೆ ಮಾಡಿದರು; ಈ ನಮ್ಮ ಪುಟ್ಟಾರ್ಯರು.

ಆಗ ಗುರುಗಳಿಗೆ ಅತ್ಯಾನಂದವಾಗುತಾಯಿದೆ. ಪುಟ್ಟಾರ್ಯ ಈಗ ನೀನು ನನಗೆ ತಕ್ಕ ಶಿಷ್ಯನಾದಿ ಅಷ್ಟೇ ಅಲ್ಲ ಶ್ರೇಷ್ಠ ಕುಲಪುತ್ರನಾದಿ. ಎಂದು ಪುಟ್ಟಾರ್ಯರನ್ನು ಅಪ್ಪಿಕೊಂಡರು. ಆನಂದಾಶ್ರು ಸುರಿಸಿದರು......... ಏಳು ಪುಟ್ಟಯ್ಯ! ಏಳು ! !....

ತತ್‌ಕ್ಷಣವೆ ಪುಟ್ಟಾರ್ಯರಿಗೆ ಎಚ್ಚರವಾಗಿದೆ....—..........................

ಪುಟ್ಟಯ್ಯ ಏಳು ! ಏಳು ಪುಟ್ಟಯ್ಯ ! !........

ಎಂದು ಗುರುವರ್ಯರು ಎಬ್ಬಿಸುತ್ತಿದ್ದಾರೆ. ಆಗ ಮಾಯಾ ಪ್ರಪಂಚದಿಂದ ಕನಸಿನ ಸಾಮ್ರಾಜ್ಯದಿಂದ ಬಹಿರ್ ಪ್ರಪಂಚಕ್ಕೆ ಪವಡಿಸಿದ ಪುಟ್ಟಾರ್ಯ........

ಕನಸಿನ ಗತಿ........ ಮಾಯೆಯ ರತಿ........ಗುರೂಪದೇಶದ ತತಿ........ ಜ್ಞಾಪಿಸಿಕೊಂಡು.... ಬೆಳಗಿನ ಜಾವದ ಸಾಂಪ್ರದಾಯಿಕ ನಮಸ್ಕಾರ ಮಾಡಿದ ಪ್ರತಿಜ್ಞದ ಪರಿಣಾಮವನ್ನೂ ಬೆರಿಸಿದ್ದ, ಧೃಡ ಸಂಕಲ್ಪದಿಂದ ಗುರುಪಾದವನ್ನು ಪಿಡಿದ; ಮಾಯಾ ಮೋಹದ ಪರದೆ ಹರಿದ; ಹರೆಯದ ಹಂದರದಲ್ಲಿದ್ದರೂ ಬ್ರಹ್ಮಚರ್ಯವನ್ನು ಬಂಧುರ ಪಡಿಸಿದ ಶ್ರೇಷ್ಠಾಚಾರ್ಯ ಶ್ರೀ ಪುಟ್ಟಾರ್ಯ.

" ತಾಯೆಂಬೆನಲ್ಲವೆ ತಾಯಿ ತಾನೆಂಬೆನೆ ?
ತಾಯಿಯೆಂದಾನು ನುಡಿದೇನು। ಪರಸ್ತ್ರೀಯ।
ತಾಯಿಯೆಂದೆಂಬೆ ಸರ್ವಜ್ಞ ॥

ಸರ್ವಜ್ಞನ ಭಾವಂದಳೆದು, ಮಹಾತ್ಯಾಗಿ ಮನ್ಮಥಸ್ವಾಮಿಗಳ ಅಭಂಗ ವನ್ನು ಹಾಡಹತ್ತಿದ ಪುಟ್ಟಾರ್ಯ.

ಸಾರ ಸಕಳ ತೀರ್ಥಾಚ।
ವೃಂದ್ಯ ಪಾವುಲ ಗುರೂಚಿ ॥
ನಲಗೆ ಕಾಶೀಲಾಗೀಜಾವೇ।
ರೂಪ ಹೃದಯೀ ಧರಾವೆ ॥
ತೇಣೇ ಸುಖ ಹೋಯ್ ಜೀವಾ।
ನಪಡೇ ಸಂಸಾರಾಚೀ ಗೋವಾ ॥
ನಲಗೇಯೋಗಮುದ್ರಾಧ್ಯಾನ।
ಧ್ಯಾವಾ ಗುರೂಂಚೀ ಚರಣ ॥
ಮ್ಹಣೇ ಮನ್ಮಥ ಶಿವಲಿಂಗ।
ಗುರುರೂಪ ಹೋಯ್ ಅಂಗ ॥



# ರವಿ ಮುಳುಗಿದ, ಚಂದ್ರ ಮೊಳಗಿದ

ಶಾರದೆಯ ಸಾರ್ವಭೌಮರಾಗಿ, ಲಿಂಗಪೂಜಾಯುತರಾಗಿ; ಕಡುಬ್ರಹ್ಮ ಚಾರಿಗಳಾಗಿ, ಜಂಗಮ ಪಾದ ಕೃಪಾಭಿಲಾಷಿಗಳಾಗಿ ಪುಟ್ಟಾರ್ಯರು ಗುರುಗಳ ಅಚ್ಚುಮೆಚ್ಚಿನ ಶಿಷ್ಯರಾದರು,

ಗುರುವರ್ಯ ಪಂಚಾಕ್ಷರಿಯವರು ಉಪದೇಶಿಸಿದ ಮಾರ್ಗದಲ್ಲಿ ನಡೆದು ಗುರುಗಳ ಹೃದಯ ಗೆದ್ದರು ಪುಟ್ಟಾರ್ಯರು:

ವಿದ್ಯೆಯಲ್ಲಿ ರಾಜ, ಗುಣದಲ್ಲಿ ರಾಜ, ವಿನಯದಲ್ಲಿ ರಾಜ, ಎಲ್ಲದರಲ್ಲೂ ನೀನು ರಾಜನೆಂದು ಗುರುವರ್ಯರು ಸಂಬೋಧಿಸಿ ಈ ನಮ್ಮ ಪುಟ್ಟಾರರಿಗೆ ಕರೆ ದರು. ಕರೆದ " ರಾಜ ನೆಂಬುವ ನಾಮ ಅಂಕಿತನಾಮವಾಗಿ ಮಾರ್ಪಾಟಾಗಿ ಕ್ರಮೇಣ ಪುಟ್ಟಯ್ಯ ಪುಟ್ಟಾರ್ಯ.... ರಾಜ........ " ಪುಟ್ಟರಾಜನೆಂಬುವ ವರ ನಾಮ ಅನ್ವರ್ಥಕವಾಗಿ ಸಾರ್ಥಕ್ಯದ ಸುಳಿಯಲ್ಲಿ ಸುಳಿಯಿತು. ಅದುವೇ ಪ್ರಚಾರದಲ್ಲಿ ಬಂದಿತು. ದಿನಗಳೆದಂತೆ ಪುಟ್ಟಾರ್ಯನೆಂಬುವ ನಾಮವಳುಕಿ " ಪುಟ್ಟರಾಜ" ನೆಂಬ ಧೀಮನಾವ್ಮ ಬಳಕೆಯಲ್ಲಿ ಬಂದು; ಬೆಳಕಾಗಿ ನಿಂದು; ಬೆಳಗಿತು; ಗುರುರವ್ಯರ ನೆಳಲಾಗಿ ಬಾಳಿತು.

ಸ್ನಾನ ಮಾಡುವಾಗ, ಪೂಜೆಗೆ ಕುಳಿತಾಗ; ಪ್ರಸಾದಕ್ಕಣಿಯಾದಾಗ, ಕುಳಿತಾಗ ನಿಂತಾಗ; ಹೋದಾಗ, ಬಂದಾಗ ಈ ಪುಟ್ಟರಾಜರನ್ನು ಬಿಟ್ಟಗಲುತ್ತಿದ್ದಿಲ್ಲ ಗುರುವರ್ಯರು- " ದೇಹ ಎರಡು ಧ್ಯೇಯ ಒಂದು " ಎನ್ನುವಷ್ಟು ಹೊಂದಿಕೆಯಾದರು ಗುರು ಶಿಷ್ಯರು. ಸ್ವಾಮಿಸೇವಕ, ತಾಯಿ ಕರು, ತಂದೆ ಮಗ, ಬಂಧುತ್ವದಕಿಂತಲೂ ಹೆಚ್ಚಾದ ಬಂಧುರತೆಯಿಂದ ಒಂದಾ ದರೂ ಗುರು ಶಿಷ್ಯರು. ಈ ಗುರು ಶಿಷ್ಯರ ಸಾಮರಸ್ಯ ಕೃಷ್ಣ ಸುಧಾಮರಂತೆ, ರವಿ ಅರುಣರಂತೆ, ಶಿವಬಸವರಂತೆ, ಎಂದೂ ಅಗಲದ ಅಮರತ್ವದಲ್ಲಿ ಲೀನ ವಾಯಿತು. ಶಿಷ್ಯಗೆ ತಕ್ಕ ಶ್ರೇಷ್ಠ ಗುರು; ಗುರುವಿಗೆ ತಕ್ಕ ಪುಟ್ಟ ಶಿಷ್ಯ,

ಎಂಥ ಜೋಡಿ ! ಪುಷ್ಪ ಮಕರಂದಂತೆ-ಒಂದಾಗಿ ದೇವನ ಪಾದ ಸನ್ನಿ

ಧಿಗೆ ಸೇರುವಂತೆ ಶಿವಾನುರಾಗದ ಹಾದಿಯಲ್ಲಿ ಓಡಿದೆ ಈ ಗುರು ಶಿಷ್ಯರ ಜೀವನ ಗಾಡಿ.

ಗುರುವಿನ ಗುಲಾಮ ನಾಗುವ ತನಕ ।
ದೊರೆಯದಣ್ಣ ಮುಕುತಿ ॥

ಎಂದು ಸಾರಿದ ಪುರಂದರ ದಾಸಾರ್ಯರ ಅನುಭವವಾಣಿ ಪುಟ್ಟರಾಜರ ಪಾಣಿಗತವಾಗಿತ್ತು.

ಗುರುಗಳ ಎದುರಿಗೆ ಒಮ್ಮೆಯೂ ಎದೆಸೆಟಿಸಿ ನಿಲ್ಲಲಿಲ್ಲ ದೊಡ್ಡ ದನಿ ತೆಗೆದು ಮಾತನಾಡಲಿಲ್ಲ. ಗುರುಗಳ ಅಪ್ಪಣೆ ಕೊಡಿಸಿದ್ದಕ್ಕೆ ಎಂದೂ ತಪ್ಪಿ ತ್ತಿದ್ದಿಲ್ಲ. ಗುರು ಕುಳಿತ ಜಾಗಾದಲ್ಲಿ ಮರೆತು ಕೂಡ್ರುತ್ತಿದ್ದಿಲ್ಲ; ಗುರುಗಳು ವುಗುಳಿದ್ದನ್ನು ಅಮೃತವೆಂದು ಭಾವಿಸುತ್ತಿದ್ದ ಪುಟ್ಟಾರ್ಯ.

ಗುರುವಿನ ವಾಕ್ಯ ವೇದವಾಕ್ಯ !
ಗುರುವಿನ ತತ್ವ ಶಿವನಪ್ಪನ ಸತ್ವ !
ಗುರುವಿನ ಆಜ್ಞೆ ನನ್ನ ಬಾಳ ಪ್ರತಿಜ್ಞೆ !
ಗುರುವಿನ ಪಾದ ಕೈಲಾಸ ಬೋಧ !
ಗುರುವಿನ ಸಂಗೀತ ಜಗದ್ಗೀತ ಕು-
ಮಾರುಗೀತ ಭಗವದ್‌ಗೀತ ವೆಂದರಿತ !
ಗುರುವೇ ಸಕಲ ದೇವರು !

ಎಂದುನೆರೆನಂಬಿದ್ದ. ಸುಸಂಸ್ಕೃತಿಯ ಶೃತಿಯಲ್ಲಿ ತನ್ನ ಬಾಳಕೃತಿ ಬೆರೆ ಸಿದ್ದ; ಸಾಗಿದ್ದ.

ಇಷ್ಟರಲ್ಲಿ ಗುರುಗಳ ಸಂಗಾತಿಯಾಗಿ ತಿರುಗಿ, ಕಾರ್ಯಕ್ರಮದಲ್ಲಿ ಭಾಗ ವಹಿಸಿ, ಗುರುವಿನ ಪಾಂಡಿತ್ಯದ ಪರಿಮಳ ಹೀರುವ ಭ್ರಮರವಾಗಿ ಕರ್ನಾಟಕದ ತುಂಬೆಲ್ಲ ಹೆಸರುವಾಸಿಯಾದ, ಪ್ರಚಾರದಲ್ಲಿ ಬಂದ. ಇವನ ಪಾಂಡಿತ್ಯದ ಪ್ರಗತಿಯನ್ನರಿತು ಕೆಲವು ಹುಡುಗರಿಗೆ ಪಾಠಹೇಳಲಿಕ್ಕೆಂದು ನೇಮಿಸಿದರು. ಗುರುವರ್ಯರು ಪಾಠ ಹೇಳುವದರಲ್ಲಿ ತನ್ನ ಪ್ರಭುತ್ವ ತೋರಿಸಿ ಗುರುಗಳ ಪರೀಕ್ಷಾ ಪರಿಶಿಷ್ಟತೆಯಲ್ಲಿ " ರ್‍ಯಾಂಕ " ಪಡೆದ.

ಈಗ ಗುರುವರ್ಯರ ಸಂಚಾರಿಕ ಸಂಗೀತ ಶಾಲೆಯಲ್ಲಿ ೭೦-೮೦ ಜನ ವಿದ್ಯಾರ್ಥಿಗಳಿದ್ದಾರೆ. ಖರ್ಚಿನಭಾಗ ಇಮ್ಮಡಿಯಾಗಿದೆ. ದೊಡ್ಡ ಸಂಸಾರ. ಸಂಸಾರಕ್ಕೆ ತಕ್ಕ ಖರ್ಚಿನ ಭಾರ. ಹೀಗಾಗಿ– ಕರ್ನಾಟಕದ ಮೂಲೆ ಮೂಲೆ ಗಳೆಲ್ಲ ಸುತ್ತಿ ನರಗುಂದ ಗ್ರಾಮಕ್ಕೆ ಬಂದಿದ್ದಾರೆ ಗುರುಗಳು. ಈ ನರಗುಂದ ಗ್ರಾಮಕ್ಕೆ ಬಂದಾಗ ಗವಾಯಿಗಳವರ ತಲೆಯ ಮೇಲೆ ಅಪಾರ ಸಾಲದ ಭಾರ ಹತ್ತಿ ಕೂತಿತ್ತು. ದಿನಗಳೆದಂತೆ ಈ ಸಾಲದ ಶೂಲ ಕರಗದೆ ಹಿಮಾಗಾರದನದಿ ಯಂತೆ ಹೆಚ್ಚಾಗ ಹತ್ತಿತು. ಇದನ್ನು ಕಳೆಯುವ ಬಗೆ ಹೇಗೆ ? ಎಂದು ಗುರುಗಳು ಯೋಚನಾಕ್ರಾಂತರಾದರು. ಗುರುಗಳಿಗೆ ಕಷ್ಟಕಾಲ ಬಂದಿತು, ಜಗದಲ್ಲಾಗ ಬರಗಾಲ ಬೀಡಾರವಾಗಿತ್ತು. ಇಂಥಾ ತ್ರಾಸಿನಲ್ಲಿ ೮೦ ಜನ ವಿದ್ಯಾರ್ಥಿಗಳನ್ನು ಸಲುಹಬೇಕು. ಭಿಕ್ಷೆಯಿಂದ; ಪ್ರೊಗ್ರಾಮಿನಿಂದ; ಕೀರ್ತನ ಪುರಾಣ ಹೇಳುವದರಿಂದ ಬಂದ ಆದಾಯ ವಿದ್ಯಾರ್ಥಿಗಳ ಪಾಲನೆ ಪೋಷಣೆಗೆ ವ್ಯಯವಾಗುತ್ತಿತ್ತು.

ವಿದ್ಯಾರ್ಥಿಗಳಿಗೆ ವಿದ್ಯೆ; ಊಟ; ಬಟ್ಟೆಗಳನ್ನು ಫ್ರೀಯಾಗಿ ಕೊಟ್ಟು ಕಲಿಸುವ ದೇವಪುರುಷ ಪಂಚಾಕ್ಷರಿ ಗುರುಗಳಿಗೆ ಇಂಥಾ ಕಷ್ಟಕಾಲ ಬಂದೊ ದಗಿತು-

ಇದರ ಪರಿಹಾರಕ್ಕಾಗಿ ಶ್ರಮವಿಲ್ಲದೆ ಗುರುಗಳು ದುಡಿಯುತ್ತಿದ್ದಾರೆ. ಆದರೂ ಸಾಲದ ಭಾಗ ಕಡಿಮೆಯಾಗುವ ಸೂಚನೆಯಲ್ಲಿರಲಿಲ್ಲ; ಸೋಚ ನೀಯ ಕಾಲದೂರಾಗಲಿಲ್ಲ.

ಗುರುಗಳು ಇಷ್ಟುಕಷ್ಟಪಡುತ್ತಿರುವದು ನಮಗಾಗಿ; ನಮ್ಮ ಉದ್ಧಾರಕ್ಕಾಗಿ; ಜಗದುದ್ಧಾರಕ್ಕಾಗಿ- ಇವರೀಶ್ರಮವನ್ನು ಕಂಡು ಮರುಗಿದರು ಪುಟ್ಟರಾಜರು. ಈ ಕಷ್ಟಪರಿಹಾರವಾಗಬೇಕಾದರೆ ಏನು ಮಾಡಬೇಕು ? ಈ ಕಷ್ಟಕಾಲ ಕರಗಬೇಕು, ಗುರುಗಳು ನೆಮ್ಮದಿಯಾಗಿರಬೇಕು............ ಹಾಗಾದರೆ........ ಏನು ಮಾ....ಡ....ಬೆ....ೕ....ಕು.... ಎಂದು ಯೋಚನಾಗರದಲ್ಲಿದ್ದಾರೆ ಪುಟ್ಟ-ರಾಜರು............

ಪುಟ್ಟರಾಜರಿಗೀಗ ವಯದ ಅಳತೆ ೨೫ ರ ಅಂಚು ಮಿಂಚಿತ್ತು ೩೦ ರ ಮಿಂಚು ದೂರಿತ್ತು. ಸಂಗೀತದಲ್ಲಿ ಪ್ರೌಢಿಮೆಯನ್ನು ಡೆಪದಿರುವಂತೆ ಸಾಹಿತ್ಯ

ಅಂದರೆ ಹಿಂದಿ; ಕನ್ನಡ; ಸಂಸ್ಕೃತಗಳಲ್ಲಿಯೂ ಕೂಡಾ ಪಾರಂಗತರಾಗಿದ್ದರೂ, ಕಥೆ ಕವನ ನಾಟಕಗಳನ್ನೂ ರಚಿಸಿ ಚಿಕ್ಕ ಕವಿಬಳಗಕ್ಕೆ ಚುಕ್ಕೆ ವಿಟ್ಟಿದ್ದರು. ಹಿಂದೀ ಭಾಷೆಯಲ್ಲಿ ಸಂಗೀತ ಹಾಡು (ಚೀಜ್) ಗಳನ್ನೂ ರಚಿಸುತ್ತಿದ್ದರು.

ಇದ್ದಕ್ಕಿದ್ದಂತೆ ಪುಟ್ಟರಾಜರಿಗೆ ಒಂದು ವಿಚಾರ ಬಂದಿದೆ. ಅದು ಯಾವದು ?

ನಾನು ಹೇಗಿದ್ದರೂ ನಾಟಕಗಳನ್ನು ಬರೆದಿದ್ದೇನೆ. ಇವುಗಳನ್ನೇ ಹುಡುಗರಿಗೆ ಕೂಡ್ರಿಸಿ ನಾಟಕವಾಡಬೇಕು. ನಾಟಕ ಪ್ರಯೋಗದಿಂದ ಬಂದ ಧನ ಸಾಲತೀರಿಸುವ ಸಾಧನವಾಗುತ್ತದೆ. ಎಂದು ಭವಿಷದ್ ಪ್ರಯೋಗ ರಚಿಸಿ, ಕಾರ್ಯದಲ್ಲಿ ತೊಡಗಿದರು.

ತಾವೇ ಬರೆದ " ನೆಲ್ಲೂರ ಸಂಬೆಕ್ಕ " ನಾಟಕವನ್ನು ತಮ್ಮ ಕೈಕೆಳಗಿನ ಹುಡುಗರಿಗೆ ಪಾತ್ರಗಳನ್ನು ಹಂಚಿ ಪ್ರ್ಯಾಕ್ಟೀಸ ಸುರು ಮಾಡಿದರು. ಈ ವಿಷಯ ಪಂಚಾಕ್ಷರಿ ಗುರುಗಳಿಗೆ ಗೊತ್ತಾಗದಂತೆ ಗುಟ್ಟಾಗಿ ಒಟ್ಟಾಗಿ ರಂಗ ಮಾತೆಯನುಕರಣ ನಡೆಸಿದರು- ತಾವು ಕಂಣಿಲ್ಲದವರಾದರೂ ಕೂಡಾ ಆ ಆ ರೀತಿ ಡಾಯ್‌ರೆಕ್ಸನ್ ( ಅಭಿನಯ ) ದ ಕೆಲಸವನ್ನು ಜಾಗ್ರತೆಯಿಂದ ಹೇಳಿ ಕೊಡುತ್ತಿದ್ದುದನ್ನು ಕಂಡು ಕಂಣಿದ್ದವರೂ ಕೂಡಾ ಅಚ್ಚರಿ ಪಡುತ್ತಿದ್ದರು ಕಂಣಿದ್ದವರಿಗೆ ಸಾಧ್ಯವಾಗದ ಈ ಅಭಿನಯ ಕಲೆ ಕುರುಡರಾದ ಇವರಿಗೆ ಒಲಿತು ಬಂದು ಕಲೆಯ ನಿಂದಿದೆಯೆಂದರೆ ಯಾರಿಗೆ ತಾನೇ ಆಶ್ಚರ್ಯವಾಗ ಲಿಕ್ಕಿಲ್ಲ:- ಸುಂದರವಾದ ಸನ್ನಿವೇಶಗಳಿಂದ ಶಿವಶರಣ ನೆಲ್ಲೂರ ಸಂಬೆಕ್ಕನ ನಾಟಕಬರೆದು ಆ ಆ ಸನ್ನಿ ವೇಶಗಳಿಗೆ ತಕ್ಕಂತೆ ಸಂಗೀತ ಜೋಡಿಸಿದ್ದಾರೆ. ಪ್ರಯತ್ನ ಪೂರ್ವಕವಾಗಿ ಪ್ರ್ಯಾಕ್ಟೀಸ್ ಮಾಡಿಸಹತ್ತಿದ್ದಾರೆ. ವಿದ್ಯಾರ್ಥಿಗಳಿಗೆ ಹೀಗೆಸತತ ಶ್ರಮದಿಂದ ತಿಂಗಳೊಪ್ಪತ್ತಿನಲ್ಲಿ ನಾಟಕ ಪೂರ್ತಿತಯಾರಾಯಿತು.

ನಾಟಕವೇನೋ ಗುಪ್ತವಾಗಿ ತಯಾರಾಯಿತೇನೋ ನಿಜ ಆದರೆ ಗುಪ್ತ ವಾಗಿ ಆಡಲು ಬರುತ್ತಿದೆಯೇ ? ಗುರುಗಳಿಗೆ ಈ ವಿಷಯ ತಿಳಿಸಬೇಕಲ್ಲ ? ಯಾರು ತಿಳಿಸಬೇಕು ? ಹೇಗೆ ತಿಳಿಸಬೇಕು ? ನಾಟಕ ಅಂದರೆ ಸೇರುತ್ತಿದ್ದಿಲ್ಲ ಗುರುಗಳು. ಹಿಂದೊಮ್ಮೆ ಈ ನಾಟಕದ ವಿಷಯ ಎತ್ತಿದಾಗ ಗುರುಗಳಿಂದ ಜೈಗುಳದ ಮಾಲೆ ಹಾಕಿಸಿಕೊಂಡಿದ್ದರು ಪುಟ್ಟರಾಜರು- ಅಂದಾಗ ಈ ಸಲ

ಹೇಗೆ ತಿಳಿಸ್ಯಾರು ? ಗುರುಗಳಿಗೆ ಈ ವಿಷಯ ತಿಳಿಸುವಂತಿಲ್ಲ. ಆದರೂ ತಿಳಿಸಬೇಕು. ಹೇಗೆ ತಿಳಿಸುವದು ? ತಿಳಿಸಿದರೆ ಗುರುಗಳು ಒಪ್ಪುವದಿಲ್ಲ ? ಆದರೂ ಏನಾದರೂ ಮಾಡಿ ಒಪ್ಪಿಸಲೇಬೇಕು- ಎಂದು ನಿರ್ಧರಿಸಿದರು ಚುರುಕು ಬುದ್ಧಿಯ ಪುಟ್ಟರಾಜರು. ಅದಕ್ಕೆ ಒಂದು ಹೊಸಾ ಪ್ಲ್ಯಾನ ( ಯುಕ್ತಿ ) ಹೂಡಿದರು. ಈ ನಾಟಕದ ವಿಷಯ ನರಗುಂದದ ಪ್ರಮುಖ ನಾಗರಿಕರಿಗೆ ತಿಳಿಸಿದರು. ನೀವು ಏನಾದರೂ ಮಾಡಿ ಗುರುಗಳನ್ನು ಒಪ್ಪಿಸಿರಿ. ಮುಂದಿನದು ನನ್ನ ಕೆಲಸ ಎಂದು ದಿಟ್ಟತನದಿಂದ ನುಡಿದರು ಹುಟ್ಟು ಕುರುಡರಾದ ಪುಟ್ಟರಾಜರು.

ಪುಟ್ಟರಾಜರ ಅಭಿಪ್ರಾಯ ಸದಭಿಪ್ರಾಯವೆಂದು ಮನಗಂಡರು ನರಗುಂದದ ನಾಗರಿಕರು. ಗುರುಗಳನ್ನೂ ಒಪ್ಪಿಸುತ್ತೇವೆಂದು ಭಾಷೆಗೊಟ್ಟು, ಗುರುಗಳ ಹತ್ತಿರ ಬಂದರು ನಾಗರಿಕರು, ಪುಟ್ಟರಾಜರ ಅಭಿಪ್ರಾಯ ತಿಳಿಸಿದರು.

ಗುರುಗಳು ಸಿಟ್ಟಿಗೆದ್ದರು — ನೀವು ಈ ರೀತಿ ನನ್ನಲ್ಲಿ ಹೇಳಬಾರದು. ನಾಟಕ ಅಂದರೆ ಹುಡುಗರಿಗೆ ಕೂದಲು ಬಿಡಬೇಕು. ಕೂದಲಿಗೆ ಎಣ್ಣೆ ಬೇಕು. ಎಂಣೆಗೆ ತಕ್ಕ ಹಣಿಗಿ ಬಟ್ಟೆ ಬರೆ ಬೇಕು. ಇಷ್ಟೆಲ್ಲ ಆದಮೇಲೆ ನಿದ್ರೆಗೆಟ್ಟು ಪಾತ್ರವಹಿಸಲಿಕ್ಕೆ ಸುರು ಮಾಡಿದರೆ ಚಹ ಬೀಡಿ ಇತ್ಯಾದಿ ಚಟಗಳು ಸ್ವಾಭಾವಿಕವಾಗಿ ಬರುತ್ತವೆ. ಅಂದಾಗ ನನ್ನ ಆಶ್ರಮ ನೇಮ ಕೆಟ್ಟು ಗುರುಕುಲದ ಕಟ್ಟು ಕತ್ತರಿಸಿ ಹೋಗುವದು. ನನ್ನಲ್ಲಿದ್ದ ವಿದ್ಯಾರ್ಥಿಗಳು ಶರಣ ಸಾಂಪ್ರದಾಯದಲ್ಲಿ ಶಿಕ್ಷಣ ಕಲಿಯಬೇಕು. ಅಂದರೆ ವಿದ್ಯಾರ್ಥಿಗಳ ಜೀವನ ಸಂಜೀವನವಾಗುವದು. ಈ ನಾಟಕದಿಂದ ನನ್ನ ವಿದ್ಯಾರ್ಥಿಗಳ ಶೀಲ ಕೆಡುತ್ತದೆ, ಪಾಂಡಿತ್ಯದ ಪ್ರಗತಿಗೆ ಕುಠಾರಾಘಾತವಾಗುತ್ತದೆ. ಇದಕ್ಕೆ ನಾವು ಒಪ್ಪಲಾರೆವು. ಎಂದು ನಿಶ್ಚಯದ ಧ್ವನಿಯಲ್ಲಿ ನುಡಿದರು ಗುರುವರ್ಯರು : ಪಂಚಾಕ್ಷರರು.

ಪುಟ್ಟರಾಜರ ಆಶಾ ಗುಡಿ ಕುಸಿದು ಹೋಯಿತು.... ಹುಡುಗರು ಕೂದಲು ಬಿಡುವ ಅಗತ್ಯವಿಲ್ಲ. ಟೋಪಿಸನ್ ಹಾಕಿಕೊಂಡು ಸ್ತ್ರೀ ಪಾತ್ರ ಮಾಡಲಿಕ್ಕೆ ಬರುತ್ತಿದೆ. ಮೇಲಾಗಿ ಯಾವದೇ ರೀತಿಯ ಚಟಾದಿಗಳಿಗೆ ಅವಕಾಶ ಕೊಡು

ವದಿಲ್ಲ. ಅವರ ವಿದ್ಯೆಯ ಪ್ರಗತಿಯ ಬಗ್ಗೆ ನಾನು ಮನಸಾ ಪ್ರಯತ್ನಿಸುತ್ತೇನೆ ನಿಮ್ಮಾಶೆಗೆ ಕಲ್ಲೆ ಶಿಯಲಾರೆ ದಯಮಾಡಿ ಒಪ್ಪಿಗೆ ಕೊಡಿ. ಸಂಗೀತ ಕಲೆಸಾಹಿತ್ಯ ಕಲೆಗೆ ಪ್ರೋತ್ಸಾಹ ಕೊಟ್ಟಂತೆನಾಟ್ಯಕಲೆಗೂ ಬೆಲೆಕೊಡುವದು ನಿಮ್ಮ (ನಮ್ಮ) ಶಾಲೆಗೆ ತಕ್ಕ ಗೌರವ.ಸಂಗೀತ ಸಾಹಿತ್ಯ-ನಾಟ್ಯ ಕಲೆಗಳ ತ್ರಿವೇಣಿ ಸಂಗಮದ ಶಾಲೆಯಾಗಬೇಕು ನಮ್ಮ ಶಾಲೆ. ಈಗ ಸಾಲದ ಭಾರ ಬಹಳವಾಗಿದೆ. ಈ ನಾಟಕ ಪ್ರಯೋಗದಿಂದ ಸ್ವಲ್ಪಾದರೂ ಕಡಿಮೆಯಾಗಬಹುದು. ಕೃಪೆಮಾಡಿ ನನ್ನೀ ಮಾತಿಗೆ ಅಪ್ಪಣೆ ಕೊಡಿಸುವದಾಗಬೆಕೆಂದು ಮೊರನಿಂತು ವಿನಯದಿಂದ ಬೇಡಿಕೊಂಡರು ಪುಟ್ಟರಾಜರು.

ಹೌದು ತಂದೆ- ನೀವು ಈ ಕಾರ್ಯಕ್ಕೆ ಸಮ್ಮತಿಸಬೇಕು.

ಹೌದು ಗುರುಗಳೇ ಈ ಪುಟ್ಟರಾಜರ ಕಾರ್ಯ ನಿಜವಾಗಲೂ ಲಾಭದಾಯಕವಿದೆಯೇ ಹೊರತು ನಷ್ಟ ದಾಯಕವಾದುದಲ್ಲ ಕಾರಣ ವಿನಾ ವಿಚಾರಿಸದೆ ಅಪ್ಪಣೆ ಕೊಡಬೇಕು. ಎಂದು ನಾಗರಿಕರೂ ಪುಟ್ಟಾರ್ಯರಿಗೆ ಸ್ವರಗೂಡಿಸಿದರು.

ಕೊನೆಗೆ ಪುಟ್ಟರಾಜರ ಪಾರ್ಟಿ ದೊಡ್ಡದಾಯಿತು, ಗುರುಗಳ ಒಂಟಿ ಪಾರ್ಟಿಗೆ ಸೋಲಾಯಿತು.

ಆ....ಗ....ಲಿ.... ಇದೂ ಒಂದು ಕುಮಾರಸ್ವಾಮಿಯ ಪ್ರೇರಣೆ. ಸ್ವಾಮಿಯ ಸಂಕಲ್ಪ ವಿದ್ದಂತಾಗಲಿ! ಎಂದು ಗುರುಗಳು ನುಡಿದಾಗ ತೃಪ್ತಿಯ ಉಸಿರು ಹೊರಚಿಮ್ಮಿ ಸಂತೋಷದ ಧ್ವನಿ ಹೊರ ಹೊಮ್ಮಿತು.

ನಾಟಕ ಪ್ರಯೋಗಿಸಬೇಕೆಂಬ ಸದುದ್ದೇಶ ಪಟ್ಟುಕೊಂಡ ಪುಟ್ಟರಾಜರಿಗೆ ಅತೀವ ಆನಂದವಾಗಿದೆ. ನಾಟಕದ ಪ್ರದರ್ಶಕ್ಕೆ ಬೇಕಾಗುವ ಸಾಮಗ್ರಿಗಳನ್ನು ಮೊದಲೇ ವ್ಯವಸ್ಥೆ ಮಾಡಿಕೊಂಡಿದ್ದರು. ಪುಟ್ಟರಾಜರು. ಮುಂಜಾಗರೂಕತೆಯುಳ್ಳವರಾದ ಪುಟ್ಟರಾಜರ ಪರಿಶ್ರಮದಿಂದ ೧೯೪೦ರಂದು ನರಗುಂದ ಗ್ರಾಮದಲ್ಲಿ ಪ್ರಪ್ರಥಮವಾಗಿ * ನಾಟಕ ಪ್ರಾರಂಭವಾಯಿತು. ಈ ನಾಟಕ ಪ್ರಯೋಗದಿಂದ ಬಂದ ವರ್ಗಣಿ ಹಣ ಸಾಲದ ಹೆಣವನ್ನು ಸಂಪೂರ್ಣ ಸುಟ್ಟ

---

ಗಾನಕೋಕಿಲೆಯಾಗಿ ಇಂಡಿಯಾದಲ್ಲಿ ಮೂಲೆ ಮೂಲೆಗಳಲ್ಲಿ ಹೆಸರು ವಾಸಿಯಾದ ಶ್ರೀಬಸವರಾಜ ರಾಜಗುರು ಅವರೂ ಪಾತ್ರದೊಟ್ಟಿದ್ದರು. ಅಲ್ಲದೆ ಸಂಗೀತ ಶ್ರೇಷ್ಠರಾದ

ಬಿಟ್ಟಿತು. ಪುಟ್ಟರಾಜರ ಪರಿಶ್ರಮ ಸಾರ್ಥಕವಾಯಿತು. ಗುರುಗಳಿಗೆ ಅತೀವ ಆನಂದವಾಯಿತು.

ನಾಟಕ ಕಂಪನಿಯಿಂದ ಸಂಗೀತ ಶಾಲೆಗೆ ಯಾವರೀತಿಯಿಂದ ಕುಂದಿಲ್ಲ. ಅದರಿಂದ ಸಂಸ್ಥೆಗೆ ಲಾಭವಿದೆ. ಎಂಬೆನ್ನುವದನ್ನು ಗುರುಗಳಿಗೆ ತಿಳಿಸಿಕೊಟ್ಟರು, ದಿಟ್ಟರಾಜರು, ಪುಟ್ಟರಾಜರು.

ಅಂದಿನಿಂದ ಹೊಸ ಹೊಸ ಭಕ್ತಿ ಪ್ರದವಾದ ನಾಟಕಗಳನ್ನು ಬರೆದು ಕೂಡ್ರಿಸಿ ಪ್ರದರ್ಶನಕ್ಕೆ ತರಲು ಸಮರ್ಥರಾದರು, ಪುಟ್ಟರಾಜರು.

ಅಂತೂ ಸಂಸ್ಥೆಯವತಿಯಿಂದ ಕುಮಾರೇಶ್ವರ ಕೃಪಾಪೋಷಿತ ನಾಟಕ ಕಂಪನಿ ಕಾಯಂ ಆಗಿ ಸಾಗಿತು. ಅದರ ಸಂಚಾಲಕತ್ವದ ಸರ್ವ ಜವಾಬ್ದಾರಿಯನ್ನು ಗುರುವರ್ಯರು ನಮ್ಮ ಪುಟ್ಟರಾಜರಿಗೆ ಹೊರಿಸಿದರು. ಕರ್ನಾಟಕದ ಮೂಲೆ ಮೂಲೆಗಳಲ್ಲಿ ಭಕ್ತಿಪ್ರಧಾನವಾದ ನಾಟಕಗಳನ್ನು ಪ್ರಯೋಗಿಸಿ ಜನರಲ್ಲಿ ಭಕ್ತಿ ವಿಶ್ವಾಸಗಳನ್ನು ಕಲಿಸುವ ಗುರು ಪೀಠವಾಗಿ ಪರಿಣಮಿಸಿತು ಈ ನಾಟಕ ಕಂಪನಿ. ೩–೪ ತಿಂಗಳಲ್ಲಿ ಕಂಪನಿ ಊರ್ಜಿತಾವಸ್ಥೆಗೆ ಹೋಯಿತು; ದೊಡ್ಡ ಕಂಪನಿಗಳ ಮಾಲಿಕೆಗೆ ಸೇರಿತು.

ಇಷ್ಟರೊಳಗಾಗಿ ಗುರುವರ್ಯ ಪಂಚಾಕ್ಷರಿ ಗವಾಯಿಗಳವರು ಭಕ್ತಶ್ರೇಷ್ಠ ಬಸರೀಗಿಡದ ವೀರಪ್ಪನವರ ಸಹಾಯದಿಂದ ಗದುಗಿನಲ್ಲಿ ತಮ್ಮ ಅನುಷ್ಠಾನ ಮುಂದುವರಿಸಿದ್ದರು. ಗುರುಗಳ ಸಮಾಜ ಸೇವೆಗೆ; ಲಿಂಗ ಪೂಜೆಗೆ; ಜಾತೀಯತೆಯ ಭಾವತಾರದೆ ಸಮಸ್ತ ಜಾತಿಯ ಅಂಧ ಅನಾಥರಿಗೆ ವಿದ್ಯೆ ಗಲಿಸುವ ಗುರುಗಳ ಸಮತಾ ಭಾವಕ್ಕೆ ಮಾರು ಹೋದ ಬಸರಿಗಿಡದ ವೀರಪ್ಪನವರು ಸರ್ವರೀತಿಯಿಂದ ಸಹಾಯ ಮಾಡಿದರು. ಗುರುಗಳ ಕಷ್ಟಸುಖಗಳಲ್ಲಿ ಭಾಗಿಯಾದವರು ದೇವ ಪುರುಷ ಬಸರೀ ಗಿಡದ ವೀರಪ್ಪನವರು. ಸ್ವಾಮಿಗೆ ತಕ

---

ಶ್ರೀ ಅರ್ಜುನಸಾ ನಾಕೋಡ, ಶ್ರೀ ದೊಡ್ಡ ಬಸವಾರ್ಯ ಜಾಲಿಬೆಂಚಿ, ಶ್ರೀ ಮರಿಯಪ್ಪ ರೋಣ, ಶ್ರೀ ವೆಂಕಪ್ಪ ರೋಣ ಮುಂತಾದವರು ಪಾತ್ರವಹಿಸಿದ್ದರು. * ಶ್ರೀ ವೇ|| ಶಿವಮೂರ್ತಿಸ್ವಾಮಿ ದೇವಗಿರಿ ಇವರು ಸಂಸ್ಥೆಯ ಡಾಯರೆಕ್ಟರರಿದ್ದರು ಶ್ರೀ- ಪಂ| ಗಂಗಾಧರ ಶಾಸ್ತ್ರಿಗಳು ಚಿತ್ತರಗಿ ಇವರು ಮ್ಯಾನೇಜಮೆಂಟ ವಹಿಸಿದ್ದರು. ಶ್ರೀ ಪಂ. ಪುಟ್ಟರಾಜರ ಬಲಗೈಯಾಗಿ ಕಾರ್ಯ ನಿರ್ವಹಿಸಿದರು.

ಭಕ್ತನಾಗಿ, ಗುರುವಿಗೆ ತಕ್ಕ ಶಿಷ್ಯನಾಗಿ ಒಪ್ಪಿದರು ವೀರಪ್ಪನವರು. ಗುರುಗಳ ಮನವೊಲಿಸಿ; ಅತಿ ಶ್ರಮದಿಂದ; ಗದುಗಿನ ಅನೇಕ ಭಕ್ತರ ಸಹಾಯದಿಂದ "ವೀರೇಶ್ವರ ಪುಣ್ಯಾಶ್ರಮ" ವೆಂಬ ಮಹಾಸಂಸ್ಥೆಯನ್ನು ಕ್ರಿ. ಶ. ೧೯೪೦ ರಂದು ಕಟ್ಟಲು ಸುರುಮಾಡಿದರು. ಕಟ್ಟಡದ ಕಾರ್ಯ ಸಾಂಗವಾಗಿ ಸಾಗಿತ್ತು.

ದಿನಾಲೂ ತಪ್ಪದೆ ಹುಡುಗರಿಗೆ ಪಾಠ ಹೇಳಬೇಕು. ಕೀರ್ತನ ಪುರಾಣ ಪ್ರವಚನಾದಿ ಕಾರ್ಯಕ್ರಮಗಳನ್ನು ಒಂದರ ಹಿಂದೊಂದರಂತೆ ಮಾಡಿ ಸಮಾಜ ಜಾಗ್ರತಿ ಮಾಡಬೇಕು. ದೀರ್ಘವಾದ ಅನುಷ್ಠಾನ ಮಾಡಬೇಕು. ಈ ರೀತಿ ಬಿಟ್ಟೂಬಿಡದೆ ಶ್ರಮಿಸುತ್ತಿರುವ ಗುರುವರ್ಯರಿಗೆ ಉದರ ರೋಗ ಪ್ರಾಪ್ತ ವಾಯಿತು. ದಿನಗಳುರುಳಿದಂತೆ ರೋಗ ವೃದ್ಧಿಯಾಯಿತು; ಊಟ ದಕ ದಾಯಿತು; ಸ್ಥಿತಿ ಸೋ ಚ ನೀ ಯ ವಾ ಯಿ ತು. ಕರ್ತ್ಯಾಚಾರಿಗಳಾದ ಗುರುವರ್ಯರು ಔಷದೋಪಚಾರ ನಿಷೇದಿಸಿದರು. ಹೀಗಾಗಿ ಮತ್ತಷ್ಟು ಬಿರುಸಿನಿಂದ ಬಲವಾಯಿತು ಉದರ ಬಾಧೆ. ಇಷ್ಟಾದರೂ ವಿದ್ಯಾರ್ಥಿಗಳಿಗೆ ಪಾಠ ಹೇಳುವದನ್ನು ಬಿಡಲಿಲ್ಲ ಗುರುಗಳು. ಇದನ್ನು ಕಂಡ ಗದುಗಿನ ಭಕ್ತ ಜನರು ಈಗ ನಿಮ್ಮ ಪ್ರಕೃತಿಗೆ ವಿಶ್ರಾಂತಿಬೇಕು ! ಕಾರಣ ಯಾವದೇ ರೀತಿ ಯಿಂದ ಶ್ರಮ ತೆಗೆದುಕೊಳ್ಳಬೇಡಿ ! ಪಾಠ ಹೇಳುವದು ಬಿಟ್ಟುಬಿಡಿ ! ಎಂದು ಬೇಡಿಕೊಂಡರು.

ವಿಶ್ರಾಂತಿ....... ಜೀವನಿರುವವರೆಗೂ ಸಮಾಜಕ್ಕಾಗಿ; ಸಮಾಜ ಸೇವೆ ಗಾಗಿ; ಅನಾಥ ಮಕ್ಕಳ ಪ್ರಗತಿಗಾಗಿ ದುಡಿ ಎಂದು ಉಪದೇಶಿಸಿದ್ದಾರೆ ತಂದೆ ಶ್ರೀ ಕುಮಾರ ಶಿವಯೋಗಿಗಳವರು." ಅವರಾಜ್ಞೆಯಂತೆ ನಡೆಯುವದು ನನ್ನ ಕರ್ತವ್ಯ; ಕೈವಲ್ಯ. ವಿಶ್ರಾಂತಿ ದರಿದ್ರದೇವತೆಯ ಸಂಕ್ರಾಂತಿ" ನಕ್ಕು ಹೇಳಿ ದರು ಗುರುಗಳು. ತಮ್ಮ ಕಾರ್ಯದಲ್ಲಿ ಕೊಂಚವೂ ಕಡಿಮೆಯಾಗಲಿಲ್ಲ ಪ್ರಯಾಸದಿಂದ ರೋಗದಲ್ಲಿ ಬಳಲುತ್ತ ಕಾಯಕ ನಡೆಸುತ್ತಿದ್ದರು ಕಾಯಕ ಯೋಗಿ ಗುರುವರ್ಯರು.

ಸತತ ಪ್ರಯತ್ನದಿಂದ ಉದರರೋಗ ಮಾರಕಾವತಾರನಾಳಿತು. ಕುಳಿ ತರೆ ಏಳಲಿಕ್ಕೆ, ಎದ್ದರೆ ಕೂಡ್ರಲಿಕ್ಕೆ ಬಾರದಷ್ಟು ಅಸ್ವಸ್ಥರಾದರೂ ಗುರುವರ್ಯರು.

ಒಂದು ದಿನ ಗದುಗಿನ ಸದ್ಭಕ್ತರನ್ನು, ಪುಟ್ಟರಾಜರಾದಿಯಾಗಿ ಸಮಸ್ತ ಶಿಷ್ಯರನ್ನು ಸುತ್ತುಮುತ್ತಲಿನ ಸಂಸ್ಥೆಯಾಭಿಮಾನಿಗಳನ್ನು ಕರೆಯಿಸಿ ದರು ಗುರುವರ್ಯರು. "ನಮಗೆ ಶಿವಯೋಗಿಯ ಅಪ್ಪಣೆಯಾಗಿದೆ, ಶಿವನು ಕರೆಯುತ್ತಿದ್ದಾನೆ, ಕಾರಣ ನಾವು ಬಹಳ ದಿವಸ ಇಲ್ಲಿರಲಾರೆವು. ನಾಳೆಯೇ ಶಿವಸನ್ನಿಧಿಗೆ ಹೋಗುತ್ತೇವೆ" ಎಂದು ಅಂದಾಗ ಸಮಸ್ತರ ಕಂಣಲ್ಲಿ ನೀರು ಮಿಡಿಯಿತು; ಹೃದಯದಲ್ಲಿ ದುಃಖ ಕುದಿ ಸಿಡಿಯಿತು. ನಮ್ಮೀ ಪುಟ್ಟರಾಜರಿ ಗಂತೂ ಆಕಾಶವೇ ಕಳಚಿ ಬಿದ್ದಂತಾಗಿ ಸಂಣ ಹುಡುಗರಂತೆ ದೊಡ್ಡ ಧ್ವನಿ ಯಿಂದ ತಂದೆ ! ನೀವು ನಮ್ಮ ಕೈ ಬಿಡಬೇಡಿ. ನೀವಿಲ್ಲದೆ ನಾವೆಂತು ಬದುಕುವೆವು. ಎಂದು ಬಿಕ್ಕಿ ಬಿಕ್ಕಿ ಅಳುತ್ತ ಗುರುಗಳ ಪಾದದಲ್ಲಿ ಕಂಣೀರು ದಿಸಿದರು. ಸರ್ವ ಮಕ್ಕಳು ದುಃಖಪೀಡಿತರಾಗಿ ಅಳಲಿಕ್ಕೆ ಪ್ರಾರಂಭಿಸಿದ್ದಾರೆ. ಎಲ್ಲಿ ನೋಡಿದರೂ ದುಃಖ ಭೂತಾಕಾರವಾಗಿ ನಿಂತಿದೆ.

ಈ ಎಲ್ಲ ಮಕ್ಕಳನ್ನು ದಿಕ್ಕೇಡಿಗಳನ್ನಾಗಿ ಮಾಡಬೇಡಿ ಗುರುವೆ ! ನೀವಿ ಲ್ಲದ ಬಾಳು ಬರಡಾಗುವದು ನೀವಿಲ್ಲದ ಸಂಸ್ಥೆ ಅನಾಥವಾಗುವದು; ಕಾರಣ ನೀವು ಇಷ್ಟು ಬೇಗ ನಮ್ಮ ಕೈ ಬಿಟ್ಟರೆ ನಮ್ಮ ಗತಿಯೇನು ? ಎಂದು ಪುಟ್ಟ ರಾಜರು ದುಃಖದಿಂದ ಗುರುಗಳಲ್ಲಿ ಕೇಳಿಕೊಂಡರು.

ಆಗ ಗುರುವರ್ಯರು ಹೀಗೆ ಅಪ್ಪಣೆ ಕೊಡಿಸುತ್ತಾರೆ.......................

ಪುಟ್ಟಯ್ಯ; ದುಃಖಿಸಬೇಡ; ಹುಟ್ಟಿಬಂದವರಿಗೆ ಮರಣ ಕಟ್ಟಿಟ್ಟ ಬುತ್ತಿ " ಮರಣವನ್ನು ಮಹಾನವಮಿ " ಯಂತೆ ಖರಮಾಡಿಕೊಂಡರು, ನಮ್ಮ ಶರ ಣರು. ಅಂದಾಗ ನೀವುಗಳೆಲ್ಲರೂ ಈ ರೀತಿ ದುಃಖಿಸುವದೇ. ?

ಮಹಾ ಜನಗಳೇ, ಇಂದಿನಿಂದ ನನ್ನಸ್ಥಾನವನ್ನು ನನ್ನೀ ಪುಟ್ಟ ಶಿಷ್ಯ ನಾದ ಪುಟ್ಟರಾಜನಿಗೆ ಬಿಟ್ಟು ಕೊಟ್ಟು ಹೋಗುತ್ತೇನೆ. ಇಷ್ಟು ದಿನ ನನ್ನಿಂದ ಆದಾವರೀತಿ, ಸಮಾಜ ಸೇವೆ ಮಾಡಿಸಿಕೊಂಡಿರೋ ಆದೇರೀತಿ ಪುಟ್ಟರಾಜ ನಿಂದಲೂ ಸೇವೆ ಮಾಡಿಸಿಕೊಳ್ಳಿರಿ ನನ್ನ ಮೇಲಿನ ಪ್ರೀತಿ ವಾತ್ಸಲ್ಯಗಳನ್ನೇ ಇವನಲ್ಲಿಟ್ಟು ಕಾಣಿರಿ, ಸಹಕರಿಸಿರಿ, ಎಂದು ಗದ್ಗದಿತಕಂಠದಿಂದ ಗುರುಗಳು ನುಡಿದಾಗ ಸಮಸ್ತರಿಗೂ ದುಃಖದ ಕಡಲು ಉಕ್ಕಿಬರತಾಯಿದೆ.

ಈ ನಮ್ರ ಪುಟ್ಟರಾಜನಂತೂ ಗುರುಗಳ ಮಾತು ಕೇಳಿ ದಿಗ್ಮೂಢನಾಗಿ; ಧೃತಿಗೆಟ್ಟವನಾಗಿ; ಮತಿ ವಿರಹಿತನಾಗಿ ಬೋರಾಡಿ ಅಳುತ್ತಾ....... ತಂದೆ ! ಪಕ್ಷಿಯ ಮೇಲೆ ಪರ್ವತ ಹೇರುವವೆ ? ಏನೂ ಅರಿಯದ ಈ ಅಜ್ಞಾನ ಮೇಲೆ ಇಂಥಾ ಭಾರವಾದ ಸಮಾಜ ಕಾರ್ಯವನ್ನು ಹೊರಿಸುವವೇ ? ಈ ಮಹಾ ಕಾರ್ಯ ನನ್ನಿಂದ ಪೂರ್ತಿಯಾಗುವದಿಲ್ಲ, ಇದಕ್ಕೆ ನೀವೇ ಸಮರ್ಥರು. ಕಾರಣ ನೀವೇ ಇನ್ನೂ ಕೆಲವು ದಿನವಿದ್ದು ಈ ಮಹತ್ ಕಾರ್ಯವನ್ನು ನಡೆಸಿಕೊಂಡು ಹೋಗಬೇಕು. ಎಂದು ಗುರುಗಳ ಮಡಿಲಲ್ಲಿ ಅಶ್ರುಧಾರೆಯರೆದರು; ದಿಟ್ಟೆಯಿರದ ಪುಟ್ಟರಾಜರು.

ಆಗ ಗುರುವರ್ಯರು ಆತ್ಮೀಯತೆಯಿಂದ ಪುಟ್ಟರಾಜರ ಮೈದಡವಿ. ಹೆದರದಿರು ಪುಟ್ಟಯ್ಯ ! ನಿಷ್ಠೆಯಿಂದ ಇಷ್ಟಲಿಂಗವನ್ನು ಯಜಿಸುತ್ತ; ಶ್ರೇಷ್ಠ ಗುರು ಕುಮಾರನಲ್ಲಿ ಅಚಲವಾದ ಭಕ್ತಿಯಿರಿಸಿ ಸಮಾಜ ಸೇವೆಗೆ ಟೊಂಕಕಟ್ಟಿ ನಿಲ್ಲು ! ಅಂದರೆ ನಿನಗೆ ಯಾವದೇ ರೀತಿಯಿಂದ ಕಷ್ಟಗಳು ಬರುವದಿಲ್ಲ. ಕಷ್ಟಗಳೆಲ್ಲ ನನ್ನ ತಲೆಯ ಮೇಲಿಟ್ಟುಕೊಂಡು ನಿನ್ನ ತಲೆಯ ಮೇಲೆ ಸುಖ ಶ್ರೇಯಸವಬಟ್ಟೆಯನ್ನು ಹೊರಿಸುತ್ತೇನೆ" ಎಂದು ಭವಿಷತ್ ನುಡೀತ್ತಾರೆ ಗುರುವರ್ಯರು — ಗುರುಲಿಂಗ ಜಂಗಮರ ವಿಧೇಯನಾಗಿ, ಕರ್ತವ್ಯಶೀಲನಾಗಿ, ಕೋಪರಹಿತನಾಗಿ, ಕರ್ತವ್ಯಶೀಲನಾಗಿ, ಹರಭಕ್ತಿಯುತನಾಗಿ, ಕಾಯಕ ನಿರತನಾಗಿ ಸಾಗು ! ಅಂದರೆ ಹುಡುಕುತ್ತ ಬರುವದು ನಿನಗೆ ಯಶಸ್ಸು

ಧೈರ್ಯಂ ಸರ್ವತ್ರ ಸಾಧನಂ।
ಧೈರ್ಯಂ ಪ್ರಗತಿ ಮೂಲಂ ।

—ಸುಭಾಷಿತ

ಯಾವದೇ ಕಾರ್ಯದಲ್ಲಿ ಧೈರ್ಯಗುಂದಬೇಡ. ಹಿಡಿದ ಕಾರ್ಯ ಬಿಡಬೇಡ. ಅಲ್ಲದ ಕೆಲಸಕ್ಕೆ ಕೈ ಹಾಕಬೇಡ. ಸಮಾಜ ಮೆಚ್ಚುವಂಥ ಕಾರ್ಯ ಸದಾಮಾಡು.

"ಸತ್ಯಂ ವದ, ಧರ್ಮಂ ಚರ, ಸ್ವಾಧ್ಯಾಯಾನ್ಮಾ ಪ್ರಮದ :
ಆಚಾರ್ಯಾಯ ಪ್ರೀಯಂಧನಂ ಆಹೃತ್ಯ ಪ್ರಜಾ ತಂತುಂ
ಮಾ ವ್ಯವ ಚ್ಛೇತ್ಸೀಃ"
ಸತ್ಯಾನ್ನ ಪ್ರಮುದಿತವ್ಯಂ, ದೇವ ಪಿತೃ ಕಾರ್ಯಾಭ್ಯಾಂ

ನ ಪ್ರಮದಿತವ್ಯಂ, ಮಾತೃ ದೇವೋಭವ, ಪಿತೃ
ದೇವೋಭವ, ಅತಿಥಿ ದೇವೋಭವ, ಯಾನಿ ಅನವದ್ಯಾನಿ
ಕರ್ಮಾಣಿ ತಾನಿ ಸೇವಿತವ್ಯಾನಿ, ನೋ ಇತರಾಣಿ
ಯಾನಿ ಅಸ್ಮಾಕಂ ಸುಚರಿತಾನಿ ತಾನಿತ್ವಯೋಪಸ್ಯಾನಿ,
ಶ್ರದ್ಧ ಯಾದೇಯಂ, ಅಶ್ರದ್ಧಯಾದೇಯಂ,
ಶ್ರಿಯಾ ದೇಯಂ ಭಿಯಾದೇಯಂ.

॥ ತೈತ್ತರೀಯೋಪನಿಷತ್ ॥

ಸದಾ ಸತ್ಯವನ್ನೇ ನುಡಿ, ಧರ್ಮವನ್ನಾಚರಿಸಿ,ಅಧ್ಯಯನ ಮರೀಬೇಡ, ಗುರು ನಿನಸಲುವಾಗಿ ಪ್ರಿಯವಾದ ಸಂಪತ್ತನ್ನು ಕೊಡು, ಕೊಟ್ಟಮಾತಿಗೆ ತಪ್ಪಬೇಡ, ಧರ್ಮದ ಕಟ್ಟಳೆಯನ್ನು ಮೀರಬೇಡ, ಕುಶಲತೆಯಿಂದ; ಪ್ರವಚನದಿಂದ; ಸಂಪತ್ತಿ ನಿಂದ ದೇವತೃಪ್ತಿ ಕಾರ್ಯದಿಂದ ತಪ್ಪಬಾರದು,ತಂದೆತಾಯಿಗಳನ್ನು ದೇವರೆಂದು ಭಾವಿಸು, ಅಥಿತಿಗಳನ್ನು ಸತ್ಕರಿಸು, ಶಿಷ್ಟ ಕಾರ್ಯಗಳನ್ನು ಮಾಡು, ಅನಿಷ್ಟ ಕಾರ್ಯಗಳನ್ನು ಬಿಡು, ಪುರಾತನ ಶರಣರ ಚರಿತ್ರೆಗಳನ್ನು ಪ್ರಚಾರ ಮಾಡು, ಗುರು, ಲಿಂಗ, ಜಂಗಮರಿಗೆ ಶ್ರದ್ಧೆಯನ್ನು ಕೊಡು.

ಶಿವಭಕ್ತನಿದ್ದ ತಾವೇ ದೇವಲೋಕವೆಂದು ತಿಳಿ,
ಸತ್ಯವನುಡಿವದೇ ದೇವಲೋಕ! ಅ।
ಸತ್ಯವ ನುಡಿಯುವದೇ ಮರ್ತ್ಯಲೋಕ।
ಆಚಾರವೇ ಸ್ವರ್ಗ, ಅನಾಚಾರವೇ ನರಕ।
ಅಯ್ಯಾ ಎಂದೊಡೆ ನಾಕ, ಎಲವೋ ಎಂದೊಡೆ ನರಕ! ಪು।
ಟ್ಟಯ್ಯ ಅರಿಯಯ್ಯ! ಮೃದು ವಚನ ಜಪವಯ್ಯ।
ದಯವಿಲ್ಲದ ಧರ್ಮ ಆವುದಯ್ಯ? ದಯವಂತನಾಗಯ್ಯ॥
ಕಾಂಚನವೆಂಬ ಹುಚ್ಚುನಾಯಿಯ ಬೆನ್ನು ಹತ್ತದಿರಯ್ಯ
ವಂಚನೆಯ ಕಾಕ ಪಶುವಿನ ಸ್ನೇಹ ಎಂದಿಗೂ ಬೇಡಯ್ಯ।
ಪರನಿಂದೆ ಮಾಡದೆ; ಆತ್ಮಸ್ತುತಿಬೇಡದೆ;
ಗುರುನಿಂದೆ ಕೇಳದೆ, ಕುಂದಾಗದಂತೆ ಸಾಗಯ್ಯ।
ವಂದಿಗನಾಗಯ್ಯ! ಮುಂದಿಗನಾಗಯ್ಯ! ಪುಟ್ಟಯ್ಯ।

ಜಾತಿ ವಿಜಾತಿಯೆಂದೆನಬೇಡ; ಸಮತೆಯಲಿ ಸರ್ವರಿಗೂ ಸಮದೃಷ್ಟಿಯಿಂದ ನೋಡು, ವಿದ್ಯೆಯನು ಕಲಿಸು ಪರಸ್ತ್ರೀಯಿಂದ ದೂರವಿರು ದೂರದಿಂದಲೆ,

ಮಾತೆಯೆಂಬ ಭಾವದಿ ಕಾಣು ! ಭಕ್ತಿಮಾಡು; ಮುಕ್ತಿಬೇಡು, ಶಿವನಕೂಡು ಎಂದು ಆಶೃದುಂಬಿದ ಕಂಗಳಿಂದ ವಿರಹದುಂಬಿದ ಭಾವದಿಂದ ಉಪದೇಶಿಸಿ ತಮ್ಮ ರುದ್ರಾಕ್ಷಿಗಳನ್ನು ಪುಟ್ಟರಾಜರಿಗೆ ಧರಿಸಿ; ಹರಿಸಿದರು ಗುರುವರ್ಯರು.

" ಇಂದಿನಿಂದ ನೀನು ಸಮಾಜಕ್ಕಾಗಿ ದುಡಿ, ನಾನು ನಿನಗಾಗಿ ದುಡಿಯುತ್ತೇನೆ, ಕುಮಾರ ಶಿವಯೋಗಿ ನಮಗಾಗಿ ದುಡಿಯುತ್ತಾನೆ" ಎಂದು ಆತ್ಮೀಯತೆಯಿಂದ ಪುಟ್ಟರಾಜರನ್ನು ಅಪ್ಪಿಕೊಂಡು- " ಪುಟ್ಟರಾಜ ರಾಜೇಯದಲ್ಲಿ ಬಾಳಿ ಬೆಳಗು ಎಂದು ಪುಟ್ಟರಾಜರ ಶಿರದಮೇಲೆ ಕರವಿರಿಸಿ ಆಶೀರ್ವದಿಸಿ ಗುರುವರ್ಯರು ಸ್ನಾನಕ್ಕೆ ತೆರಳಿದರು.

ದುಡಿಯಾಗಿ; ದೃಢಧ್ಯಾನದಿ; ಲಿಂಗಪೂಜೆಯ ಮಾಡಿ; ಗುರುವಿನ ಪಾದೋದಕ ಸ್ವೀಕರಿಸಿ ಬಾಹ್ಯ ಪ್ರಪಂಚದ ಮರೆತರು; ಶಿವ ಪ್ರಪಂಚದಲ್ಲಿ ಬೆರೆತರು, ಪಂಚಾಕ್ಷರರು.

ಶ್ವಾಸಕಟ್ಟಾಯಿತೇ, ವಿನಃ ಈಶ (ಲಿಂಗ) ಪೂಜೆ ಕಟ್ಟಾಗಲಿಲ್ಲ. ಜೀವವಿಲ್ಲದ ಮುಂಡ ರುಂಡ ಮಾಲನಿಗೆ (ಲಿಂಗಯ್ಯನಿಗೆ) ಪತ್ರಿ ಪುಷ್ಪಾದಿಗಳನ್ನು ಧರಿಸುತ್ತಿದೆ. ಆಶ್ಚರ್ಯ.... ಶರೀರದ ವ್ಯವಹಾರ ನಿಂತಾಗ ಬರೀ ಕೈಯೊಂದೆ ಲಿಂಗಯ್ಯನ ಪೂಜೆ ಮಾಡುತ್ತಿದೆ. ಎಂಥ ಆಶ್ಚರ್ಯ. ಇದುವೇ ಅಂಗಲಿಂಗ ಸಾಮರಸ್ಯ ಈಶಾನುರಾಗ ರಹಸ್ಯ.

ಜೀವ ಹೋದರು ಭಾವಕ್ಕೆ ಬರಡಿಲ್ಲ.
ಅಂಗಗತಿ ಸತ್ತಿದ್ದರೂ ಲಿಂಗಗತಿ ಸತ್ತಿಲ್ಲ.
ಇದೇ ಅಲ್ಲವೇ ನಮ್ಮ ಹಿಂದಿನ ಪುರಾತನರ ಭಾವೈಕ್ಯ
ಸದ್‌ಗುರು ಪಂಚಾಕ್ಷರಿಯ ಶಿವೈಕ್ಯ ಲಿಂಗೈಕ್ಯ.

ಗುರುಗಳು ನಮ್ಮಿಂದ ದೂರಾಗುತ್ತಾರಲ್ಲ ಎಂಬ ವಾರ್ತೆಯಿಂದ ಜನಸ್ತೋಮ ಕಂಣೀರ್ಗರೆಯುತ್ತಿದೆ. ಜಗವೇ ಕಣ್ಣೀರ್ಗರೆಯುತ್ತಿದೆ. ಗುರುಗಳ ಲಿಂಗೈಕ್ಯಕಾಲದ ಲಿಂಗಪೂಜೆಯು ಆಶ್ಚರ್ಯವನ್ನುಂಟುಮಾಡಿತು; ದೇವಭಾವ ಬೆರೆಸಿತು ಮಾನವರೂಪದಿಂದ ಬಂದ ಮಹದೇವ! ಈ ಗುರುದೇವ ! ! ಎಂದು ಜಗತ್ತು ಜಗತ್ತಿನ ಜನ ಅರಿತು; ಭಕ್ತಿಯಲ್ಲಿ ಬೆರೆತು; ವಂದಿಸಿತು.

ಯಥಾನದ್ಯಃ ಸ್ಯಂದಮಾನಾಃ ಸಮುದ್ರೇ-
-ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ।
ತಥಾ ವಿದ್ವಾನ್ ನಾಮರೂಪಾದ್ವಿ-
-ಮುಕ್ತಃ ಪರಾತ್ಪರಂ ಪುರುಷ ಮುಪೈತಿ ದಿವ್ಯಂ।

ಸಮುದ್ರಾಭಿಮುಖವಾಗಿ ನದಿಗಳು ಹರಿದು ಸಮುದ್ರ ನಾಥನಲ್ಲಿ ಕಲೆತು ಬೆರತು ಹೋಗುವಂತೆ; ಅವುಗಳ ನಾಮಗಳಳುಕಿ ಸಮುದ್ರ ನೆಂಬೊಂದೆ ನಾಮಯುಕ್ತ ವಾಗುತ್ತಿವೆ. ಅದರಂತೆ ಷೋಡಶಕಲೆಗಳು ಪುರುಷನಲ್ಲಿ ಕಲೆತು ಪುರುಷನೇ ಆಗುತ್ತಾನೆ. ಅವನೇ ಕಲಾರಹಿತ; ಅತೀತ; ಅಮೃತವೆಂದು ಸಾರುವ ಮುಂಡಕೋಪನಿಷತ್ತಮುಕ್ತಿಯಂತೆ— ಗುರುವರ್ಯ ಪಂಚಾಕ್ಷರಿಯವರ ಸ್ಥಿತಿಯಾಗಿದೆ.

"ಕ್ಷುತ್ಪಿಪಾಂಸೆ, ಶೋಕ ಮೋಹ, ಮದ-
ಮತ್ಸರವೆಂಬ ಷಡ್ವರ್ಗಂಗಳು ಇಲ್ಲದಿರುತಿಪ್ಪನು.
ನಾಹಂ, ಕೋಹಂ, ಸೋಹಂ ಎಂಬ ಭಾವ ವಿ-
ರಹಿತನಾಗಿಪ್ಪನು. ಅಷ್ಟ ವಿಡಾರ್ಚನೆ ಷೋಡಶೋಪಚಾರ ವಿ-
-ರಹಿತನಾಗಿಪ್ಪನು. ಕರ್ಪೂರ ಅಗ್ನಿ ಸಂಯೋಗವಾಗಿ
ಕರ್ಪೂರದ ಗುಣವಳಿದು ಅಗ್ನಿಯಾದಂತೆ ಲಿಂ-
ಗಪತಿಯ ನೆನೆನೆನೆದು ಲಿಂಗವೇ ತಾನಾ-
ಗಿಪ್ಪುದೀಗ ನಿಜೈಕ್ಯ ಸ್ಥಲ ವೆಂದೆಂಬೆನಯ್ಯ
ಅಪ್ಪ ಮಹಾಲಿಂಗ ಗುರು ಸಿದ್ಧೇಶ್ವರ ಪ್ರಭುವಯ್ಯ!"

ಈ ವಚನವನ್ನು ಪರಮತ್ವದ ಪಾತ್ರೆಯಲ್ಲಿ ಪಚನವಾಗಿಸಿಕೊಂಡ ಗುರುದೇವ ಪಂಚಾಕ್ಷರ ಗವಾಯಿಗಳವರ ಅಂಗ ಲಿಂಗವನೆನೆನೆನೆದು; ಲಿಂಗವ ಯಜಿಸಿ; ಲಿಂಗವೇ ಆಯಿತು ಕ್ರಿ. ಶ. ೧೯೪೪ರ ಜೂನ್ ಭಾನುವಾರ. (ಜೇ. ಬ. ಪಂಚಮಿ) ದಂದು ಗವಾಯಿಗಳವರು ಲಿಂಗವೇ ಆದರು.

ಯಥೋದಕಂ ಶುದ್ಧೇ ಶುದ್ಧ ಮಾಸಿಕ್ತಂ ತಾದೃಗೇವ ಭವತಿ।
ಏವಂ ಮುನೇರ್ವಿಜಾನತಃ ಆತ್ಮಾಭವತಿ ಗೌತಮ॥
"ಕಠೋಪನಿಷತ್"

ಶುದ್ಧೋದಕದಲ್ಲಿ ಶುದ್ಧೋದಕವು ಕೂಡಿ ತದ್ರೂಪವಾಗುವಂತೆ ಜ್ಞಾನಿಯ ಆತ್ಮವೂ ಕೂಡಾ ತದ್ರೂಪ ಪರಬ್ರಹ್ಮ ಸ್ವರೂಪವಾಯಿತು; ಜಗತ್ ಪೂಜ್ಯವಾಯಿತು.

"ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾಪಿ
ಎಣಿಸಬಾರದ ಬಹುಳ ಬ್ರಹ್ಮಕ್ಕೆ ಎಣೆಯಾವುದು ಹೇಳಾ ?
ಅಗಣಿತ ನಕ್ಷೆಯ ಸರ್ವ ಜೀವಮನಃ ಪ್ರೇರಕ
ಅಗಜ್ಞ ಸರ್ವಜ್ಞ ಏಕೋದೇವ ಸಂನಿತ್ಯಪ್ರಕಾಶ
ಪರಮೇಶ್ವರನ ಮನವೆಂಬ ದರ್ಪಣದೊಳಗೆ
ಬಿಂದ್ವಾಕಾರರೂಪನಾಗಿ ಬೆಳಗಿ ತೋರುವ ಶಿವನ
ಅಂದವ ತಿಳಿದು ನೋಡಿ ಕೂಡಬಲ್ಲಾತನೇ ಪರಶಿವಯೋಗಿ,
ಆತ ಜನನ ಮರಣ ವಿರಹಿತ,
ಆತನೇ ಸರ್ವಜ್ಞನು,
ಆತನೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು."

ಅಣೋರಣೀಯಾನಹಮೇವ ತದ್ವನ್ಮಹಾನಹಂ ವಿಶ್ವಮಹಂ ವಿಚಿತ್ರಂ ।
ಪುರಾತನೋಽಹಂ ಪುರುಷೋಽಹಮೀಶೋ ಹಿರಣ್ಮಯೋಽಹಂ
ಶಿವರೂಪಮಸ್ಮಿ ॥

"ಕೈವಲ್ಯೋಪನಿಷತ್"

ಮೇಲಿನ ವಚನೋಪನಿಷತ್‌ಗಳ ಅಭಿಮತಕ್ಕೊಪ್ಪಿತನಾಗಿ, ಗುರುವರ್ಯರಾದರು ಸರ್ವೇಶ್ವರ; ಸರ್ವಜ್ಞ; ಗಾನಯೋಗಿ; ಶಿವಯೋಗಿ ಪರಮ ಶಿವಯೋಗಿ.

ಉಭಯೋರಪಿ ಪಾರ್ಶ್ವವರ್ತಿನಾಂ ತಾಮಸಲೇನಾರ್ತರ ವೇಣವೇಜಿತಾಃ ।
ವಿಹಾಗಾಃ ಕಮಲಾಕರಾಲಯಾಃ ಸಮದುಃಖಾ ಇವತತ್ರ ಚುಕ್ರುಶುಃ

"ರಘುವಂಶ"

ಇಂದುಮತಿಯಗಲುವಿಕೆಯಿಂದ ವನವೆಕಿತ್ತಂತೆ ಶ್ರೀ ಗವಾಯಿಗಳವರ ಅಗಲುವಿಕೆಯಿಂದ ಇಡಿ ಪ್ರಕೃತಿಯೇ ದುಃಖಿಸಿದೆ.

ಗುರುವಿನಾಜ್ಞೆಯನ್ನು ಶಿರಸಾ ವಹಿಸಿ ಸ್ವೀಕರಿಸಿ; ಗುರುವಿನ ಸಂಸ್ಥೆಯ ಸಂಪೂರ್ಣ ಭಾರವನ್ನು ನಿರ್ವಹಿಸಿಕೊಂಡು ಹೊರಟಿದ್ದಾರೆ ಪುಟ್ಟರಾಜರು, ದಿಟ್ಟ ತೇಜರು.

---

ಬಸರಿಗಿಡದ ವೀರಪ್ಪನವರು ದಾನವಾಗಿ ಕೊಟ್ಟ ಜಮೀನಿನಲ್ಲಿ ಗುರುಗಳ ಗದ್ದುಗೆಯಾಗಿದೆ. ಗದ್ದುಗೆ ಮುಂಭಾಗದಲ್ಲಿಯೇ ವೀರೇಶ್ವರ ಪುಣ್ಯಾಶ್ರಮವಾಗಿದೆ. ಈ ಸ್ಥಳವೀಗ ಯಾತ್ರಾಸ್ಥಳವಾಗಿದೆ.

ಲಿಂಗಾಂಗಿಯಾಗಿ; ಬ್ರಹ್ಮಚಾರಿಯಾಗಿ: ಸಸಾಜಾನುರಾಗಿಯಾಗಿ: ಗುರು ಸಂಸ್ಥೆ ಸಂಗೀತ ಸಾಹಿತ್ಯನಾಟ್ಯ ಮಹಾವಿದ್ಯಾಲಯದ್ವಯಗಳ ಸಂಚಾಲಕ ರಾಗಿ, ದಕ್ಷತೆಯ ಗಡಿದಾಟಿ ಬಾಳುತ್ತಿದ್ದಾರೆ: ಬೆಳಗುತ್ತಿದ್ದಾರೆ-

ಸೂರ್ಯ ಅಸ್ತವಾಗುವಾಗ್ಗೆ ತನ್ನ ಪ್ರಕಾಶವನ್ನು ಚಂದಿರನಲ್ಲಿರಿಸಿ ಮರೆಯಾಗುವಂತೆ ಗುವರ್ಯರು ಪುಟ್ಟರಾಜರಲ್ಲಿ ತಮ್ಮ ಶಿವಪ್ರಕಾಶವನ್ನಿರಿಸಿ ಹೋಗಿದ್ದಾರೆ. ಅಂತೇ ಕಲಿತ ವಿದ್ಯೆಗಳು ಪ್ರಭಾವ ಪೂರ್ಣವಾಗಿ ವೃದ್ಧಿಯಾ ದವು ಪುಟ್ಟರಾಜರ ಶುದ್ಧ ಹೃದಯದಲ್ಲಿ

ಪುಟ್ಟರಾಜರ ಪ್ರಗತಿಯನ್ನೀಕ್ಷಿಸಿದರೆ " ರವಿ ಮುಳುಗಿದ, ಅವನ ಪರಪ್ರ ಕಾಶದಿಂದ ಚಂದ್ರ ಮೊಳಗಿದ" ಎನ್ನುವ ಭಾವ ಜಗದ ಜೀವದಿಂದ ವುಶಿರಾಗಿ ಸೂಸುತ್ತಿತ್ತು, ಮಾತಾಗಿ ಹೊರಬರತ್ತಿತು.



# ಪುಟ್ಟರಾಜರ ಮದುವೆ, ಶ್ರೇಷ್ಠ ಸಾಹಿತ್ಯ ಜಗವೆ

ಜಯಂತಿತೇ ಸುಕೃತಿನೋರಸಸಿದ್ಧಾಃ ಕವೀಶ್ವರಾಃ ;
ನಾಸ್ತಿಯೇಷಾಂ ಯಶಃ ಕಾಯೇಜರಾಮರಣಜಂಭಯಂ ॥
" ಸುಭಾಷಿತ "

ಪರರ ಕೃತಿಗಳನ್ನು ಸತ್ಕರಿಸಿ, ಆದರಿಸಿ, ಸ್ವೀಕರಿಸಿ, ಹೊಸ ಪೆರುಗನ್ನು ಅಳವಡಿಸುವದು ಹರಣವಲ್ಲ ಸ್ವೀಕರಣ. ಈ ರೀತಿ ಮಾಡದೆ ಆವನೂ ಕವಿಯಾಗಿಲ್ಲ, ಇದನ್ನು ಮಾಡದವನು ಕವಿಯೇ ಅಲ್ಲ.

ಶ್ರೇಷ್ಠರ ಅಮರ ಕೃತಿಗಳನ್ನು ಓದಿ ಮನನಿಸಿ, ಜ್ಞಾನಿಸಿ ಅದರ ಸಾರ ಹೀರುವ ರಸಿಕನೇ ಸಾಹಿತಿಯಾಗ ಬಲ್ಲ; ಸಾಹಿತ್ಯ ಬರೆಯಲಿಕ್ಕೆ ಸಮರ್ಥನಾಗ ಬಲ್ಲ.

ಜಗದಿಂದ ಕಲಿಯದೆ, ಜನರಿಂದ ಕಲಿಯದೆ, ಕಿರಿಯರಿಂದ ಕಲಿಯದೆ, ಹಿರಿಯರಿಂದ ಕಲಿಯದೆ, ನೋಡಿ ಕಲಿಯದೆ, ಕೂಡಿ ಕಲಿಯದೆ, ಕಾಡಿ ಕಲಿಯದೆ, ಕೇಳಿ ಕಲಿಯದೆ, ಯಾರೂ ಏನೂ ಮಾಡಲಾರರು.

ಕೆಲವಂ ಬಲ್ಲವರಿಂದ ಕಲ್ತು,
ಕೆಲವಂ ಶಾಸ್ತ್ರಂಗಳಂ ಕೇಳುತಂ
ಸೋಮೇಶ್ವರ ಶತಕ

ಅಂತೇ ಈರೀತಿ ಹೇಳಿದ ಚರಿತ ಕವಿ, ಸುರಿತ ರವಿ, ಶಿವರವಿ, ಸೋಮೇಶ್ವರ ವಿಭವಿ.

ಮೇಲೆ ಹೇಳಿದಂತೆ:- ಕುಮಾರ ಸಂಭವ, ರಘುವಂಶ, ಶಭರಶಂಕರ ವಿಳಾಸ, ಮೇಘದೂತ, ವಿವೇಕ ಚಿಂತಾಮಣಿ, ಪರಮಾರ್ಥ ಪ್ರಕಾಶಿಕೆ, ಪರಮಾರ್ಥಗೀತೆ, ಕೈವಲ್ಯ ಪದ್ಧತಿ, ಪರಮಾನುಭವ ಬೋಧೆ,ರಾಮಾಯಣ,ಮಹಾಭಾರತ, ಶಿದ್ಧಾಂತ ಶಿಖಾಮಣಿ, ಪುರಾತನ ಶರಣರ ವಚನ ಭಾಂಡಾರ, ಮುಂತಾದ ಕನ್ನಡ ಹಾಗೂ ಸಂಸ್ಕೃತ ಗ್ರಂಥಗಳನ್ನು ಅಧ್ಯಯನ ಮಾಡಿ, ಅದರ ಸಾರ ಹೀರಿದರಷ್ಟೇ ಅಲ್ಲ, ರಾಷ್ಟ್ರಭಾಷೆ ಹಿಂದಿಯನ್ನೂ ಕೂಡಾ ಪ್ರಿಯ

ತ್ನಪೂರ್ವಕವಾಗಿ ಅಭ್ಯಸಿಸಿ;ಅರಗಿಸಿಕೊಂಡರು. ಈ ಮೂರು ಭಾಷೆಗಳಸಾಹಿತ್ಯ ಗ್ರಂಥವನ್ನು ಮೆಸ್ದು ಗೆದ್ದರು, ಹುಷ್ಟರು ಪುಟ್ಟರಾಜರು-

ಸಂಗೀತ ಸಾಹಿತ್ಯ ಒಂದೆಡೆ ನಿಲುವುದು!
ಸಂಗನ್ನ ರಕೆಯಿಂದಲ್ಲದೆ ಆಗದು!

" ಗೋಲ್ಡ ಸ್ಟಿಕ್ "

ಸಂಗೀತದಲ್ಲಿ ಪರಿಪೂರ್ಣ, ಸಾಹಿತ್ಯದಲ್ಲಿ ಅನಾವರಣತೆಯನ್ನು ಪಡೆದ ಪುಟ್ಟರಾಜರಿಗೆ ಘನತೆಯ ಜರಿ ಹರಿಯುತ್ತ ಬಂದಿತು, ಸಾಹಸದಿ ಸಂದಿಸಿತು,

ತುಂಬು ಜವ್ವನದಿ ಸಾಂಬನನುಡಿಯಿರಲಿ, ಅಂಬೆಯನುಡಿಯಿರಲಿ, ಕೇಳ ಲಿಕ್ಕೆ ಅಸಮರ್ಥ ನಾಗುತ್ತಾನೆ. ಜೀವ ಇದಕ್ಕೆ ಬಲಿಯಾದರು, ಪುಟ್ಟರಾಜರು.

ಬಳಸಿದ ಬಳ್ಳಿಯ ಜೊಂಪಂ
ಗಳ ಮಿಸುಪೆಳದಿಳಿರ ಶಾವಣಂಗಳ ಪೊಸವೂ॥
ಗಳ ನಾಂತಪುಲ್ಲಿಗೆಯ ಮನೆ
ಗಳ ಚೆಲ್ವಿಂಚೆಲ್ವನಾಂತುದಾಪೊರಲಬನಂ॥

ಕಬ್ಬಿಗರ ಕಾವ

ಸೂರ್ಯೋದಯದ ಸೊಭಗವನ್ನು ಸವಿಯುತ್ತ, ಶೃಷ್ಟಿಸೌಂದರ್ಯ ಅಂಗಳ್ಗಿ ಳಿಂದ ನೋಡುತ್ತ, ಮಲಾಪಹಾರಿಣಿಯ ಜುಳು ಜುಳು ಪ್ರವಾಹದ ಧ್ವನಿಗೇ ಳುತ್ತ, ಸೌಂದರ್ಯವಸಂತ ಪೂಗಳಮಕರಂದ ಸೇವಿಸುತ್ತ ಶೃಷ್ಟಿಸೌಂದರ್ಯದ ಆವಾರದಲ್ಲಿ ದೇಹ ವಿರಿಸಿದ್ದಾರೆ ಪುಟ್ಟರಾಜರು.

ಈ ಶುಭಸಮಯದಲ್ಲಿ ಅನುಪಮ ಸೌಂದರ್ಯಮಂಬಿದ, ತಾರುಣ್ಯ ದಿಂದುಬ್ಬಿದ, ಮೂವರು ತರುಣಿಯರು ಪುಟ್ಟರಾಜರ ಮುಂದೆ ಸುಳಿದಾಡಿದರು. ಅವರು ಸುಳಿದಾಡಿದಂತೆ ಪುಟ್ಟರಾಜರ ಸಮತೆಯಸುಳ್ಳಿ ಸರಸರನೆ ಹೊಳ್ಳಿ ಲಲನೆಯರ ಕೊಳ್ಳಿಗೆ ಜಿಗಿಯಿತು, ನೆಗೆಯಿತು.

ಎಂಥ ಸೌಂದರ್ಯ ? ಜಗತ್ತನ್ನೆ ಮರುಳುಗೊಳಿಸುವ ಮಾಧುರ್ಯ? ಶೃಷ್ಟಿ ಸೊಬಗೆ ಇವರ ಮುಖದಲ್ಲಿ ಮಿಂಚಿತ್ತಿದೆಯಲ್ಲ? ಜಗತ್ತಿನ ಜನ ಬಳಸದೇ ಇದ್ದ

ರನ್ನ ಚಿನ್ನದಿಂದಲಂಕೃತರಾಗಿ, ರಾಸ್ಕ್ರೋಫಾಕಿನಿಂದ ಭೂಷಿತರಾಗಿ ಕಂಗೊಳಿಸಿ ಈ ಮೂರು ಲಲನೆಯರು.

ತರುಣಿಯರ ಹಾವ ಭಾವಕ್ಕೆ, ಮೋಹಪಾಶಕ್ಕೆ ದೇಹದ್ವೆಯ ದಾಟಕ್ಕೆ ಕಂಣೋಟಕ್ಕೆ * ಪುಟ್ಟರಾಜರು ಮಾರು ಹೋದರು.

ಹೆಂಣು ಬಯಸಬೇಡ! ಎಂದು ಉಪದೇಶಿಸಿದ ಗುರುವಿನನ್ನು ಮರೆತರು. ಬ್ರಹ್ಮಚಾರಿತ್ವದ ಬಂಧನ ಕಡಿದರು, ಲಲನೆಯರ ಮೋಹಾಗಾರದಲ್ಲಿ ಬೆರೆತರು, ಪುಟ್ಟರಾಜರು. ಅಷ್ಟೇಅಲ್ಲ ಅವರ ರೂಪು ಸೌಂದರ್ಯಕ್ಕೆ ಮನಸೋತು, ಲಗ್ನವಾಗುವದಕ್ಕೇನೆ ಸಿದ್ಧರಾದರು.

ನಾನು ಲಗ್ನವಾಗುತ್ತೇನೆ! ನಾನು ಲಗ್ನವಾಗುತ್ತೇನೆ!! ಎಂದು ಮೂವರು ತರುಣಿಯರು ಜಗಳ ಪ್ರಾರಂಭಿಸಿದರು. ಇವನು ನನ್ನ ಮನೋಹರ! ಅಂತ ಒಬ್ಬಳೆಂದರೆ — ಇವನು ನನ್ನ ಜೊತೆಗಾರ! ನನ್ನಮನ ಸೂರೆಗೊಂಡ ಚದುರ, ಇವನೇ ನನ್ನ ಸರ್ವಸ್ವ; ಸರ್ವೇಶ್ವರ! ಎಂದು ಇನ್ನೊಬ್ಬಳು. ನಾನು ಇವನನ್ನು ಯಾರಿಗೂ ಬಿಟ್ಟು ಕೊಡಲಾರೆ. ನನ್ನ ದೇಹಸುಖಕ್ಕಾಗಿ ಮೋಹಿಸಿದ್ದಾನೆ. ನಾನಾದರೂ ಈತನನ್ನು ಮನವಾರೆ ಪ್ರೇಮಿಸಿದ್ದೇನೆ. ನನ್ನ ಹೃದಯ ಮಂದಿರದಲ್ಲಿ ದೇವನಾಗಿದ್ದು ದೇಹದ ದಾಹವನ್ನು ನೀಗಿಸುವ ತೇಜ! ನನ್ನ ರಾಜ! ಎಂದು ಮತ್ತೊಬ್ಬಳು.— ಇವರ ಜಗಳ ಅತಿಯಾಯಿತು; ಮಿತಿಮೀರಿತು.

ಆಗ ಮೂವರ ಮನಸೂರೆಗೊಂಡ ಮದನ ಪುಟ್ಟರಾಜರು ನ್ಯಾಯ ತೀರಿಸುವ ನ್ಯಾಯಾಧೀಶನಂತೆ ಹೀಗೆ ನುಡಿಯುತ್ತಾರೆ.

ಮಮ ಸಖಿಯರೆ! ನಿಮ್ಮನ್ನು ಕಂಡಾಗಿನಿಂದ ನನ್ನ ಮನಪಕ್ಷಿ ನಿಮ್ಮಲ್ಲಿ ಕೇಂದ್ರೀಕೃತವಾಗಿ, ಬಂಧುರವಾದ ಗೂಡುಕಟ್ಟುವದರಲ್ಲಿದೆ. ನೀವು ಮೂವರು ನನಗೆ ನನ್ನ ಹೃದಯ ದೇವಗೆ ಪೂಜಾರಿಯಾಗಿರ್ರಿ. ಮೂವರಿಗೆ ನಾನು ಪ್ರೇಮಪೂರಿತವಾಗಿ; ನೇಮ ಪೂರಿತವಾಗಿ; ಹೃದಯ ಪೂರಿತವಾಗಿ ಸ್ವಾಗತಿಸುತ್ತೇನೆ. ಎಂದು ಮೂವರನ್ನೂ ಆಲಿಂಗಿಸಿ, ಮದುವೆಯ ಕಟ್ಟಳೆ ಮೀರಿ ಚುಂಬಿಸಿ;ಆನಂದಿಸುತ್ತಾನೆ ಪುಟ್ಟರಾಜ! ಪ್ರೇಮರಾಜ!! ಕಾಮರಾಜ!!!

* ಒಳಗಂಣುಗಳು.

ಪುಟ್ಟರಾಜರ ಮದುವೆಗೆ ವನವೇ ಸಾಧನವಾಯಿತು. ಮಲ್ಲಿಗೆಯಾದಿ ಪುಷ್ಪಕಂಠಿಗಳು ಮಂಟಪವಾಗಿದೆ. ಗಿಡಮರಗಳೇ ನೆಂಟಸ್ಥರಾಗಿವೆ. ಕೊಳವೇ ಅರ್ಘ್ಯಾರ್ಘವಿಯಭಿಷೇಕ ಸಜ್ಜಿಕೆಯಾಗಿದೆ. ಗಾಳಿಯಲ್ಲಿ ತೂರಾಡುವ ಪರ್ಣಗಳೇ ಬಂಣದ ಪರಿಪರಿಗಳಾಗಿವೆ. ತಾಳೆಗರಿಗಳೇ ಚಾಮರಗಳಾಗಿವೆ. ತೆಂಗಿನ ತೋಪುಗಳೇ ಛತ್ರಿಗಳಾಗಿವೆ. ವನದೇವಿಯೇ ಧಾರೆಯುವಳಾಗಿದ್ದಾಳೆ. ಪಂಚ ದಿಕ್ಕುಗಳೇ ಪಂಚ ಮುತ್ತೈದಿಯರಾಗಿದ್ದಾರೆ. ನಕ್ಷತ್ರಗಳೇ ಮಣಿಯಾದಿ ಆಭರಣಗಳಾಗಿವೆ. ಹಕ್ಕಿಗಳ ಗುಂಜಾರವೇ ಮಂಗಲ ವಾದ್ಯವಾಗಿ ಮೊಳಗುತ್ತಿವೆ.

ಈ ಶೃಷ್ಟಿಯಂಗಳದ ಮಂಗಲದಲ್ಲಿ ಈ ಮೂವರಂಗನೆಯರಿಗೆ ಮಾಂಗಲ್ಯ ಕಟ್ಟಿ ಗಾಂಧರ್ವ ವಿವಾಹವಾದರು ಪುಟ್ಟರಾಜರು.

ಈ ಮದುವೆಯು ಬ್ರಹ್ಮಗಂಟು ದೈವದ ನಂಟು; ಪ್ರೇಮದ ಕಗ್ಗಂಟು; ಎಂದಿಗೂ ಅಗಲದ ಅಗಜೆಯಾಂಟು.

ಮೂರು ಕಣ್ಣುಳ್ಳ ಮುಕ್ಕಣ ಒಂದೇ ಹೆಣ್ಣನ್ನು ಮದುವೆ ಮಾಡಿ ಕೊಂಡರೆ- ಒಂದೂ ಕಣ್ಣಿಲ್ಲದ ಪುಟ್ಟರಾಜ ಮೂರು ಹೆಂಣುಗಳನ್ನು ಮದುವೆ ಯಾದ. ಎಂಥ ಸಾಹಸ? ಕಾರುಣ್ಯ ತಾಮಸ? ಇದೆಂಥ ಮಯಾ ಮೋಹದ ಪರಿಹಾಸ?

ಅಂತೂ ಪುಟ್ಟರಾಜ ಮದುವೆ ಮಾಡಿಕೊಂಡ; ಮದುವೆಯ ಸುಖ ಕಂಡ........ ಬಿಡುವಿಲ್ಲದ ಪರಿಶ್ರಮದಿಂದ ಮಕ್ಕಳನ್ನು ಹಡೆದ; ಸಂಸಾರ ಶಿಹಿ, ತಿಂದ.

ಪುಟ್ಟರಾಜರು ಬ್ರಹ್ಮಚಾರಿಗಳು! ಮಕ್ಕಳೆಲ್ಲಿಂದ ಬರಬೇಕು? ಹಾಗೆ ಹೀಗೆ ಅಂತ ಪ್ರಶ್ನೆ ಓದುಗರ ತಲೆಯಲ್ಲೋಡಾಡಬಹುದು; ಈ ವಿಷಯ್ಲ್ಲ ಸತ್ಯವೋ ಮಿಥ್ಯವೊ? ಎಂದು ಸಂಶಯುಕ್ತ ರಾಗಿದ್ದೀರಲ್ಲವೆ?

ಅಂಥಾ ವಿಷಯವೇ ಇದು. ಯಾರನ್ನು ಕರೆಸದೆ: ಕೇಳದೆ; ಯಾರಿಗೂ ಗುರ್ತಾಗದಂತೆ ಮದುವೆಯಾಗಿ ಕಳ್ಳತನದಿ ಕಾಮನಾಟವಾಡುವ ಈ ಪುಟ್ಟರಾಜರನ್ನ ಜಗತ್ತು ಹೊಗಳಬೇಕೋ? ತೆಗಳಬೇಕೋ? ನೀವೇ

ಊಹಿಸಿರಿ. ಈಗೀ ಪುಟ್ಟರಾಜರಿಗೆ ೨೫ ಮಕ್ಕಳಾಗಿವಾವೆ, ಅಂತ ಹೇಳಿದರೆ ನಂಬತೀರಾ ? ನನ್ನ ಮಾತನ್ನ ನಂಬರೀ: ಬಿಡಿರೀ. ನಾನು ಮಾತ್ರ ನಿಜ ಸ್ಥಿತಿಯನ್ನು ನಿಮ್ಮ ಮುಂದಿಟ್ಟದ್ದೇನೆ.

"ಇದು ಸುಳ್ಳು ! ಪುಟ್ಟರಾಜರು ಮದುವೆಯಾಗಿಲ್ಲ" ?

"ಇದು ಸತ್ಯ ! ಮದುವೆಯಾಗಿದ್ದಾರೆ: ಮಕ್ಕಳ್ಹಡೆದಿದ್ದಾರೆ"

"ಇದು ನಿಜವೆಂಬುದಕ್ಕೆ ಸಾಕ್ಷಿ ಏನು ?

"ಸಾಕ್ಷಿ? ಸಾಕ್ಷಿ ಪುಟ್ಟರಾಜರು."

ನನಗೆ ಲಗ್ನವಾಗಿದೆ. ಎಂದು ಅವರೇ ತಮ್ಮ ಕುಮಾರ ಗೀತೆಯಲ್ಲಿ ಹೇಳತಾರೆ ಕೇಳಿ.

ಅಷ್ಟಾದಶೇಬ್ದಕೇಪ್ರಾಪ್ತೇ ತ್ರಿಭಾಷಾ ಕವಿತಾಂಗನಾಃ ।
ವಿವಾಹಿತಾ ಮಯಾ ಲೋಕೇ ಯಶಸ್ಸಂತಾನ ಮಾಪ್ನುವನ್ ॥

" ಕುಮಾರ ಗೀತಾ "

ನನ್ನ ೧೮ನೇ ವಯಸ್ಸಿನಲ್ಲಿ ೩ ಮೂರು ವನಿತೆಯರು ಮೋಹಿಸಿ ಬಂದರು. ಕೊನೆಗೆ ಮದುವೆಯಾಯಿತು. ಅವರೇ ಕನ್ನಡ; ಹಿಂದಿ; ಸಂಸ್ಕೃತ ಕವಿತಾಂಗನೆಯರು. ಇವರ ಸಮಾಗಮನದಿಂದ ೨೫ ಮಕ್ಕಳಾಗಿದ್ದಾರೆ. ಅವುಗಳ ಹೆಸರು ಕೆಳಗಿನಂತಿವೆ ನೋಡಿ.

೧ — ಅಕ್ಕ ಮಹಾದೇವಿ ಪುರಾಣ — ಕನ್ನಡ
೨ — ಶಿವಬಸವ ಪುರಾಣ ,,
೩ — ಮಹಾಂತೇಶ ನಾಮಾವಳಿ ,,
೪ — ಭಗವನ್ ಬಸವೇಶ್ವರ ,, ನಾಟಕ
೫ — ಶಿವ ಶರಣ ಚನ್ನಯ್ಯ ,, ,,
೬ — ನೆಲ್ಲೂರ ನಂಬೆಕ್ಕ ,, ,,
೭ — ಅಕ್ಕ ಮಹಾದೇವಿ ,, ,,
೮ — ಮಲ್ಲಮಹಾದೇವಿ ,, ,,
೯ — ಫಕೀರ ಸ್ವಾಮಿ ,, ,,

| | | | | |
|---|---|---|---|---|
| ೧೦ — | ಸವತೀ ಮತ್ಸರ | ,, | ,, | |
| ೧೧ — | ಮಗನ ಪ್ರೇಮ | ,, | ,, | |
| ೧೨ — | ಮಿಂಚು | ,, | ,, | |
| ೧೩ — | ಸರ್ವ ಮಂಗಲಾ | ,, | ,, | |
| ೧೪ — | ಕಲ್ಯಾಣ ನೀಲಮ್ಮ | ,, | ,, | |
| ೧೫ — | ಕೃಷ್ಣ ಗಾರುಡಿ | ,, | ,, | |
| ೧೬ — | ದೇವರ ದುಡ್ಡು | ,, | ,, | |
| ೧೭ — | ಪ್ರಪಂಚ ಪ್ರತಾಪ | ,, | ,, | |
| ೧೮ — | ಕಿತ್ತೂರ ರುದ್ರಮ್ಮ | ,, | ,, | |
| ೧೯ — | ಕುಮಾರ ಗೀತಾ | ಕನ್ನಡ | ಅನುವಾದಿತ | ಧರ್ಮಗ್ರಂಥ |
| ೨೦ — | ಬಸವ ಪುರಾಣ | ಹಿಂದೀ | ,, | ,, |
| ೨೧ — | ರೇಣುಕಾ ವಿಜಯ | ,, | ,, | ,, |
| ೨೨ — | ಕುಮಾರ ಗೀತಾ | ಸಂಸ್ಕೃತ | ,, | ,, |
| ೨೩ — | ಸಂಗೀತ ಶಾಸ್ತ್ರಜ್ಞಾನ | ಕನ್ನಡ | ,, | ,, |
| ೨೪ — | ಸಿರಸಂಗಿ ಲಿಂಗರಾಜ | ಕನ್ನಡ | ನಾಟಕ | |
| ೨೫ .... | ಗಾನ ಸುಧಾ | ಕನ್ನಡ | ಭಾಗ ೧. | |

ಈರೀತಿ ಒಟ್ಟು ೨೫ ಮಕ್ಕಳಾಗಿದ್ದಾರೆ ಪುಟ್ಟರಾಜರಿಗೆ, ಇನ್ನೂ ಆಗುವ ಲಕ್ಷಣವಿದೆ.

ಈರೀತಿ ಪುಟ್ಟರಾಜರ ಸಂಸಾರ ಗಾಡಿ ಮುಕ್ಕಾಗದೆ ಮುಕ್ತಿ ಘಟ್ಟಕ್ಕೆ ಜೋಕ್ಕಾಗಿ ಚಲಿಸಿದೆ. ತ್ರಿಭಾಷಾಕವಿಯೆಂಬ ಬಿರುದು ಹೊತ್ತು ವುಲಿದಿದೆ; ನಲಿದಿದೆ.

ಪುಟ್ಟರಾಜರು ದಿನಗಳುರುಳಿದಂತೆ ಕವಿಶ್ರೇಷ್ಠರ ಮಾಲಿಕೆಗೆ ಮುತ್ತಾಗಿ ಒಪ್ಪಿದರು. ಅವರ ಕಾವ್ಯ ಪ್ರತಿಭೆಯನ್ನು ಭವ್ಯ ಪ್ರತಿಷ್ಠೆಯನ್ನು ಕಂಡು ಕೇಳಿ ಅಚ್ಚರಿಪಟ್ಟರು ಕನ್ನಡದ ರಸಿಕ ಸಾಹಿತಗಳು. " ಅಂಧರು ", ಅಂಧನು ಅಷ್ಟೊಂದು ಪಾಂಡಿತ್ಯ ಪಡೆದು ಸಾಹಿತ್ಯ ಸೌಗಂಧ ಬೀರುತ್ತಿದ್ದಾನಾದರೆ

ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ ? ಪುಟ್ಟರಾಜರಿಗೆ ಇಷ್ಟೊಂದು ಘನತೆ ಬರ ಬೇಕಾದರೆ ಕುಮಾರ ಶಿವಯೋಗಿಯ ಹರಕೆಯೇ ಮೂಲವಾಗಿದೆ.

ಒಮ್ಮೆ ಶಿವಯೋಗ ಮಂದಿರದಲ್ಲಿ — ಎಳೆಯ ಮಗು ಕುರುಡ ಪುಟ್ಟ-ರಾಜರನ್ನು, ಬುದ್ಧಿ ವೈಶಾಲ್ಯತೆಯನ್ನು ಕಂಡು, ಪುಟ್ಟಯ್ಯ : ಗುರುಭಕ್ತಿ ಪ್ರೀಯನಾಗಿ ಅಧ್ಯಯನ ಶೀಲ ನಾಗು ! ಅಂದರೆ ನಿನಗೆ ಎಲ್ಲ ವಿದ್ಯೆಗಳೂ ಕರತಲಾಮಲಕ ವಾಗುತ್ತಿವೆ. ಅಲ್ಲದೆ "ವರಕವಿ" ಪದವಿ ಹಗುರಾಗಿ ಬರು ತ್ತಿದೆ. ಎಂದು ಪುಟ್ಟರಾಜರ ತಲೆಯಮೇಲೆ ಹಸ್ತವಿರಿಸಿ; ಮೈ ನೇವರಿಸಿ; ಹರಸಿದರು ಕುಮಾರ ಶಿವಯೋಗಿಗಳವರು. ಅವರ ಅಂದಿನ ಹರಕೆಯೇ ಇಂದು ಪುಟ್ಟರಾಜರಲ್ಲಿ ಮೊಳಕೆಯೊಡೆದು; ಸಸಿಯಾಗಿ ಬೆಳೆದು; ಬೊಮ್ಮರವಾಗಿ ನಿಂದಿದೆ; ಕವಿ ಪಟ್ಟ ಘಟ್ಟಿಯಾಗಿದೆ.

ಕವಿ ಅಂದರೇನು ? "ಕವಿ ಶಬ್ದದ ಘನತೆಯೇನು ? ಕವಿ ಎಂದು ಯಾರಿಗನ್ನಬೇಕು ? ಕಾವ್ಯ ಅಂದರೇನು ? ಕವಿ ಹೃದಯ ಎಂಥಹದು ? ಈ ಎಲ್ಲವನ್ನು ಓದುಗರು ಮೊದಲು ಅರಿಯಬೇಕು; ಅವಲೋಕಿಸಬೇಕು.

ಸಮಾಜ ಬದುಕುವಂಥ; ಜಗತ್ತುದ್ಧಾರ ಮಾಡಲ್ ಪಡುವಂಥ; ಚಿರನೂತನ ವಾದಂಥ ಕೃತಿಗಳನ್ನು ರಚಿಸಲಿಕ್ಕೆ ಸಮರ್ಥವಾದ ಜೀವಿಗೆ "ಕವಿ" ಯೆಂಬ ನಾಮಧ್ಯೇಯ ಒಪ್ಪುತ್ತಿದೆ. ಸರ್ವ ವಿಷಯಗಳನ್ನು ಸಮರ್ಥತೆ ಯಲ್ಲಿ ಅರಿತು; ನುರಿತು; ಜೀರಿಸಿರುವವನಿಗೆ ಕವಿಯೆಂಬ ಪವಿತ್ರ ಸತ್ರ ಪದವಿ ಚಿತ್ರಿತವಾಗುತ್ತದೆ; ಸತ್‌ಪಾತ್ರದಲ್ಲಿ ಸಾಗುತ್ತಿದೆ. ಕಸದಲ್ಲಿ ರಸವನ್ನು ಕಂಡು ವುಂಡು ಎಲ್ಲರಿಗೂ ವುಣಿಸುವವ, ವ್ಯಕ್ತಿ ಕವಿ ಯುಕ್ತಾಗೆ ಸಕ್ತನಾಗುತ್ತಾನೆ. ಕಾಷ್ಟಮಂ ಕೊನರಿಸಲು; ಕಲ್ಲಲ್ಲಿ ನೀರೆತ್ತಲು; ಕುರೂಪಿಯಲ್ಲಿ ಸುರೂಪಿಯುದ್‌ಭವಿಸಲು; ಕಷ್ಟದಲ್ಲಿ ಸುಖವುದಿಸಲು ಸಮರ್ಥನಾದವನು ಕವಿ. ಬಾಳಭಿತ್ತಿಯ ಸತ್ಯವನ್ನು ಅರ್ಥ ಮಾಡಿಕೊಂಡು ಜಗತ್ತಿಗೆ ಬಿತ್ತರಿಸುವ ನಿತ್ಯ ನೂತನ ನಿಕೇತನದ ನಿತ್ಯ ಛತ್ರಪತಿ—ಕವಿ.

ಬಿತ್ತರಿಸುವ ಸಾಹಿತ್ಯ ಶಾಖೆಗಳು; ಸನ್ನಿವೇಶಗಳು. ಭಾವಗಳು; ಜೀವಿ ಗಳು, ಶಕ್ತಿಗಳು; ವುಕ್ತಿಗಳು! ಛಂದಸ್ಸಲಂಕಾರಗಳು ಬಳಸುವ ಬೇರೆ ಬೇರೆ

ಕವಿಗಳ ಕವಿತ್ವ ಬೇರೆ ಬೇರೆ ಯಾಗಿರಬಹುದು. ಆದರೆ ಕವಿಯ ಹಲಯು; ಧ್ಯೇಯದಾಲಯ ಒಂದೇಒಂದು. ಶಿವಸೃಷ್ಟಿಯಲ್ಲಿ ಪ್ರತಿಸೃಷ್ಟಿಯ ಮಾಡಬಲ್ಲ ದೇವ ಈ ಕವಿ ಈ ಮಾತಿಗೆ ಸಾಕ್ಷಿ ದೇವಲೋಕವನ್ನ ಭೂಲೋಕಕ್ಕೆ ತಂದಿಳಿಸಿದ ಶಿವಶರಣರ, ಕಾವ್ಯಗಳು ಕವಿವಚನಗಳು, ಭೂತ-ವರ್ತಮಾನ-ಭವಿಷತ್ ಗಳನ್ನು ತನ್ನ ನಿರ್ಮಲಭಾವದಿಂದ ಅರಿತುಕೊಂಡು ಕಾವ್ಯರಚಿಸುತ್ತಾನೆ ಕವಿ. ಈ ಮಾತಿಗೆ ಸತ್ಯ ಚಿತ್ರ ವಾಲ್ಮೀಕಿ ರಾಮಾಯಣ, ವ್ಯಾಸ ಬಸವಪುರಾಣಗಳನ್ನು ಭವಿಷತ್ ಪುರಾಣಗಳನ್ನು ಬರೆದುದೇ ಸಾಕ್ಷಿ ಚಿತ್ರ, ಇದುವೆ ಕವಿಯ ಪಾತ್ರ. ಅಂತೇ ಗಾದೇ ಶಿದ್ಧವಾಯಿತು. "ರವಿಕಾಣದ್ದು ಕವಿಕಾಣುವ" ಎಂದು ಕವಿಯ ಕಲ್ಪನೆಯೇ ಕಾವ್ಯವಾಗಿ, ಕವಿತೆಯಾಗಿ, ಕಥೆಯಾಗಿ, ಕಾದಂಬರಿಯಾಗಿ ನಾಟಕವಾಗಿ. ರೂಪುದಾಳುತ್ತದೆ. ಜೀವನದ ವಿವಿಧ ಅನುಭವಗಳು, ಭಾವ ಭಂಗಿಗಳು ಕವಿಯ ಹೃದಯದಲ್ಲಿ ನೆಲೆಯಾಗಿ ನಿಲ್ಲುತ್ತವೆ. ಕೃತಿಯಾಗಿ ಹೊರ ಬರುತ್ತಿವೆ. ಶಬ್ದ, ಅರ್ಥ, ಭಾವ; ಅಲಂಕಾರ, ರಸ, ಧ್ವನಿ ದರ್ಶನ, ಪ್ರದರ್ಶನ ಶ್ರಿಂಗಾರ, ದುಃಖ, ಚಿಂತನೆ, ಸಾಧನೆಗಳಿಂದ ಗೂಡಿ ಕೃತಿಯಾಗಿ ಮೈದಾಳುತ್ತಿದೆ ಕವಿಯಿಂದ, ಕವಿಹೃದಯದಿಂದ. ಈ ಮಾತನ್ನ ಹಿಂದಿನವರು ಇಂದಿನವರು ಮುಂದಿನವರು ಒಪ್ಪಿಕೊಳ್ಳುತ್ತಾರೆ.

"ರಸಜೀವ ಭಾವ ಒಡಲ್ ಅರ್ಥವು ಅವಯವ ಶಬ್ದ।
ವಿರಸವೇ ನುಡಿ ಅಲಂಕಾರವೇ ತೊಡಿಕೆಯು ತ।
ವೆ ಸುಲಕ್ಷಣವೇ ಲಕ್ಷಣ ವಿಮಳ ಪದನ್ಯಾಸನದೇ ರೀತಿ-
—ಸುಕುಮಾರತೆ।
ರಸಿಕತನ ಸುಳಿಸುಖಂ ನಿಳಯವಂತಪ್ಪ ಈ।
ಪೊಸ ಕಾವ್ಯಕನ್ನಿಕೆ" "ಹರಿಶ್ಚಂದ್ರ ಕಾವ್ಯ"

ಎಂದು ರಾಘವಾಂಕ ಹರಿಶ್ಚಂದ್ರ ಕಾವ್ಯದಲ್ಲಿ ಒಪ್ಪಿ ಬರೆದಿದ್ದಾನೆ. ಕಾವ್ಯ ರಸಿಕತನದಳಿರು; ಸೊಗದಲರು ಎಂದು ಒಡನುಡಿದಿದ್ದಾನೆ. ಹಿಂದಿನ ರಾಘವಾಂಕನ ಅಭಿಪ್ರಾಯವನ್ನು ಇಂದಿನ ನಮ್ಮ ಕವಿಗಳು ಒಪ್ಪುತ್ತಾರೆ. ಅಷ್ಟೇ ಅಲ್ಲ ಆಂಗ್ಲ ಕವಿಗಳು ಒಪ್ಪುತ್ತಾರೆಂಬುವದಕ್ಕೆ ಈ ಸಾಹಿತ್ಯ ಚಿತ್ರ ನೋಡಿರಿ.

ರಸ-ಭಾವ-ಕಲ್ಪನೆಗಳ ಅಭಿವ್ಯಕ್ತಿಯು ಕಾವ್ಯ ।
ಸತ್ಯ ಸೌಂದರ್ಯಗಳ ದರ್ಶನವು ಕಾವ್ಯ ।
ನಿತ್ಯ ಜೀವದ ಅರ್ಥ ವಿವರಣೆ ಕಾವ್ಯ ।
ಕಲ್ಪ ಕತೆಯಿಂದ ಕೂಡಿದ ವಿಚಾರ-ಭಾವನೆ—
—ಗಳ ಅಭಿವ್ಯಕ್ತಿಯು ಕಾವ್ಯ ।
ನಿತ್ಯ ಸತ್ಯದಲ್ಲಿ ಅಭಿವ್ಯಕ್ತಿ ಪಡೆದ ಜೀವನ ಪ್ರತಿಮೆ ಕಾವ್ಯ ।

ಇವುಗಳು ಆಂಗ್ಲ ಕವಿಗಳ ವಿಮರ್ಶಾತ್ಮಕ ನುಡಿಗಳು; ಭಾವ ದೂಡಿಗೆ ಗಳು. ಮೇಲಿನ ಮಾತುಗಳನ್ನು ಹೃದಯ ತುಂಬಿ ಭಾವದುಂಬಿ ಬರೆಯು ತ್ತಾನೆ "ಶೆಲ್ಲಿ" ಕವಿ. ಅಲ್ಲದೆ ಇಂಗ್ಲಂಡದ "ಥ್ಯಾಕರೆ" ರಸಿಯಾದ "ಟಾಲ್‌- ಸ್ಟಾಯ್" ಫ್ರಾನ್ಸದ "ಬಲರ ಥಾಕ್" ಮುಂತಾದ ಪಾಶ್ಚಾತ್ ಕವಿ ಬಳಗವು ಒಪ್ಪಿದೆ; ಒಪ್ಪುತ್ತಿದೆ. ಲೌಕಿಕ ಪಾರಮಾರ್ಥಿಕಗಳನ್ನು ಅರಿತಿರಬೇಕು ಕವಿ ಯಾದವನು. ಅಂಥವನ ಹೃದಯಾಗಾರದಿಂದ ಹರಿದು ಬಂದ ವಿಚಾರ ಸರಣಿ ಹೃದಯ ರಸಾದ್ರವವನ್ನಾಗಿಸಿ, ಹೃದಯಂಗಮ ಕಾವ್ಯವಾಗಿ, ಚಿರ ಯಶ ಪಡೆಯುತ್ತದೆ. ಸಾಮಾಜಿಕ; ಧಾರ್ಮಿಕ; ನೈತಿಕ; ಅಲಂಕಾರಿಕ; ಭಾವುಕ; ತಾರ್ಕಿಕ; ಶೃಂಗಾರಾದಿ ರಸಯುತಗಳಾಗಿ ಕಾವ್ಯಗಳು ಸಿದ್ಧವಾಗಿವೆ; ಆಗುತ್ತಿವೆ. "ಕಾವ್ಯಕ್ಕೆ ಕಂಣಿಲ್ಲ ಕವಿಗೆ ಬಂಣಿಲ್ಲ". ಜಾತಿ ರಹಿತವಾಗಿ ಮುಂದೋಡುವ ಕಾವ್ಯದಗಾಡಿ. ವಾಕ್‌ಶಕ್ತಿಯಿಂದ ಜಗತ್ತು ಜಗತ್ತಿನ ಜನ ಜೀವ ಹಿಡಿ- ತ್ತದೆ; ಮಿಡಿಯುತ್ತದೆ.

ವಾಕ್‌ಶಕ್ತಿಯ ಬೆಳಕಿನಿಂದ ಭುವನತ್ರಯದ ಅಂಧಕಾರ ತೊಲಗಿ ಬೆಳ ಗುವದು.

ಇದಮಂಧತಮಃ ಕೃತ್ಸ್ನಂ ಜಾಯೇತ್ ಭುವನತ್ರಯಂ ।
ಯದಿ ಶಬ್ದಾಹ್ವಯಂ ಜ್ಯೋತಿರಾ ಸಂಸಾರಂ ನದೀಪ್ಯತೆ ॥

॥ ಕಾವ್ಯಾದರ್ಶ ॥

ಎಂದು ವಾಕ್‌ಶಕ್ತಿಯ ಪ್ರತಿಭೆಯನ್ನು "ದಂಡೀಕವಿ" ಯು ಕಂಡಿದ್ದಾನೆ ಇಂಥಹ ವಾಕ್‌ಶಕ್ತಿಯನ್ನು ಬಳಸುವ ಬುದ್ಧಿ ಕುಶಲತೆಯನ್ನು ಪಡೆದಿದ್ದಾನೆ. ದಂಡಿ, ಕಾವ್ಯ ಬಂಡಿ, ಕಾಳಿದಾಸ, ರನ್ನ, ಪಂಪ, ರವೀಂದ್ರ ಮೊದಲಾದವರು

ಈ ವಾಕ್‌ಶಕ್ತಿಯನ್ನು ಬಳಸುವ ಕುಶಲತೆಯನ್ನುಳ್ಳವರಾಗಿದ್ದರು. ಅಂತೇ ಅವರ ಕಥೆ ಕಾವ್ಯ ಪ್ರಬಂಧಗಳು ಸಾಹಿತ್ಯ ರತ್ನಗಳಾಗಿ ವುಳಿದಿವೆ, ಬೆಳಗಿವೆ.

ಹವೆಗಿಂತಲೂ, ಮನಸ್ಸಿಗಿಂತಲೂ, ಕರೆಂಟಿಗಿಂತಲೂ, ತೀವ್ರಗತಿಯುಳ್ಳದ್ದಾಗಿದೆ, ಕವಿಯಕಲ್ಪನೆ" ನಿಮಿಷಾರ್ಧದಲ್ಲಿ ಆ ಲೋಕದಿಂದ ಈ ಲೋಕಕ್ಕೆ ಈ ಲೋಕದಿಂದ ಮತ್ತೊಂದು ಲೋಕಕ್ಕೆ ನಿಮಿಷಾರ್ಧದಲ್ಲಿ ಕಲ್ಪನೆಯು ತೆಕ್ಕೆಯಲ್ಲಿ ಹಕ್ಕಿಯೋಪಾದಿ ಹಾರಬಲ್ಲ. ಬಡವನಾಗಿ, ಶಿರಿವಂತನಾಗಿ ದುಃಖಾತ್ಮನಾಗಿ ಸುಖಾತ್ಮನಾಗಿ ಅನಂತ ಸನ್ನಿವೇಶಗಳಲ್ಲಿ ಭಾವಯುತ ಪಾತ್ರಪ್ರದರ್ಶಿಸುತ್ತಾನೆ ಕವಿ ಜಗದ ಜೀವನ ಫೋಟೋಪ್ರೇಕ್ಷಕನಾದರೆ ಕ್ಯಾಮರಾ ಕವಿಯಾಗುತ್ತಾನೆ. ಕಾವ್ಯ ಫೋಟೋ ಆಗಿ- ಜನಾನಂದ, ಜಗಾನಂದ ಪಡಿಸುತ್ತದೆ-

"ಒಂದು ದೇಶದ ಪ್ರಗತಿಯನ್ನು ಅಲ್ಲಿಯ
ಒಂದು ಸಾಹಿತ್ಯದ ಪ್ರಗತಿಯಿಂದ ಅಳೆಯಬಹುದು.

" ಜವಾಹರಲಾಲ "

ಅಂತೇ ದಿ|| ನೆಹರೂಜಿಯವರು ಹೀಗೆ ಹೇಳಿದರು. ಸಾಹಿತ್ಯ ಜೀವನದ ಗತಿಬಿಂಬ ಪ್ರತಿಬಿಂಬ. ಜೀವನದ ಆಧಾರವೇ ಸಾಹಿತ್ಯದಾವಾರವಾಗುತ್ತಿದೆ, ಜೀವನದ ಪ್ರದರ್ಶನ, ಸತ್ಯಶೋಧನ; ವಿಧಾನ; ವಿಮರ್ಶನ, ಅಂತೇ ಶಿವರಾಮ ಕಾರಂತರು ಹೇಳಿದರು " ಸಾಹಿತ್ಯ ಮತ್ತು ಬದುಕು ಹತ್ತಿರ, ಹತ್ತಿರ, ಅವು ಅವಳಿ ಜವಳಿ " ಎಂದು ಧರ್ಮದುನ್ನತಿಗೆ, ಶಾಂತಿ ಪ್ರಾಸ್ಪತೆಗೆ; ಕರ್ಮನ್ಯೂನ್ಯತೆಗೆ ಸಾಹಿತ್ಯ ಸಹಕಾರಿಯಾಗುತಾ ಇದೆ.

ಸಾಹಿತ್ಯ ಪ್ರತಿಭಾಶಾಲಿ ಹಾಕಿದ ಬಂಡವಾಳ;
ಕಾಲಕಾಲಕ್ಕೂ ಅದು ಪ್ರತಿಫಲ ಕೊಟ್ಟೇ ತೀರುತ್ತದೆ.।.

" ಜಾನ್ ಬರೋಸ್ "

ಸಾಹಿತ್ಯ, ಸಂಸಾರದ ಸೌಗಂಧ ಸೂಸುವ ಪರಿಮಳವಾದರೆ– ಸಾಹಿತ್ಯದಿಂದೊಡಗೂಡಿದ ಗ್ರಂಥ ಅಥವಾ ಕಾವ್ಯ ಪುಷ್ಪವಾಗುತ್ತದೆ, ಸಾಹಿತಿಯ ಗುಣಾವ ಗುಣಗಳನ್ನು, ಆತನ ಬುದ್ಧಿ ಪ್ರೌಢಿಮೆಯನ್ನು ಅಳೆಯುವ ತಕ್ಕಡಿಯಾಗಿ ಪರಿಣಮಿಸುತ್ತದೆ ಕವಿಯ ಕಾವ್ಯ.

ಭಾವರಸ; ಕಾವರಸ; ಸಾವರಸ; ಹಗೆರಸ; ಸೊಗರಸ; ಆಳರಸ; ಬಾಳ ರಸಗಳ ಬೇರನ್ನು ತನ್ನ ಬುದ್ಧಿಶಕ್ತಿಯೆಂಬಗ್ನಿಯಿಂದ ಬೇಯಿಸಿ ಕಷಾಯವೆಂಬ ಗ್ರಂಥವನ್ನು ಸಿದ್ಧಗೊಳಿಸುತ್ತಾನೆ ಕವಿ.

ಧನ, ಧಾನ್ಯ; ವಸ್ತು; ಪಡಪೆ; ವ್ಯಕ್ತಿ; ಕವಿಯನ್ನು ಕಳವು ಮಾಡಬಹುದು, ಕೊಲೆ ಮಾಡಬಹುದು ಆದರೆ ಕವಿಯ ಕವಿತ್ವವನ್ನು ಕೊಲ್ಲ(ಳ್ಳ)ಲು ಸಾಧ್ಯವಿಲ್ಲ. ಅಚ್ಚಳಿಯದ ಅಚ್ಚಮಲ್ಲಿಗೆಯಂತೆ ನಿಚ್ಚ ನಿಚ್ಚ ಅರಳಿ ಮಕರಂದ ಸೂಸುವ ಅಮರ ಪುಷ್ಪಗಳು; ಗ್ರಂಥಗಳು.

ಶಾಸನಗಳು ಸಾಯುತ್ತವೆ. ಗ್ರಂಥಗಳಿಗೆ ಸಾವಿಲ್ಲ.

" ಬುಲವರ್ ಲಿಟ್ಟನ್ "

ಗ್ರಂಥದ ಬೀಜ ಪ್ರತಿಭೆ; ಇದಿಲ್ಲದೆ ಗ್ರಂಥ ಹುಟ್ಟದು ।
ಗ್ರಂಥದ ತಾಯಿ ಬೇರು; ಗಂಡುಬೇರು ಜಗದ ಬಾಳು ।
ಗ್ರಂಥ ಶ್ರೀ ಸಮುದಾಯ ಸುಸಂಸ್ಕೃತಿಯ ಆದಾಯ ।
ಮಂಥನ ಯುಕ್ತವಾದ ಜಗದ ದೃಶ್ಯಗಳು;
ಸುಧರ್ಮಗಳು; ಗುಣಗಳು; ಜನರಲಂಕಾರಗಳು;
ಗ್ರಂಥ ಬದುಕುವ ಜೀವಾಳಗಳು ॥

ಅಳಿಯದ ಆಸ್ತಿ ಗ್ರಂಥ. ಒಂದಾದೊಂದು ಕಾಲದಲ್ಲಿ ಜಗತ್ತು ನಾಶವಾಗಬಹುದು. ಆದರೆ ಗ್ರಂಥಕ್ಕೆ ಪ್ರಳಯವಿಲ್ಲ; ಅಳಿಗಾಲವಿಲ್ಲ. "ಕಾವ್ಯ ಶಾಶ್ವತ, ಕವಿ ಅತೀತ".

ಇಂಥಾ ಪವಿತ್ರತೆಯಿದೆ ಕವಿಗೆ; ಕವಿಯ ಕಾವ್ಯಕ್ಕೆ ಕಾರಣ ಕವಿಗಳಾದ ಪುಟ್ಟರಾಜರ ಹಾಗು ಅವರ ರಾಜ ಕೃತಿಗಳನ್ನು ಅರಿಯುವ ಮೊದಲು ಇಷ್ಟೊಂದು ಮಾಹಿತಿಯ ಕೃತಿ ಹಿಡಿಯಬೇಕಾಯಿತು.

ಕವಿ ಪುಟ್ಟರಾಜರನ್ನು; ಅವರ ಗ್ರಂಥಗಳನ್ನು ಕ್ರಮವಾಗಿ ವಿಮರ್ಶೆ ಮಾಡಹೋದರೆ "ಹಾಡಿದ್ದೆ ಹಾಡೋ ಕಿಸಬಾಯಿದಾಸ; ಕವಿಯ ಕಿಂಕರಭಾವದಿಂದ ಮುಂದೋಡುತ್ತದೆ.

ಆದ್ದರಿಂದ ಅವರ ಪುರಕೃತಿಗಳನ್ನು ಒಂದೊಂದಾಗಿ- ನಿಧಾನವಾಗಿ ಅರಿಯಲುದ್ಯುಕ್ತರಾಗುವಾ.

## — ಶ್ರೀಮತ್ ಕುಮಾರಗೀತಾ ( ಸಂಸ್ಕೃತ) —

ಇಲಯದಲ್ಲಿ ಸಕಲ ಭಾಷೆಗಳು ಲೀಲಾಜಾಲದಲ್ಲಿ ಬಾಲ ಜಾಡಿಸುವ ದಕ್ಕೆ ಸಂಸ್ಕೃತವೇ (ಭಾಷೆಯೇ) ಮೂಲವಾಗಿದೆ. ಆದಿ ಭಾಷೆ; ದೇವಭಾಷೆ ಈ ಸಂಸ್ಕೃತ ಭಾಷೆ ಈ ಭಾಷೆಯನ್ನು ಸರ್ವರೂ ಸ್ವಹೃದಯದಿಂದೊಪ್ಪುತ್ತಾರೆ, ಅದರಂತೆ ನಮ್ಮ ಪುಟ್ಟರಾಜರು ಒಪ್ಪಿದ್ದಾರೆ; ತಮ್ಮ ಈ ಗ್ರಂಥದಲ್ಲಿ ಬರೆದಿದ್ದಾರೆ ;ಸೂಚಿಸಿದ್ದಾರೆ.

ವಿಶ್ವಭಾಷಾಸುಪುತ್ರೀಣಾಂ ಮಾತಾ ಸಂಸ್ಕೃತವಾಗಿಯಮ್ ।
ಮದ್ಗ್ರಂಥ ವಿಭವಂ ನಿತ್ಯಭೋಗ್ಯಂ ಕುರ್ಯಾದಿತೀಚ್ಛಯಾ ॥

ಜಗತ್ತಿನ ಭಾಷೆಗಳಿಗೆ ಸಂಸ್ಕೃತಭಾಷೆ ತಾಯಿಸ್ಥಾನದಿಂದೊಡಗೂಡಿದೆ ಎಂಬ ಅಭಿಪ್ರಾಯ ಪಟ್ಟಿದ್ದಾರೆ.

ಕಾರಣ ಸಂಸ್ಕೃತ ಭಾಷೆಯಲ್ಲಿ ಬರೆದ "ಶ್ರೀಮತ್ ಕುಮಾರಗೀತೆ" ಯನ್ನು ನಾವುಗಳು ಮೊದಲು ವಿಮರ್ಶಿಸೋಣ.

ಸಂಸ್ಕೃತ ಪುಟ್ಟರಾಜರ ಹೃದಯ ಗುಡಿಯಲ್ಲಿ "ದೇವಸ್ಥಾನ ಹೊಂದಿ ಪೂಜೆಗೊಂಡಿದೆ. ಸಂಸ್ಕೃತವು ಪುಟ್ಟರಾಜರ ಕರತಲಾಮಲಕವಾಗಿದೆ. ಮಾತೃ ಭಾಷೆಯಂತೆ ವಿಸ್ತಾರ ಹೊಂದಿದೆ. ಎಂಬುದು ಅವರ ಗ್ರಂಥದಿಂದಲೇ ಅರಿಯೋಣ; ವಿಹರಿಸೋಣ.

ಶ್ರೀಗುರುಸ್ಸಚ್ಚಿದಾನಂದ ನಿತ್ಯಪೂರ್ಣಾತ್ಮಕ ಸ್ವಯಮ್ ।
ಅಖಂಡೋ ಭಕ್ತಸಾಕಾರಸ್ಸ ಜೀಯಾನ್ಮತ್ಪ್ರಭುಸ್ಸದಾ ॥

ಸಚ್ಚಿದಾನಂದನೂ, ನಿತ್ಯ ಪೂರ್ಣಾತ್ಮಕನು; ಸ್ವಯಂ ಜ್ಯೋತಿಸ್ವರೂಪನೂ ಅಖಂಡನೂ, ಭಕ್ತಸಾಕಾರನೂ; ಶ್ರೀಗುರುವರನೂ ಆದ ನನ್ನ ಪ್ರಭುವರನು ಸದಾ ಜಯಪ್ರದವಾಗಿರಿಸಲಿ.

ಎಂದು ಗುರುಸ್ತೋತ್ರದಿಂದ ಈ ಗ್ರಂಥ ಪ್ರಾರಂಭವಾಗಿ, ಕವಿಯ ಕಿಂಕರಬಾವದಿಂದ ಮುಂದೊಡುತ್ತದೆ.

ಕುಮಾರ ಶಿವಯೋಗಿಯು ಪಂಚಾಕ್ಷರ ಗವಾಯಿಗಳಿಗೆ ಧರ್ಮೋಪದೇಶಗೈದ ಸಂವಾದವೇನಿಸಿಕೊಂಡು ಅವನ್ನೇ ಪಂಚಾಕ್ಷರಿಯವರು ತನಗೆ(ಕವಿಗೆ)

ಕೇಳುವವರ ಸಂವಾದದಿಂದೊಡಗೂಡಿ ಸಾಗಿದೆ. ಕವಿ ಪುಟ್ಟರಾಜರು ಲೇಖನಿಯಿಂದ ಹೊರಬಂದಿದೆ ಕುಮಾರಗೀತೆಯಾಗಿ.

ಕವಿಯು ಸ್ತೋತ್ರದಲ್ಲಿ ವಿದ್ವತ್ ಬೆರಸಿದಂತೆ: ಸಹಜತೆ ಸಲೀಲತೆಗಳನ್ನು ಸೊಗಸಾಗಿ ಬಳಸಿದ ಬುದ್ಧಿಮತ್ತೆಯನ್ನು ಕಂಡು ಅಚ್ಚರಿಪಡಬೇಕು.

ಏತಾಂ ಸಂಸ್ಕೃತವಾಗ್ದೇವೀಂ ಭಜಾಮಿಕೃತಸಿದ್ಧಯೇ।
ಕಸಿಷ್ಠೇ ಜನನೀ ಪ್ರೀತಿರಧಿಕೇತಿ ಮತಿರ್ಮಮ॥

ತಾಯಿಯು ಮಗುವಿನಲ್ಲಿ ಅನುಪಮ ಪ್ರೇಮವಿಟ್ಟಿರುತ್ತಾಳೆ, ತಪ್ಪದೆ ಉದ್ಧಾರಾಗು! ಕಂದಾ!! ಎಂದು ಹರಿಸೇ ತೀರುತ್ತಾಳೆ. ಎಂದು ತಾನು ಮಗುವಾಗಿ ತಾಯಿಯ ಸ್ಥಾನದಲ್ಲಿ ಸಂಸ್ಕೃತವಾಗ್‌ದೇವಿಯನ್ನು ನಿಲ್ಲಿಸಿದ್ದಾನೆ.

ಎಂಥಾ ಜಾಣ್ಮೆಗವಿಯಿವರು. ಸಂಸ್ಕೃತವಾಗ್ದೇವಿಗೆ ತಾಯಿಸ್ಥಾನ ನಿಕ್ಕಾಗ ಕೂಸನ್ನು ಹರಿಸಲೇಬೇಕಾಯಿತಲ್ಲ ತಾಯಿ? ಬುದ್ಧಿ ಶಕ್ತಿಯಿಂದ ಜಾಣಯುಕ್ತಿಯಿಂದ, ಪ್ರೇಮ ಭಕ್ತಿಯಿಂದ, ಇದೇರೀತಿ ಕುತೂಹಲಯುಕ್ತವಾದ ಸಾಹಿತ್ಯ ಬಳಸಿದ್ದಾರೆ ಗ್ರಂಥದಲ್ಲಿ ಪುಟ್ಟರಾಜರು.

ಭ್ರಮರ ಚಿಂತಯಾಕೀಟೋಭವತಿ ಭ್ರಮರೋ ಯಥಾ।
... ಶಿವಚಿಂತನಯಾತ್ವಂ ಹಿ ಶಿವೋ ಭವಸಿ ನಿಶ್ಚಯಾತ್॥

ಈ ಗ್ರಂಥಗಳಲ್ಲಿ ಸಮಂಜಸವಾದ ಉಪಮೇಯಗಳಿಗೆ ಕೊರತೆಯಿಲ್ಲ, ಉಪಮಾ ಕೊಡುವಲ್ಲಿ ಕವಿಯ ಶೈಲಿ ಬೆಡಗನ್ನು ಕಂಡು ವರ್ಣಿಸದವರಾರು ?- ಭ್ರಮರದ ಚಿಂತನೆಯಿಂದ ಕೀಡಿ ಭ್ರಮರವಾಗುವಂತೆ, ಶಿವನ ಚಿಂತೆಯಿಂದ ಭವಿ ಶಿವನಾಗುವನು, ನೀನು ಶಿವನಾಗುವಿ, ಎಂದು ! ಹೇಳುವಲ್ಲಿ ಕವಿಯ ವೈಶಿಷ್ಟತೆಯನ್ನು ಕಂಡು ಮಾರು ಹೋಗದವನಾರು? ಶೈಲಿಯ ಮಾಟ, ಭಾವ ರಸಗಳ ಕೂಟಗಳ ಬೆಡಗು ಸಾಹಿತ್ಯದ ಕೊಡಗು. ಲೀಲಾಜಾಲವಾಗಿ ಸಾಗಿದೆ ಕವಿಯ ಬುದ್ಧಿಶಕ್ತಿ, ಕವಿತಾಶಕ್ತಿ. ಪರಮಾತ್ಮನಿಂದ ಬೋಧಯುತವಾಗಿ ಭುವಿಗೆ ಬಂದ ಬೃಹದ್ ಗ್ರಂಥ "ಭಗವದ್ಗೀತಾ"ದ ಮಾರ್ಗದಲ್ಲಿಯೇ ಕ್ರಮಿಸಿ ಅದರ ಹೆಗಲಿಗೆ ಹೆಗಲೊಗ್ಗೊಟ್ಟು ನಿಲ್ಲಲು ಸಮರ್ಥವಾಗಿದೆ ಈ ಕುಮಾರ ಗೀತಾ;

ಅದರಲ್ಲಿ ಬರುವ ವಿಷಯ. ಶೈಲಿ, ಛಂದಸ್ಸು ಅಲಂಕಾರಗಳಾದಿ ರಸ

ಮಿಶ್ರಗಳು ಈ ಕುಮಾರಗೀತೆಯಲ್ಲಿ ಸಮರ್ಥರೀತಿಯಿಂದ ಪ್ರದರ್ಶನಗೊಂಡಿವೆ, ಸಾಮ್ಯಗೊಂಡಿವೆ.

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನ ಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥

॥ ಭಗವದ್ಗೀತಾ ೧೬-೩೧ ॥

ಈ ಶ್ಲೋಕದ ಪಡಿನೆಳಲಾಗಿ ರೂಪುಗೊಂಡಿವೆ ಕೆಳಗಿನ ಶ್ಲೋಕಗಳು.

ವಿಷಯಾಶೇಂದ್ರಿಯಾಣಾಂ ಚ ಧರ್ಮೋऽಸ್ತಿನ ತವಾನಘ ।
ಅಭಿಮಾನೋ ಹಿ ಧರ್ಮೋऽನ್ತಃಕರಣಸ್ಯ ನತೇऽನಘ ॥
ಸತ್ವಂ ಚಿತ್ತಂ ಪ್ರಮೋದತ್ವಂ ನಿತ್ಯತ್ವಂ ಪರಿಪೂರ್ಣತಾ ।
ಅಖಂಡತ್ವಂ ತವೈ ವೈ ತದ್ಧರ್ಮೋऽಸ್ತಿ ದುತಿಲೋಚನ ॥

ವಿಷಯಕ್ಕೆಳೆಸುವ ಧರ್ಮ ವಿಷಯೇಂದ್ರಿಗಳದು ನಿನ್ನದಲ್ಲ. ಅವುಗಳನ್ನು ಮೀರಿ ಭವಜಾರಿ ಜ್ಞಾನಸಂಯುತನಾಗುವೆ. ಅದುವೇ ಸತ್ಯತ್ವ; ನಿತ್ಯತ್ವ; ಪ್ರಮೋದತ್ವ, ಪರಿಪೂರ್ಣತ್ವ, ಅಖಂಡತ್ವಗಳನ್ನು ಪಡೆಯುವದು ನಿನ್ನ ಧರ್ಮ

ಇಂಥಾ ಬೋಧಪರಮಾದ; ವೇದಪರವಾದ ಶ್ಲೋಕಗಳನ್ನು ಓದುಗರು ಅಲ್ಲಲ್ಲಿ ಗ್ರಂಥತುಂಬೆಲ್ಲ ಓದಿ ಓಲಾಡಬಹುದು; ಮೇಲಾಡಬಹುದು.

ವೀರಶೈವಧರ್ಮ ವಿಶ್ವಧರ್ಮವೆನ್ನುವ ಮಾತನ್ನು ಬಹು ಮಾರ್ಮಿಕವಾಗಿ ಸಾಂದ್ರ ಪಡಿಸುತ್ತಾರೆ ಕವಿಗಳು.

ವೀರಶೈವ ಮಹಾವೃಕ್ಷೋ ವಿಶ್ವಧರ್ಮ ಸಮೂಲಕಃ ।
ವಿಶ್ವ ತತ್ವ ಬೃಹಚ್ಛಾಖೋ ವಿಶ್ವಸೇವ್ಯೋऽಸ್ತ್ಯಯಂ ಸದಾ ॥

ವಿಶ್ವದ ಸಕಲ ಧರ್ಮಗಳಿಗೆ ತಾಯಿಬೇರಿನಂತಿರುವ ಈ ವೀರಶೈವ ಧರ್ಮವೆಂಬ ಮಹಾವೃಕ್ಷವು, ವಿಶ್ವದ ಎಲ್ಲ ತತ್ವಗಳೆಂಬ ಶಾಖೆಗಳುಳ್ಳದ್ದು. ವಿಶ್ವದ ಎಲ್ಲಾ ಧರ್ಮಗಳಿಂದ ಸದಾ ಸೇವಿಸಲ್ಪಡತಕ್ಕಂಥಾದ್ದು. ಎಂದು ಹೃದಯಂಗಮಯವಾಗಿ ವೀರಶೈವ ಧರ್ಮದ ಘನತೆಯನ್ನು ಚಿತ್ರರಿಸ್ಪಟ್ಟಿದೆ.

ಧರ್ಮ,, ಆಚಾರ, ವಿಚಾರ, ಅಷ್ಟಾವರಣ, ಪಂಚಾಚಾರಗಳಾದಿಯಾಗಿ ವೀರಶೈವರ ತತ್ವಗಳನ್ನು ಹೃದಯದುಂಬುವಂತೆ ವಿಸ್ತಾರವಾಗಿ, ಸಾಕ್ಷ್ಯವಾಗಿ; ದಾಕ್ಷಿಕವಾಗಿ ಚಿತ್ರಿಸಲ್ಪಟ್ಟವೆ ಈ ಕುಮಾರಗೀತೆಯಲ್ಲಿ, ಜಗದ್ಗೀತೆಯಲ್ಲಿ.

ಪಂಚಾಚಾರ್ಯರು ಹಾಗೂ ನಿರಂಜನ ಗಣೇಶ್ವರನು ಭೂತಲದಲ್ಲಿ ಹೇಗೆ ಅವತರಿಸಿದರು ? ಅವರು ಸ್ಥಾನಮಾನವೇನು ? ಅವರು ಧರ್ಮ ಹೇಗೆ ಸ್ಥಾಪಿಸಿದರು ? ಎಂಬುದನ್ನು ೪ ನೇ ಅಧ್ಯಾಯದಲ್ಲಿ ವಿವರಿಸಿದ್ದಾರೆ.

ಗುರುವಿರಕ್ತರ ಸಂಬಂಧ ಪುಷ್ಪ ಮಕರಂದದಂತೆ, ಜೀವ ಜೀವಾತ್ಮರಂತೆ, ತಿಲತೈಲದಂತೆ, ಹೊಂದಾಣಿಕೆಯಾಗಿದೆ. ಎಂಬುದು ಬಲು ರಸಪೂರ್ಣವಾಗಿ, ಸಿದ್ಧಪೂರ್ಣವಾಗಿ ಈ ಅಧ್ಯಾಯದಲ್ಲಿ ಬರೆದಿದ್ದಾರೆ ಪುಟ್ಟರಾಜರು,

ಪರಮೇಶ್ವರನು ತನ್ನ ಪಂಚಮುಖಗಳಿಂದ ರೇಣುಕ, ದಾರುಕ, ಧೇನು. ಕರ್ಣ, ವಿಶ್ವಕರ್ಣ; ಘಂಟಾಕರ್ಣ, ಪಂಚ ಗಣೇಶ್ವರರನ್ನು ಸೃಷ್ಟಿಸಿ ವಿಶ್ವದಲ್ಲಿ ವೀರಶೈವ ಧರ್ಮ ಸ್ಥಾಪನೆಗೆ ಅಪ್ಪಣೆ ಕೊಡಿಸಿದನು.

ಮಹಾದೇವನೆ ! ನಿನ್ನಪ್ಪಣೆಯಂತೆ ನಾವು ಭೂಲೋಕಕ್ಕೆ ಹೋದರೆ ಅಲ್ಲಿಯ ಜನರ ಸಂಗದಲ್ಲಿ ಬಿದ್ದು-ನಾವು ನಿನ್ನನ್ನು ಮರೆತು ಬಿಡಬಹುದು, ಕಾರಣ ಕೃಪಾನಿಧಿಯೇ ! ನಮ್ಮನ್ನು ಭೂಲೋಕಕ್ಕೆ ಕಳಿಸಬೇಡ. ನಿಮ್ಮಿಂದ ನಾವು ಅಗಲಲಾರೆವು ಎಂದು ಶಿವನ ಪಾದಗಳಲ್ಲಿ ಹಣೆಯಿಟ್ಟು ದುಃಖಿಸುತ್ತಾರೆ ಪಂಚ ಗಣೇಶ್ವರರು,

ಸಮಾಶ್ವಸಿತ ಭೋವತ್ಸಾಮದ್ರೂಪಾಯೂಯಮೇವ ಹಿ ।
ಮಯಿ ಯುಷ್ಮಾಸು ಭೇದೋ ನ ಕುತೋಮಾಯಾಭಯಂ ತುವಃ
ತಥಾಪಿ ಸಹಯುಷ್ಮಾಭಿರ್ಮೇನಿರಂಜನ ಚಿತ್ಕಲಾಂ ।
ಪ್ರೇಷಯಿಷ್ಯಾಮಿ ಯುಷ್ಮಾಕಂ ರಕ್ಷಣಂಚ ಭವೇತ್ಸದಾ ॥
ಮುಮುಕಾತ್ಮಕಲಾ ಸಾತು ಯಾ ನಿರಂಜನ ಚಿತ್ಕಲಾ ।
ಯೂಯಂ ತಸ್ಯಾ ಮಹತ್ವಂ ಹಿವೇತ್ಥೈಸರ್ವಮನಾಮಯಂ ॥
ಅಹಂ ತಾಂ ಚಿರಶಾಂತ್ಯರ್ಥಂ ಧ್ಯಾಯೇ ಸಚ್ಚಿನ್ಮುದಾಕೃತಿಂ ।
ಮೂರ್ತೀಕೃತ್ಯಾತ್ಮಲಿಂಗಂ ಮೇ ಪ್ರೇಷಯೇ ತ್ಯಜ್ಯ ತಾಂಭಯಂ॥
ಇತ್ಯುಕ್ತ್ವಾ ಪರಮಾತ್ಮಾ ಸ ಸಂಕಲ್ಪೇನ ಸ್ವಚಿತ್ಕಂಲಾ।
ಮೂರ್ತೀಕೃತ್ಯ ಗಣೇಂದ್ರೇ ಭೋ ದರ್ಶಯಾಮಾಸಶಂಕರಃ ॥

ಎಲೇ ಮಕ್ಕಳೆ ! ಸಮಾಧಾನ ಹೊಂದಿರಿ. ನೀವೆಲ್ಲರೂ ನನ್ನ ಸ್ವರೂಪರು ನಮ್ಮಗಳಲ್ಲಿ ಭೇದವಿಲ್ಲ. ನಿಮಗೆ ಮಾಯಾ ಭಯವೆಲ್ಲಿಯದು ? ಆದರೂ ನಿಮ್ಮೀ ಭಯಪರಿಹಾರಕ್ಕಾಗಿ ನನ್ನ ನಿರಂಜನ ಚಿತ್ಕಲೆಯನ್ನು ನಿಮ್ಮ

ಸಂಗಡ ಕಳಿಸಿ ಕೊಡುತ್ತೇನೆ. ಆದರಿಂದ ನಿಮ್ಮ ರಕ್ಷಣೆಯಾಗುವದು. ನಿರಂಜನಕಲೆ ನನ್ನಾತ್ಮ ಕಲೆ. ಅದರ ಅನಾಮಯವಾದ ಸರ್ವ ಮಹತ್ವವರಿಯಿರಿ. ನಾನು ನನ್ನ ಚಿತ್ತಶಾಂತಿಗಾಗಿ ಆ ಸಚ್ಚಿದಾನಂದದಾಕೃತಿಯನ್ನು ಧ್ಯಾನಿಸುತ್ತೇನೆ. ನನ್ನಾತ್ಮಲಿಂಗವನ್ನು ಮೂರ್ತಿಯನ್ನಾಗಿ ಮಾಡಿ ನಿಮ್ಮೊಡನೆ ಕಳಿಸಿಕೊಡುತ್ತೇನೆ ಭಯ ಬಿಟ್ಟುಬಿಡಿರಿ. ಈ ರೀತಿ ಪರಮೇಶ್ವರನು ಪಂಚ ಗಣಾಧಿಶರಿಗೆ ಉಪದೇಶಿಸಿ, ಸಂಕಲ್ಪ ಮಾತ್ರದಿಂದ ತನ್ನ ಚಿತ್‌ಕಲೆಯನ್ನು ಮೂರ್ತಿಯನ್ನಾಗಿ ಮಾಡಿ ಗಣೇಂದ್ರರಿಗೆ ತೋರಿಸಿದನು.

ಪ್ರಮಥರಾದಿ ಗಣೇಶ್ವರರು ದಂಡ ಕಾಷಾಯಾಂಬರಧಾರಿಯಾದ ಯತಿಯನ್ನು ನೋಡಿದರು. ಅಮೋಘ ತೇಜಸ್ಸನ್ನುಳ್ಳ ನಿರಂಜನ ಜಂಗಮನಿಗೆ ನಮಸ್ಕರಿಸಿದರು. ಈ ಜಂಗಮನಿಗೆ ಉಚ್ಚಾಸನ ಕೊಟ್ಟು ಪರಮೇಶ ಹೀಗೆ ಅಪ್ಪಣೆ ಕೊಡುವವನಾಗುತ್ತಾನೆ.

ಎಲೈ ಗಣಶ್ರೇಷ್ಠರೆ! ಇವನು ನಿರಂಜನ ಪ್ರಭುವಾಗಿರುವನು. ಇವನು ನಿರ್ದ್ವಂದ್ವನೂ; ನಿತ್ಯ ತೃಪ್ತನೂ, ನಿರ್ಮಾಯನೂ, ನಿರುಪಾಧಿಕನೂ ಆಗಿರುತ್ತಾನೆ.

ನಿರಂಜನ ಜಂಗಮ ಮೂರ್ತಿಯೇ ನನ್ನ ಧರ್ಮವನ್ನು ಭೂಲೋಕದಲ್ಲಿ ಸ್ಥಾಪಿಸಲು ಈ ಪಂಚಗಣೇಶ್ವರರನ್ನು ಕಳಿಸುವವನಾಗಿದ್ದೇನೆ. ಕಾರಣ ಇವರೊಡನೆ ಹೋಗಿ ಭೂಲೋಕವನ್ನು ನಿನ್ನ ಪಾದಸ್ಪರ್ಶದಿಂದ ಪಾವನ ಮಾಡು ಎಂದು ಶಿವ ಅಪ್ಪಣೆ ಕೊಡಿಸಿದನು.

ಇತ್ಯುಕ್ತ್ವಾ ಪರಮೇಶಾನೇ ಗತೇ ತೂಷ್ಣಿಂ ನಿರಂಜನಃ ।
ಪ್ರಥಸ್ಥೇ ಪಂಚಭಿಸ್ಸಾ ಕಂಗೇಣೇಶೈಸ್ತಂ ಪ್ರಣಮ್ಯ ಸಃ ।

ಈ ರೀತಿ ಪರಮೇಶ್ವರನು ಅಪ್ಪಣೆ ಕೊಡಲಾಗಿ. ನಿರಂಜನ ಜಂಗಮ ಮೂರ್ತಿ ಶಿವನಿಗೆ ನಮಸ್ಕರಿಸಿ ಪಂಚಾಚಾರ್ಯರೊಂದಿಗೆ ಭೂಲೋಕ(ಕ್ಕೆ)ದಲ್ಲಿ ಅವತರಿಸಿದನು.

ಪಂಚಾಚಾರ್ಯರು ಪಂಚಲಿಂಗಗಳನ್ನು ಪ್ರಸಿದ್ಧಿಪಡಿಸಿ ವೀರಶೈವಧರ್ಮ ಸ್ಥಾಪಿಸಿದರೆಂಬುವದಕ್ಕೆ ಸಾಕ್ಷಿ ಪಂಚಪೀಠಗಳು; ಗುರುವರ್ಗವು. ನಿರಂಜನ ಮೂರ್ತಿ ಪಂಚಾರ್ಯರಿಗೆ ಸಹಕರಿಸಿ ಬೆಂಗಾವಲಿಗನಾಗಿ ವೀರಶೈವ ಧರ್ಮ

ಸ್ಥಾಪನೆಗೆ ಕಾರಣೀ ಭೂತನಾಗಿದ್ದಾನೆ ಎಂಬುದಕ್ಕೆ ಸಾಕ್ಷಿ ನಿರಂಜನ ಪೀಠ; ವಿರಕ್ತ ಗುರುಪಾಠ.

ಇವರ ನಾಮಧೇಯಗಳು ಕಲಿಯುಗದಿ ಹೊಸರೂಪದಾಳಿದವು. ರೇವಣ, ಮರುಳ, ಏಕೋ ರಾಮ, ಪಂಡಿತ, ವಿಶ್ವೇಶ, ಅಲ್ಲಮರೆಂದು.

ರಂಭಾಪುರಿಯಲ್ಲಿ, ಉಜ್ಜಯನಿಲ್ಲಿ, ಕೇದಾರದಲ್ಲಿ, ಶ್ರೀ ಗಿರಿಯಲ್ಲಿ ಪಂಚಾಚಾರ್ಯರಿಂದ ಪಂಚ ಪೀಠಗಳು ಸಾಪಿಸಲ್ಪಟ್ಟವು. ಕಲ್ಯಾಣದಲ್ಲಿ ಬಸವ ಮಹಾತ್ಮನ ಸದಿಚ್ಛೆಯಿಂದ ಸೂನ್ಯ ಸಿಂಹಾಸನ (ಪೀಠ) ಆರನೆಯ ಪೀಠವಾಗಿ ಸ್ಥಾಪಿಸಲ್ಪಟ್ಟಿತು. ಇದಕ್ಕೂ ಪೂರ್ವದಲ್ಲಿ ಅಂದರೆ ಈ ಶೂನ್ಯ ಪೀಠ ಸ್ಥಾಪನೆಗೆ ಮುಂಚೆ ವಿರಕ್ತ ಸ್ವಾಮಿಗಳ ಎಲ್ಲ ಉತ್ತಮ ಮಠಗಳೇ ಶೂನ್ಯ ಪೀಠಗಳಾಗಿದ್ದವು.

ಈ ರೀತಿ ಗುರುವರ್ಗ ವಿರಕ್ತವರ್ಗ ಜಗದಲ್ಲಿ ನಿರ್ಮಾಣವಾಯಿತು. ಎಂದು ಮಾರ್ಮಿಕವಾಗಿ ಈ ಗ್ರಂಥದಲ್ಲಿ ನಿರೂಪಿಸಿದ್ದಾರೆ; ಕವಿ ಪುಟ್ಟರಾಜರು; ಭುವಿರವಿ ತೇಜರು.

ವೀರಶೈವದ ಬುನಾದಿಯಂತೆ; ಧರ್ಮ ಗನ್ನಡಿಯಂತೆ; ತತ್ವ ಪರಿಪಕ್ವ ದರವಿಂದದಂತೆ ಬೋಧಕವಾಗಿ, ಸಾಧಕವಾಗಿ, ಮುಕ್ತಿ ದಾಯಕವಾಗಿ; ಧರ್ಮ ಗ್ರಂಥವಾಗಿ ಸಾಹಿತ್ಯ ಮಾತೆಯ ಮುಕುಟ ವೇರಿದೆ.

— ಅಕ್ಕ ಮಹಾದೇವಿ ಪುರಾಣ —

ಧರೆಯೊಳ್ ಸುಟ್ಟಿ ಪುಟ್ಟುತ್ತುರುಳ್ವ ನರರ ಮೇಲುರ್ವಿ ಕರ್ಬಂಗಳಂ ಬಿ ।
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರ ಕಟಾಕಬ್ಬಿಗರ್ ಕೆಟ್ಟು ಪೋದರ್ ॥
ಹಂದೇವಂ ದೇವದೇವೋತ್ತಮನ ಶರಣಂ ಪಾಡಿ ಕೈವಲ್ಯ ಲಕ್ಷ್ಮೀ ।
ವರನಾದಂ ಮತ್ತಮಂಗಧಿಕ ಶಿವಕವೀಂದ್ರುಂಗದಾರ್ ಸಾಟಿಯಪ್ಪರ್ ॥

॥ ಷಡಕ್ಷರದೇವ ॥

ಭವದ ಬಡುಲಲ್ಲಿ ಬಲಹೀನರಾಗಿ; ಭವಲೀನರಾಗಿ ಸತ್ತುಹುಟ್ಟುವ ನರರ ಮೇಲೆ ಕಾವ್ಯಗಳನ್ನು ರಚಿಸಿ ಅನಂತ ಕವಿಗಳು ಕೆಟ್ಟುಹೋದರು ಹರಿಯು ದೇವರ ದೇವನಾದ ಶಿವನನ್ನು ಶಿವಶರಣರನ್ನು ಭಜಿಸಿ, ನುತಿಸಿ ವೈಕುಂಠ ಪತಿಯಾದನು. ಅತೀತನಾದ ಶಿವನನ್ನೂ ಶರಣರನ್ನೂ ಹೊಗಳಿ, ನುತಿಸುವ ಶಿವಗವಿಗಳಿಗೆ ಸಾಟಿಯಾರು. ಅವರೇ ಅಧಿಕರು- ಎಂದು ಅಭಿಪ್ರಾಯ ಪಡು

ತ್ತಾನೆ. ಷಡಕ್ಷರದೇವ. ನಮ್ಮ ಪುಟ್ಟರಾಜರೂ ಕೂಡಾ- ಧರಣಿಗಳನ್ನು ಕರಣಿಗಳನ್ನು, ಮರಣಿಳನ್ನು ನೆನೆದು ಕಾವ್ಯಗಳ ರಚಿಸದೆ. ಭವರ ಗಂಡರನ್ನು ದೀಕ್ಕರಿಸಿ, ಶಿವಗಂಡನನ್ನು ಸತ್ಕರಿಸಿ; ಶಿವಪಾರ್ವತಿಯಾಗಿ, ಆದಿಅಂತ ರಹಿತ ಳಾದ ಜಗದಕ್ಕ ಮಹಾದೇವಿಯ ಬಗ್ಗೆ ಕಾವ್ಯ ( ಪುರಾಣ ) ಬರೆದು ಪಾವನ ರಾಗಿದ್ದಾರೆ, ಜಗ ಪಾವನ ಮಾಡಿದ್ದಾರೆ.

ಸುರ ತರುವಿನಂತೆ ಸುಜನರ ।
ಸಿರಿಯಂತೆ ಸರೋಜದಂತೆ ಸುಧೆಯಂತೆ ಸುಧಾ ॥
ಕರ ಕಿರಣದಂತೆ ಹಂಪೆಯು ।
ಹರಿದೇವನ ಕಾವ್ಯಮಖಿಳ ಸೇವ್ಯಂ ನವ್ಯಂ ॥

॥ ಹಂಪೆಯ ಹರಿಹರ ॥

ಎಂದು ಹೆರಿಳಿದ ಹರಿಹರನನ್ನು ಮುಂದಿಟ್ಟುಕೊಂಡು ಬರೆದ ಅಕ್ಕ-ಮಹಾದೇವಿ ಪುರಾಣ- ಸುಧಾ ಕಿರಣದಂತೆ; ಶಿವಸರುಣನಂತೆ: ಶ್ರೀಯಾಭರಣದಂತೆ ಸಾಗಿದೆ.

ಗುರುಭಕ್ತಿಪ್ರೀಯರಾದ ಪುಟ್ಟರಾಜರು ಗುರುವಿನ ಸ್ತೋತ್ರದಿಂದಲೇ ತಮ್ಮ ಕಾವ್ಯ (ಕಾವ್ಯ) ವನ್ನು ಪ್ರಾರಂಭಿಸುತ್ತಾರೆ. ಇವರೂ ಮಾಡಿದ್ದಾರೆ.

ಶ್ರೀ ಗುರು ಪರಾತ್ಪರ ನಿರಂಜನ ನಿರಾಕಾರ ।
ಯೋಗಿ ಹೃನ್ನಿಲಯಸ್ಥ ಚಿಜ್ಯೋತಿ ರಾಕಾರ ।
ಮಾಗಾದ್ಯನಿರ್ಗಮ್ಯ ಚಿತ್ಕ್ರಿಯಾ ನಿರ್ಗಮ್ಯ ಪರಮ ವೈರಾಗ್ಯಸಾರಾ ॥
ಆಗಮಾಭೇದ್ಯ ಸದ್ಭಕ್ತಪರ ಹೃದ್ಯತರ ।
ಭೋಗ ಮೋಕ್ಷಾಧಾರ ಭಕ್ತ ಸಾಕಾರ ಚಿರ
ರಾಗದಿಂ ಭಕ್ತಿವೈಭವವಿತ್ತು ಪೊರೆ ನಮಿಪೆನಲ್ಲಮಪ್ರಭು ವಿಭುವರ ॥

ಎಂಥ ಭಾವಬೆಡಗಿದೆ ? ಕಾವ್ಯಕೊಡಗಿದೆ ? ಇವರ ಗುರುಸ್ತೋತ್ರ ವಿದ್ವತ್ ಸೂತ್ರವಾಗಿ, ಸತ್‌ಪಾತ್ರ ಗೋತ್ರವಾಗಿ, ಭಕ್ತಿಯ ಪಾತ್ರವಾಗಿ ಹೊರ ಬಂದಿದೆ.

ಪುಟ್ಟರಾಜರ ಕವಿತಾ ಶೈಲಿ ಬಲು ಮನರಂಜನೆಯಾಗಿ, ಜನರಂಜನೆಯಾಗಿ ಸುಂದರತೆಯಲಿ ಸೂಸುತ್ತದೆ. ಹಿಮಗಿರಿಯ ವರ್ಣನೆ ಹೀಗೆ ಮಾಡಿದ್ದಾರೆ:

ಅತಿ ಹಿಮಾಪ ಸಾರದಿಂ ಕ್ಷೀರದಿಂ ಪೂರದಿಂ
ಪ್ರತತಿ ತರುಜಾಲದಿಂ ಮೂಲದಿಂ ಶೈಲದಿಂ
ವೃತಲೋಹ ಖನಿಗಳಿಂ ಮುನಿಗಳಿಂ ಧನಿಗಳಿಂ ಮನೆಗಳಿಂ ಮಣಿಗಳಿಂ ।
ಶ್ರಿತಬಹುಕ್ಷೇತ್ರದಿಂ ಪಾತ್ರದಿಂ ಹೋತ್ರದಿಂ
ಶ್ರಿತಜನದ ಸೀಮದಿಂ ಕಾಮದಿಂ ಹೇಮದಿಂ
ವಿತತಿ ಮಾಗೆಸೆವುದಾ ಗಹನಾಬ್ಧಿಯುತ್ತರಕೆ ಒಮತರಿ–
ಯುವ ಸಿರಿಯಧರೆಯು ॥

ಹಿಂದಿನ ಹಿರಿಗಪಿಗಳ ವ್ಯಕ್ತಿತ್ವವನ್ನಳೆಯುವ ಅಳತೋಲಿನಂತಿದೆ, ಪ್ರಾಸಿನ ಸುರಿಮನೆಯಾಗಿದೆ. ಶಬ್ದಗಳ ಸರಪಳಿಯಾಗಿದೆ, ಅಲಂಕಾರದೊಡ ಗೆಯಾಗಿದೆ.

ಪರಮ ಪ್ರವಾಲ ಮಣಿ ಶುಕ್ತಿಮೌಕ್ತಿಕ ಜಾಲ-
ಗಿರಿಕುಲ ಪ್ರಬಲ ಘನ ಸಂದೋಹ ಸುವಿಶಾಲ
ಗರಸುಧಾ ಲವಣರಸ ಶಂಖಸಿಕತಾಮುಖ್ಯವಿಭವಾಗರಂ ಸಾಗರಂ ॥

ಇಂಥ ಕಡು ಬೆಡಗಿನ ಜಡಿಮಳೆಯಾಗಿದೆ ಈ ಪುರಾಣವಲ್ಲಿ. ಎಷ್ಟೊಂದು ಶಬ್ದಭಾಂಡಾರ ಇವರ ಬುದ್ಧಿ ಗುಂಡಾರದಲ್ಲಿ ಸಂಗ್ರಹವಾಗಿರಬಹುದು ? ಹೆಸರಿನಿಂದ "ಪುಟ್ಟ" ಕುಸುರಿನಿಂದ "ರಾಜ" ಅಂತೂ ಹೆಸರಿನ ಕುಸುರಾಗಿ, ಕುಸುರಿನ ಹೆಸರಾಗಿ "ಪುಟ್ಟರಾಜ" ನೆಂಬ ನಾಮಕ್ಕೆ ಸುಧೀಮತೆ ಬಂದಿದೆ

ಸಚ್ಚಿದಾನಂದೆ ಜೋ ನಿತ್ಯಪರಿಪೂರ್ಣೆ ಜೋ
ಅಚ್ಚ ಚಿತ್ಕಾಯೇ ಜೋ ಸತ್ಯ ನಿರ್ಮಾಯೇ ಜೋ
ಇಚ್ಛಿತಾಮ್ನಾಯೆ ಜೋ ಮರ್ತ್ಯಸುಪ್ರಾಣಿ ಜೋ
ಬೃತ್ಯ ಗೀರ್ವಾಣೀ ಜೊ ಜೋ ॥
ಸ್ವಚ್ಛ ನಿರುಪಾಯೆ ಜೋ ನಿತ್ಯ ನಿರ್ವಾಣಿ ಜೋ
ಅಚ್ಯುತಾನಂದೆ ಜೋ ಸ್ತುತ್ಯ ಶರ್ವಾಣಿ ಜೋ
ಉಚ್ಚ ಸಧ್ಯೇಯೆ ಜೋ ಜೋ ಮಹದೇವಿ ಜೋ–
ಯೆಂದು ತೂಗಿದರು ನಲಿದು ॥

ನಿರ್ಮಲ ಸುಮತಿಯರ ಕುಲದೀಪವಾಗಿ ಹುಟ್ಟಿದ ಮಹಾದೇವಿಯ ಮುಂದಿನ ಭವಿಷ್ಯದ ಗತಿ ಕಲ್ಪಿಸಿ, ಬೆಲೆಯುಳ್ಳ ಶಬ್ದಗುಚ್ಛದಿಂದ ಮಹದೇವಿಯನ್ನು ಸಿಂಗರಿಸಿ ದಾಯಿಯಾಗಿ ಜೋಗುಳ ಹಾಡಿದ ಕವಿಗೆ ಯಾವುದೂ ಸಮವಾಗದು.

ವರ ಖಲಿಂದರೇಳು ಸೂರ್ಪರ್ಗೆ ಗುರುವಾಗಿ
ಹರುಷದಿಂ ಮುಖ್ಯಕ್ಕೆ ಪೋಗಿ ಮಹಿಮೆಯಂ ತೋರಿ
ತುರು ಕಾರುಣ್ಯದೊಳಗನಾವೃಷ್ಟಿದೋಷಂಬಂದು ಪಸರಿಸೆಪವಾಡದಿಂದೆ!
ವರುಷಮಂ ಸುರಿಸಿ ಸುರಿತಾಳನಿಂ ಪೂಜೆಯಂ
ಪಿರಿಬಾಗಿ ಕೈಕೊಂಡು ಘನ ತರದ ಕೀರ್ತಿಯಂ
ಧರಿಸಲಂದಂದಿತ್ತ ಮಳೆಯ ಮಲ್ಲೇಶನೆಂದೆಂಬ ನಾಮವನಾಂತನು!

"ಚನ್ನಬಸವ ಪುರಾಣ"

ಚನ್ನಬಸವೇಶ್ವರ ಪುರಾಣದಲ್ಲಿ ತೋರಿಸಿದ ವಿರುಪಾಕ್ಷ ಪಂಡಿತನ ಕಾವ್ಯಪ್ರೌಢಿಮೆ ಪುಟ್ಟರಾಜರಲ್ಲಿ ಬೃಹದಾಕಾರದಾಳಿದೆ; ಬಾಳಿದೆ.

ಜಗದ ವಿಷಯೋಪ ಗುಣಗಳನ್ನು ಮೀರಿ, ದೇಹಪ ಲಜ್ಜಾದಿ ಗುಣಗಳನ್ನು ಜಾರಿ; ಅರಿಷಡ್ವರ್ಗಗಳನ್ನು ಮೀರಿ; ಭೋಗರಹಿತವಾದ-ಲಿಂಗರಹಿತವಾದ ಗುಣಗಳನ್ನು ಕಾರಿಮೆರೆದಳು ವಿರಾಗಿಣಿ ಅಕ್ಕ. ಜಗನ್ಮಾತೆಯ ಚಿತ್ಕಲೆಯಾಗಿ,ಆಕಲೆಯ ಬೆಳಗಿನಿಂದ ವಲಯಲ್ಪದಂಧಃಕಾರವನ್ನು ನಿವಾಳಿಸಿದ ನಿಃಕಾಯ ಅಕ್ಕನ ಬಗ್ಗೆ ಹಲವು ಕವಿಗಳು ಹಲವು ಕಾವ್ಯಗಳನ್ನು ಕಾದಂಬರಿಗಳನ್ನು ರಚಿಸಿದ್ದಾರೆ. ಅದರೂ ಅಕ್ಕನ ಗುಣಗಾನ ಮಾಡುವದು ಬೇಸರವಾಗಿಲ್ಲ ಜಗಕೆ; ಜಗದ ಜನಕೆ.

ಯಾರು ನಿಜವಾದ ಗಂಡಸರು ? ಜಗತ್ತಿನ ಗಂಡಸರ ಗಂಡ ನೀನು. ಜಗತ್ತು ಹೆಂಣು; ಜಗತ್ತಿನ ಗಂಡು-ಕಂಣು ನೀನು ಎಂದು ಸಾರಿದ "ನೀರಾ"ಳ ವ್ಯಕ್ತಿತ್ವ, ಈ ನಮ್ಮ ಅಕ್ಕನ ಮಹಿಮತ್ವ ಎರಡೂ ಒಂದೇ.

ಸ್ವರೇಣ ತಸ್ಯಾ ಮಮೃತಸ್ರುತೇವ-
ಪ್ರಲ್ಪಿತಾಯಾಮಭಿಜಾತ ವಾಚಿ ।
ಅಪ್ಯನ್ಯ ಪುಷ್ಟಾ ಪ್ರತಿಕೂಲ ಶಬ್ದಾ-
ಶ್ರೋತುರ್ವಿ ತಂತ್ರೀರಿವ ತಾಡ್ಯಮಾನಾ ॥

"ಕುಮಾರ ಸಂಭವ"

ಪಾರ್ವತಿಯು ಮಾತನಾಡಿದಳೆಂದರೆ ಅಮೃತ ಪ್ರವಹಿಸಿದಂತೆ; ಆಕೆ ಮಾತನಾಡಿದಳೆಂದರೆ ಕೋಗಿಲೆಯ ಧ್ವನಿಯು ನಾಚುತಿತ್ತಂತೆ, ಹೇಗೋ ಹಾಗೆ ಮಹದೇವಿಯ ಬಾಲ್ಯದ ನುಡಿ ಸುಸ್ವರ ಜೋಡಿಯಾಗಿ ಮಿಡಿಯು

ತ್ತಿತ್ತು. ಜಗವ ಜನರ ಬೇಸರವ ಬೇಡಿ (ಕೊಳಗ) ಕಡಿವ್ಹೋಗುತ್ತಿತ್ತು.

ಅಕ್ಕನ ನಿಲವು — ಶಿವೆಯ ಹಸಾದವಾಗಿತ್ತು, ಶಿವನ ಕುರುಹಾಗಿತ್ತು, ಭವವ ಕುತ್ತಾಗಿತ್ತು. ಅಂಗ ರಹಿತವಾಗಿತ್ತು, ಲಿಂಗರಹಿತವಾಗಿತ್ತು, ಭೋಗ ರಹಿತವಾಗಿತ್ತು, ಉಪಾದಿರಹಿತವಾಗಿತ್ತು.

ಬೆಳಗಿಂ ಮುಂದೇಳ್ದು ಶೌಚಾದಿಯಂ ತೀರ್ಚಿ
ಬಳಿಕ ಗುರು ಹಿರಿಯರಂ ನಮಿಸಿ ಪಾಠವನೆಸಗೆ
ಜಳಕಮಂ ಮಾಡಿ ಶಿವಪೂಜೆಯಂ ಮುಗಿಸಿ ಪಾಕಾದಿಗೃಹಕೃತ್ಯಗಳನು ‖
ಕಳಕಳಿಯೊಳ್ ನೆಗಳ್ದು ಸುಶಿವಾನುಭವವ ಕೇಳ್
ಮಳಿದು ಸಮಯದೊಳನೆ ಮಾತೆಯೊಳು ಚರ್ಚಿಪಳು
ಕುಳಿತೋರ್ವಳೇ ಮನನಮಂ ಮಾಡುತಾ ವಿಷಯಮಂ ನಿಧಿಧ್ಯಾಸಿಸುವಳು‖

"ಹಂಣಿನ ಕುರುಹು ಹೀಚಿನಲ್ಲಿ" ಎಂಬಂತೆ ವಿರಾಗದ ಪರಾಗವನ್ನು ಎಳೆತನದಲ್ಲಿ ತೋರಿಸಿದ್ದಾಳೆ ಅಕ್ಕ.

ಯಂತ್ರದೋಪಾದಿ ಕಾರ್ಯಗಳನ್ನೆಸಗಿ, ಗುರು ಹಿರಿಯರಿಗೆ ನಮಿಸಿ, ಪಾಠ ಪ್ರವಚನನಾದಿ ಶಿವಾನುಭವವೆಸಗಿ, ಲಿಂಗವ ಪೂಜಿಸುವ ಬಾಲ್ಯದ ಅರುವು ಮುಂದಿನ–ಇಂದಿನ–ಹಿಂದಿನ ಪೀಳಿಗೆಗೆ ಮರುವು ಕಳೆಯುವ ಗುರು ಪಾಠ ವಾಗಿದೆ.

ಅಕ್ಕನ ಶಕ್ತಿಯನ್ನು ಕಕ್ಕುಲತೆಯ ಲಿಂಗಭಕ್ತಿಯನ್ನು ಚೊಕ್ಕಾದ ವಿರಕ್ತಿ ಯನ್ನು ವರ್ಣಿಸುವ ಕವಿಯ ಆಧ್ಯಾತ್ಮ ಪರ್ಣ ವಿಸ್ತಾರವಾಗಿ ಹಬ್ಬಿದೆ.

ಜಂಗಮದ ಪಾದದಿಂದೊಗೆದ ಜಲಬಿಂದುವದು
ಮಂಗಲದ ತೀರ್ಥ ಕೋಟಿ ಗಳಿಂದೆ ಮಿಗಿಲಹುದು
ಮಂಗಲಾಂಗಿಯೇ ನೀನು ತತ್ ಸಿದ್ಧಿಗಾಗಿಯೇ ಲಿಂಗವನು–
ಪೂಜಿಸುವದು ‖
ತುಂಗ ಪಾದೋದಕದೆ ಪಾಪತಾಪ ಕ್ಷಯವು
ಭಂಗ ವಿರಹಿತ ಭೋಗ ಮೋಕ್ಷಪ್ರ ದಾನವದು
ಮಂಗ ಜಾದಿ ವಿಕಾರ ನಾಶನವು ಮೇಣ್ ಜನ್ಮ ದುಃಖ–
ಮೃತಿ ಭಯಹರನವು ‖
ತಿಳಿಯೆ ಹಿಂಸಾದಿಗಳೆ ನಿರ್ಮಲ ಸದಾಚಾರ
ವಿಳಿಯ ಭಕ್ತರಿಗಾನು ಭೃತ್ಯನೆಂದರಿವುದೇ

ಫಲಿತಭೃತ್ಯಾಚಾರವೀ ಜಗಪತಿಶಿವನೆಂದು ಬಗೆವುದೆಶಿವಾಚಾರವು।
ಮಿಳಿತಲಿಂಗವಬಿಟ್ಟು ಯಜಿಸೆನಾನೆಂಬುದು
ಜ್ವಲಿತ ಲಿಂಗಾಚಾರವಿರೆ ಶೀಲದೊಳು ಭುವಿಯ
ಸುಳುಹ ನೀಕ್ಷಿಸೆನೆಂಬುದುತ್ತಮಗಣಾಚಾರ್ಯವಾಚಾರ ಲಿಂಗವಿದುವೆ ॥
ಎನಿತು ಮಷ್ಟಾವರಣ ಮಂಗವಾಗಿಹುದು ಕೇ-
ಳನಿತು ಪಂಚಾಚಾರಗಳ್ಪ್ರಾಣವಾಗಿಪವು
ವಿನುತ ಷಟ್ಸ್ಥಲತತ್ವಮಾತ್ಮನಾಗಿರುವದೀಮಾಗಿರುವದೀಮತ-
-ಪುರಷವರ ನಿಗರಿಯೆ ॥

ಘನ ಭಕ್ತಿಯಿಂದನರಿದು ಗುರುಲಿಂಗ ಜಂಗಮಕೆ
ತನು ಮನೋಧನವ ನಿರ್ವಂಚನದೆ ಕೊಟ್ಟು ಪರ-
ವನತೆಯರಿಗಂ ಪರರ ವಿತ್ತಕಮಪೇಕ್ಷಿಸದೆ ಮಾಹೇಶ್ವರಸ್ಥಲದೊಳ್ ॥

ವೀರಶೈವ ಧರ್ಮದಾಚಾರ ಸ್ಥಲಗಳ ಹಾಗೂ ಗುರುಲಿಂಗ ಜಂಗಮದ ಭಕ್ತಿಯ ಘನತೆಯ ಚಿತ್ತರಿಸುವ ಕವಿಯ ಹೃದಯ ವೀರಶೈವ ಸದಯವಾಗಿದೆ. ಇದರಲ್ಲಿ ಆಧ್ಯಾತ್ಮದ ಆದಾಯವಿದೆ, ಅಕ್ಕನಾಶೀರ್ವಾದವುದಯವಾಗಿದೆ.

"ಇಸ್ಲಾಂ" ದ ಜನತೆಗೆ ದೇವನ ಘನತೆ, ದಯಾಮಯತೆ, ಭಕ್ತ ಪರ ವಶತೆಯನ್ನು ತಿಳಿಯ ಪಡಿಸಿದ "ರಾಬಿಯಾ" ಳಂತೆ ನಮ್ಮ ಅಕ್ಕನು. ಚೆನ್ನ ಮಲ್ಲಿಕಾರ್ಜುನನ ನಿಜದರಿವು ಮಾಡಿ ಕೊಟ್ಟು ಅರುವಿನಲ್ಲಿ ಬೆರೆತು ಗುರು ವಾದಳು,

ಓ ಪರಮಾತ್ಮ! ಕರುಣಾಳು।
ನಿನ್ನ ಹಬ್ಬದಲ್ಲಿ ನಾನೊಬ್ಬಳು।
ಕನಿಷ್ಟಳಾದ ತುಚ್ಛಳಾದ ಆಗಂತುಕಳು।
ನಿನ್ನ ನೋಟದಿಂದ ಕುರುಡಾದವು ಕಂಗಳು।
ಆದರೂ ನನ್ನಲ್ಲಿ ತುಂಬಿದೆ ನಿನ್ನ ಘನದರುವಿನೆಳಲು।
ನಿನ್ನ ನೋಟವೇ ನನ್ನ ಜೀವ।
ವಚನವಿತ್ತಿದ್ದ ಸಗ್ಗ ಧಾಮ। ಪ್ರೇಮವೆ,
ನಿನಗರ್ಪಿತವಾಗಿದೆ ನನ್ನ ಹೃದಯವು॥

ಎಂದು ಶ್ರೀಕೃಷ್ಣನಲ್ಲಿ ಅನುರಕ್ತಳಾದ *"ಜೇಬುನ್ನೀ ಸಾ" ಳಂತೆ ಅಕ್ಕನು ಚನ್ನ ಮಲ್ಲಿಕಾರ್ಜುನನಲ್ಲಿ ಅನುರಕ್ತಳಾಗಿ

ನನ್ನ ಬಿನ್ನಪವ ಆಲಿಸು ಲಾಲಿಸು ಪಾಲಿಸು ಅಯ್ಯ ।
ನನ್ನ ದುಃಖವನೋಡಯ್ಯ ನನ್ನ ಬಳಿಗೆ ಬಾರಯ್ಯ ।
ನಿನ್ನ ಬರವೇ ನನ್ನ ಸುಖವಿನ ಬರವಯ್ಯ ।
ನಿನ್ನನಗಲಿ ನಾನು ಎಳಿಯನಯ್ಯ ! ಬಾಳೆನಯ್ಯ ।
ನಿನ್ನನಗಲಿರುವದು ಒಂದಿರುಳು ಆಗದಯ್ಯ
ನನ್ನೆಯ ತೆಕ್ಕೆ ಸಡಲಿದ ಜಕ್ಕವಕ್ಕಿಯಂತಾಗ್ವೆನಯ್ಯ ।
ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ !
ನಿನ್ನನರಿಯದ ಮುಕ್ತಿಯೇ ನರಕ ಕಂಡಯ್ಯ !
ನೀನೊಲ್ಲದ ಸುಖವೇ ಕಡುದುಃಖ ಕಂಡಯ್ಯ !
ನೀನೊಲಿದ ದುಃಖವೇ ಪರಮಸುಖ ಕಂಡಯ್ಯ !
ನೀನು ಕಟ್ಟ ಕೆಡಹಿದ ಬಂಧನವೇ ನಿರ್ಬಂಧನವಯ್ಯ
ಎನಗೆ ನೀನೇ ಗಂಡನಯ್ಯ ಚನ್ನಮಲ್ಲಿಕಾಜುನಯ್ಯ ॥

ಈ ರೀತಿ ಮೊರೆಯಿಟ್ಟದ್ದಾಳೆ. ಈ ಲೋಕದ ಗಂಡರನು ಜರಿದು ದೇಹದ್ದಂಗು ಹರಿದು, ಬಟ್ಟೆಯನು ಹರಿದು ಶಿವ ಭಟ್ಟೆಯಲಿ ಸಾಗಿದಳು ವಿರಾಗಿಣಿ ಮಹಾದೇವಿಮಣಿ ಈ ಅಕ್ಕನ ವೈರಾಗ್ಯ ವೃತ್ತಿಯನ್ನು ಪುಟ್ಟರಾಜರ ಕಾವ್ಯ ಪ್ರವೃತ್ತಿಯಲ್ಲಿ ಕಾಣೋಣ.

ಮಿಲಿತ ಮೂತ್ರದಾ ಕುಡಿಕೆ ಮಾಂಸದಾಮುಡಿಕೆಯಿದು
ಎಲುವಿನಾ ತಡಿಕೆಯಿವೆ ಮೇಧ್ಯದಾಹಡಿಕೆಯಿದು
ಸಲೆ ಕೀವಿನಾ ಹಡಿಕೆ ಸುಡಲೀ ಕುದೇಹದನೊಡಲವಿಡಿದರಿಬೇಗನೆ ॥
ರಾಗಮಂ ತೊರೆದು ಶಿವನಂ ನೆನೆಯುತಂ ಮನದೆ
ವೇಗದಿಂ ತೆಗೆದೊಗೆದು ವಸ್ತ್ರ ಭೂಷಣವೆಲ್ಲ–
ವಾಗಲೆ ದಿಗಂಬರಳು ತಾನಾಗಿ ಕೇಶಪಾಶವ ಬಿಚ್ಚಿ ಹೊರಹೊರಟಳು ॥

ಈರೀತಿ ಅಕ್ಕನ ವೈರಾಗ್ಯದ ವಚನಗಳನ್ನು ವಾರ್ಧಿಕದಲ್ಲಿ ಬಲು ಜಾಣ್ಮೆಯಿಂದ ಬಳಸಿದ್ದಾನೆ ಕವಿ.

---

*ಈಕೆ ಹಿಂದೂ ಧರ್ಮದ ವೈರಿಯಾಗಿದ್ದ ಔರುಗಜೇಬನ ಮಗಳು. ಇವಳು ಶ್ರೀಕೃಷ್ಣನಲ್ಲಿ ಅನುರಕ್ತಳಾಗಿ; ಪರಮ ಭಗವದ್ ಭಕ್ತಳಾಗಿ; ಮೀರಾಬಾಯಿಯಂತೆ ಆಗಿ ಹೋಗಿದ್ದಾಳೆ.

ಒಂದು ವಸ್ತು ಒಂದು ವಸ್ತುವಿನಲ್ಲಿ ಬೆರಿಯಬೇಕಾದರೆ ಅಷ್ಟಗೆಯಾಗಿ ಅಂದರೆ ಬಿರುಕಾಗಿ ಬೆರಿಯುತ್ತದೆ. ಬಿರುಕಾಗದಂತೆ ಬೆರೆಸುವದಕ್ಕೆ ಬುದ್ಧಿ ಕೈವಾಡವು ಅಗತ್ಯಹೇಗೋ ಹಾಗೆ ವಾರ್ಧಿಕಷಟ್ಪದಿಯಲ್ಲಿ ವಚನವಾರಿಧಿಯ ಘಟಗಳನ್ನು ಬೆರೆಸಿ ಬರೆದು ಬುದ್ದಿ ವೈಶಾಲ್ಯತೆಯನ್ನು ತೋರಿಸಿದ್ದಾರೆ ಪುಟ್ಟ ರಾಜ ಕವಿಗಳು. ಭಾವ ಅಭಾವವಾಗದಂತೆ ಅಲಂಕಾರ ವಿಲಂಕಾರವಾಗದಂತೆ, ಛಂದಸ್ಸು ಛಿಂಪ್ರಸ್ನುಗಳಾಗದಂತೆ ವಚನಗಳನ್ನು ಷಟ್‌ಪದಿಗಳಲ್ಲಿ ಬಳಸುವ ಕಲೆ ಕರಗತವಾಗಿದೆ ಇವರಿಗೆ.

ತಾಳಿರ್ಕೆ ತಾಳಿದುದು ಬಾಳುವದು ಲೋಕದೊಳು
ತಾಳುವಿಕೆಯಿರಬೇಕು ತಾಳ್ಮೆಯೇ ಜಗದಿ ಜೀ-
ವಾಳವಾಗಿಹುದಿದನು ತಿಳಿದಿನ್ನು ತಾಳಿಮಿಗೆ ನೀತಿಯಿಂ ನಡೆಯಿರಯ್ಯ
ತಾಳಿಕೆಯ ಬಲದಿಂದ ಜಡಭೂತ ಪಂಚಕವು
ತಾಳುತಾ ದೇವತ್ವಮಂ ಪೂಜ್ಯ ಮಾಗಿಹುದು
ತಾಳಿನೊಳಗಿಹುದೆಲ್ಲವೀಗುಣಡೆ ವಿಶ್ವಕ್ಕೆ ಮೇಲಾಗಿ ಮೆರೆವುದರಿಯೆ ॥

ಈರೀತಿ ಪ್ರಾಸಿನ ಗಾಳಿ ಬೀಸಿ. ಇಳೆಯ ಜೀವಿಗಳಿಗೆ ತಾಳ್ಮೆಯ ತಾಳ ಕೊಟ್ಟು, ಮೇಲ್ಮೆಯ ಇಳೆಯಾಣ್ಮನ ಹಾಡು ಕೇಳಿಕೊಟ್ಟು, ಗೆಲುವಿನ ಸಾಹಿತ್ಯ ಸಗ್ಗದತ್ತ ಎಳೆಕುಳಿಗೆಗಳಿಸಿದ್ದಾನೆ; ಮರುಕುಳಿಗೊಳಿಸಿದ್ದಾನೆ ಕವಿ.

ಜಾಣ ಕವಿಯಾಗಿ ಬಾಣಾದಿ ಕವಿಗಳ ಸಾಹಿತ್ಯ ಮಂದಿರಕ್ಕೆ ಏಣಿ ಹಚ್ಚಿ ಹತ್ತಿದ್ದಾನೆ, ಆಧ್ಯಾತ್ಮದ ಬಾಣ ಮೀಟಿದ್ದಾನೆ.

ಕವಿ ಪುಟ್ಟರಾಜರು ಆಧ್ಯಾತ್ಮದ ಸುತತ್ವಗಳ ಚಯವಾಗಿದ್ದಂತೆ ಸೌಂದರ್ಯ ಪ್ರಿಯರಾಗಿ; ವರ್ಣನಾ ಪ್ರಿಯರಾಗಿ ಈ ಕಾವ್ಯ ಕಟ್ಟಡ ಕಟ್ಟಿದ್ದಾರೆ.

ಕಾವ್ಯದಲ್ಲಿ ಬೀರುವ ಸ್ತ್ರೀವರ್ಣನೆ, ಬನದ ಬಣ್ಣನೆ, ಮುಂತಾದ ವರ್ಣನೆ ಗಳನ್ನು ಬಳಸುವದು ಕಾವ್ಯದ ಗತಿಯಾಗಿದೆ; ಕವಿಯ ಮತಿಯಾಗಿದೆ. ಹಿಂದಿನ ಹಿರಿಯ ಮತಿಯಾಗಿದೆ. ಹಿಂದಿನ ಹಿರಿಯ ಕವಿಗಳ ವರ್ಣನೆಗೂ ಈ ಅಭಿ ನವ ಕವಿ ಪುಟ್ಟರಾಜರ ವರ್ಣನೆಗೂ ವ್ಯತ್ಯಾಸವಿದೆ,

ಸುಂದರಳಾದ ಸ್ತ್ರೀಯನ್ನು ಬಣ್ಣಿಸಿ ಬಣ್ಣಿಸಿ ಕಾಮ ಪ್ರಚೋದನೆ ಮಾಡಿ ದ್ದಾರೆ ಹಿಂದಿನ ಕವಿಗಳು. ಆದರೆ ಈ ನಮ್ಮ ಕವಿಗಳು ಕಾಮುಕ್ಕಿಂಬಿಲ್ಲದಂತೆ

ಸ್ತ್ರೀ ವರ್ಣನೆಯನ್ನು ಪೂರ್ಣಿಸಿದ್ದಾರೆ; ನಿರ್ಮಲತೆಯಲ್ಲಿ ನಿರ್ಣಯಿಸಿದ್ದಾರೆ, ಪೂರ್ವಿಯನುಕರಣ ಕಡಿದು ತಾಯೆ ಯಾವರಣದಲ್ಲಿ ಲೀಲಾ ಜಾಲಾಗಿ ಜೀರ್ಣಿಸಿದ್ದಾರೆ.

ಅದು ಹೇಗೆ ?

ಸಾರಿಯರ ಕಟಿಗುಪಮಿಪರು ಸಿಂಹ ಮಧ್ಯವನು
ಗೌರಿಗದು ವಾಹನಂ, ನಾನವಳ ಸಾತ್ವಿಕದ
ಸಾರಮಂ ಪೊತ್ತಿರುವೆನೆನಗೇಕೆ ತತ್ಸಾಮ್ಯವೆಂದೆನುತೆಮೆರೆಯುವಂತೆ ॥
ಪಾರವಿಲ್ಲದ ಸೊಬಗನೊಳಕೊಳ್ಳು ತವಳ ನಡು-
ಸೂರಿಗಳ ಮನವೊಲಿಸಿ ಸಿಂಗರದ ಖನಿಯೆನಿಸಿ
ಭೂರಿಶೋಭೆಯೊಳೊಪ್ಪಿನಲಿವುದೆನ್ನ ಜುರಸನೆಯದನೇನು ಬಣ್ಣಿಸುವದು ॥

ಸ್ತ್ರೀಯರ ನಡು ( ಟೊಂಕ ) ಸಿಂಹದ ನಡುವಿನಂತೆ ಎಂಹು ಉಪಮೇಯ ಕೊಡುವ ಕವಿಗಳು ಭಾವದೋರ್ಣನೆಯನ್ನು ಈ ಕವಿಗಳ ಒಪ್ಪಿಲ್ಲ. ಪತಿತಪಾವನ ಹರನರ್ಧಾಂಗಿಯ ವಾಹನವಾದ ಸಿಂಹದ ನಡುವೆಲ್ಲಿ ? ಈ ಸ್ತ್ರೀಯರ ನಡುವೆಲ್ಲಿ ? ಅದಕ್ಕೂ ಇದಕ್ಕೂ ಸಾಮ್ಯವೆಂದರೆ ಗೋವಿಗೆ ಕಾಮಧೇನು ಎಂದತೆ ಅಸಂಮಂಜಸವಾಗುವದು. ಕಾಮಧೆನುವಿನ ಅಣುವಿನ ಶತಭಾಗದ ತುಣಕಾಗಿ ಭುವಿಯಲ್ಲಾಧಿಸಿದ ಆಕಳಿಗೆ ಕಾಮಧೇನುವಿನ ಉಪಮಾ ಕೊಟ್ಟರೆ ಸರಿಹೊಂದಬಹುದೆ ? ಅದರಂತೆ ಪರಮ ಪಾವನ ಸಿಂಹದ ನಡುವಿಗೆ ಸ್ತ್ರೀಯಳ ನಡುವಿಗೂ ಹೋಲಿಕೆ ಕೊಟ್ಟರೆ ನಾನು ಒಪ್ಪುವದಿಲ್ಲವೆಂದೆನ್ನುವ ಭಾವ ತೋರಿಸಿದ್ದಾರೆ ಪುಟ್ಟರಾಜರು ಈ ಮೇಲಿನ ಪದ್ಯದಲ್ಲಿ.

ಸಸಿ ತುಟಿಗೆ ಹೋಲಿಪರು ಬಿಂಬ ಫಲವನು ವಿಬುಧ
ರಿಳೆಯ ಸುಂದರಿಯರಿಗೆ ಹೋಲಬಹುದಾದೊಡೇಂ
ಸಲದಿದು ಮಹಾದೇವಿಯೊಷ್ಠಕುಪಮಾನವೀತುಟಿಯು 'ಮಂತ್ರದನೆಲೆವೆನೆ
ನೆಲಿಸದಿದೆ ವೇದವೆನಿಸುವದೆ ತದ್ವಾಣಿಯುರೆ
ನೆಲಿಸುವರೆ ಜನಮನಂ ಶೃತಿಯಾಗದಿರೆ ನುಡಿಯು
ನೆಲದ ಪೆಣ್ ಶುಕವಾಣಿಯೆನಿಸಬಹುದಿವಳಂತೆಶೃತಿವಾಣಿಯೆನಿಸಬಹುದೆ ॥

ಸ್ತ್ರೀಯಳ ತುಟಿದ್ವಯ ಗಳ ಮಿಡುಕಾಟ ಅನುರಾಗದ ಹರಿದಾಟವೆಂದು

ಕಾಮವಾಸನೆಯ ಬಂಣ ಬಳಿಯದೆ ವೇದಮಂತ್ರ ಪಠಣದ ಮಿಡುಕಾಟವೆಂದು ವರ್ಣಿಸಿದ್ದಾನೀ ಕವಿ. ಈ ಮಹಾದೇವಿಯ ಶೃತಿವಾಣಿಯಂತೆ ಭವದ ಹೆಂಣು ಗಳ ವಾಣಿಯಾಗ ಬಹುದೆ? ಹೀಗೆ ನೀನು ಭವದ ಹೆಂಣುಗಳನ್ನು ಹೊಗಳು ವದೆ ? ಎಂದು ಕಾಮರಸಕ್ಕಿಂಬುಗೊಟ್ಟ ಕವಿಗಳನ್ನು ಹಳಿದಿದ್ದಾರೆ ಈ ಕವಿ ಗಳು.

ಕಾಮವೇಷತೊಟ್ಟು ತಾಮರಸದ ಪ್ರದರ್ಶನ ಮಾಡದೆ; ಹೈಮವತಿ ಯಾಣ್ಮನ ವೇಷದೊಟ್ಟು; ಕಾಷಾಯಾಂಬರವ ಶಿರದಿಹೊದ್ದು, ಬ್ರಹ್ಮಚಾರಿಯ ಧೀಮರಸ ಪ್ರಧಾನವಾದ ಪಾತ್ರದೊಟ್ಟು ಈ ಕಾವ್ಯರಂಗಭೂಮಿಯಲ್ಲಿ ಪರಮ ತ್ವದ ಪ್ರದರ್ಶನ ಮಾಡಿದ್ಧಾರೆ. ಕಾಮನಿರ್ನಾಮ ಮಾಡಿದ ಪುಟ್ಟರಾಜರು, (ಬಹ್ಮಚರ್ಯದ ಕವಿವರರು,

ಭಕ್ತಿಯೆಂಬಂಗನೆಯು ನಿಜಮುಖವ ನೋಡಲಾ
ಸಕ್ತಿಯಿಂ ರಚಿಸಿರ್ಪ ರನ್ನಗನ್ನಡಿಯೋಯೆನೆ
ಸಕ್ತಸೌಂದರ್ಯದೊಳು ರಂಜಿಪುದು ತನ್ಮಹಾದೇವಿಯ ಕಪೋಲಯುಗವು ‖
ಯುಕ್ತಮಿದುಮಲ್ಲದಿರೆ ನೋಳ್ಪ ಸಜ್ಜನರಲ್ಲಿ
ವ್ಯಕ್ತ ಸತ್ಯಪ್ರೀತಿ ಶೀಲಾದಿ ಸುಗುಣಗಳು
ಸೂಕ್ತಮೆನೆ ವರ್ಧಿಸುತಲಿರ್ದಪನೆನ್ನೈಜಹುದು ಮುಪಚಾರ ವಚನಮಲ್ಲ ‖

ಆಹಾ ! ಎಂಥ ವಿರಕ್ತತೆತುಂಬಿದೆ ? ಎಂಥ ಕಬ್ಬದವಿರತೆನಿಂದಿದೆ ? ಕವಿಯ ಭಾವ ! ಶಿವಭಾವ !! ಭವದಭಾವ ?!!

ಭಕ್ತಿಯೆಂಬ ಹೆಂಣು ತನ್ನ ಮುಖದ ಬಂಣನೆಯ ನೋಡಿಕೊಳ್ಳುವದಕ್ಕೆ, ಮಹಾದೇವಿಯುಗಲ್ಲದ್ವಯಗಳು ರನ್ನಗನಡಿಯಾಗಿ ನಿಂತಿವೆ; ಒಪ್ಪಿವೆ.

ಈ ರೀತಿ ಕವಿ ವರ್ಣಿಸಿದುದನ್ನು ನೆನಿಸಿಕೊಂಡರೆ ಇದೊಂದು ವಿಶಿಷ್ಟ ವೈಶಿಷ್ಟ್ಯ ಲಹರಿಯೆಂದು ನಮಗರಿವಾಗದಿರದು. ಕೆಸರಿನಲ್ಲಿಯ ಕಮಲದಂತೆ; ಮಂಣಿನಲ್ಲಿಯ ಚಿನ್ನದಂತೆ; ನರಕದಲ್ಲಿಯ ನಂದಾದೀಪದಂತೆ ಕವಿಯ ನಿರ್ಮಲ ಹೃದಯ ಒಪ್ಪಿದೆ; ಶಿವನಪ್ಪಿಗೆಯಲಿ ಸುಪ್ತಾಗಿದೆ, ಜೀವಿಯಲ್ಲಿ ಜೀವಾತ್ಮನೆನಿ ಸಿದೆ. ಪರಮಾತ್ಮನನ್ನು ಪ್ರತ್ಯಕ್ಷ ಮಾಡಿಕೊಂಡಿದೆ.

ಪುಟ್ಟರಾಜರ ಕಾವ್ಯ ಶೃಷ್ಟಿಯೇ, ಕಾವ್ಯ ಶೈಲಿಯೇ, ಕಾವ್ಯೇಚ್ಛೆಯೇ ಶಿವಕಲೆಯಾಗಿ ಹೊರ ಹೊಮ್ಮಿದೆ; ಚಿಮ್ಮಿದೆ.

" ಅಕ್ಕ ಮಹಾದೇವಿಯ ಪುರಾಣ, ಪುಟ್ಟರಾಜರ ಹಿರಿಗಬ್ಬ ದೋರಣ, ಶಿಸನ್ನಬ್ಬದೌತಣ; ಗಿರಿಜಾರಮಣಿಯಾಭರಣ; ವೀಣಾ ಪಾಣಿಯ ವಸನದಾ ಪರಣ; ಪ್ರಪೂರ್ಣ.

## ಬಸವ ಪುರಾಣ ( ಹಿಂದಿ )

ಮೊದಲನೆಯದಾಗಿ ಪುರಾಣ ಪೀಠ ಚಕ್ರವರ್ತಿ ವ್ಯಾಸ ಮಹರ್ಷಿ ದೇವ ನಾಗರೀ ಭಾಷೆಯಲ್ಲಿ ಬಸವ ಪುರಾಣವನ್ನು ಭವಿಷತ್ತಾಗಿ ಬರೆದನು.

ಇವನು ಬರೆದ ಬಸವ ಪುರಾಣದ ಅನುವಾದವನ್ನು ತೆಲುಗಿನಲ್ಲಿ ಪಾಲ್ಕು. ರಿಕೆ ಸೋಮನಾಥ ಕವಿಗಳು ಮಾಡಿದರು.

ಮರಾಠಿ ಭಾಷೆಯಲ್ಲಿ ಕವಿ ತುಕಾರಾಮ ಆವಟೆ ಶಾಸ್ತ್ರರ ಅವರು ಬಸವ ಪುರಾಣದನುವಾದ ಮಾಡಿದರು.

ಇನ್ನು ಕನ್ನಡ ಭಾಷೆಯಲ್ಲಿ ಭೀಮ ಕವಿಕೃತ ಬಸವ ಪುರಾಣ, ಸಿಂಗಿರಾ ಜಕೃತ ಬಸವ ಪುರಾಣ, ಹರಿಹರದೇವಕೃತ ಬಸವರಾಜದೇವರ ರಗಳೆ ಕಾವ್ಯ, ಷಡಕ್ಷರದೇವಕೃತ ವೃಷಭೇಂದ್ರವಿಜಯ ಕಾವ್ಯಗತಾದಿ ಗ್ರಂಥಗಳು ಪ್ರಸಿದ್ಧ ಹೊಂದಿವೆ;

ಮಹಾರಾಷ್ಟ್ರ ಭಾಷೆಯಲ್ಲಿ, ಆಂಧ್ರಭಾಷೆಯಲ್ಲಿ ಆಂಗ್ಲ ಭಾಷೆಯಲ್ಲಿ, ಕನ್ನಡ ಭಾಷೆಯಲ್ಲಿ, ಬಸವಣ್ಣನವರ ಜೀವನ ಅನುವಾದಿತವಾಗಿದೆ. ಆದರೆ ರಾಷ್ಟ್ರ ಭಾಷೆಯಲ್ಲಿ ಅನುವಾದಿತವಾಗಿದ್ದಿಲ್ಲ. ಇದನ್ನರಿತು ಪುಟ್ಟರಾಜ ಕವಿಗಳು ರಾಷ್ಟ್ರಭಾಷೆಯ ಪುರಾಣ " ಅನುವಾದಿಸಿ ರಾಷ್ಟ್ರದೇವನ ಜೊತೆಗೆ ರಾಷ್ಟ್ರ ಜ್ಯೋತಿ ಬಸವೇಶ್ವರನ ಸೇವೆ ಮಾಡಿ, ಪೂಜಿಸಿ ಪೂಜ್ಯರಾಗಿದ್ದಾರೆ.

ಶರಷಟ್‌ಪದಿಯಲ್ಲಿ ಹಿಂದೀ ಬಸವ ಪುರಾಣ ರಚಿಸಿದ್ದಾರೆ; ಶರದಂತೆ ವಿದ್ವತ್ ವಿಚಾರಗಳ ಬೆರಿಸಿದ್ದಾರೆ. ಈಗ ಅದನ್ನೇ ಅರಿಯೋಣ.

ಶ್ರೀಗುರು ! ತುಮಬಿನಕರತಾ ನೇತಾ,
ಕೋಯಿ ನಹಿ ಕಭಿಮೇರಾ ।
ಸಚ್ಚಿದಾನಂದ, ನಿತ್ಯ ಪರಿಪೂರ್ಣ.
ಹೋ ಅಖಂಡ ತುಮಜಗ ಸಾರಾ ॥;

ಈರೀತಿ ಗುರು ಪ್ರಾರ್ಥನೆಯ ಪ್ರಕಾಶದಲ್ಲಿ ತೊಳಗಿ ಬೆಳಗಿ ಮುಂದೋ

ಡುತ್ತದೆ. ಪುಟ್ಟರಾಜರ ಕವಿತಾ ಪಕ್ಷಿ:

ರೇಣು ಕಾಧ್ಯಸಮು ಘಂಟಾಚಾರ್ಯೋಕೆ,
ನಾಮು ಪಥತಾ ಕಾವ್ಯ ಲಿಖೂ,
ಇಸಕೋ ಲಿಖಕರ್ ಭವವಿನಾಶಕರೂ,
ಕೀರ್ತ ಶರೀರ ಜಗತಮೆ ರಖೂ ॥

ಶ್ರೀಗುರು ಪ್ರಾರ್ಥನೆಯೊಂದಿಗೆ ಪಂಚಾಚಾರ್ಯರ ಪ್ರಾರ್ಥನೆಯನ್ನು ಪರಿಪಕ್ವ ಹೃದಯದಿಂದ ಹಾಡಿ ಕಾವ್ಯವನ್ನು ರಚಿಸಲ್ ಪಡುತ್ತೇನೆಂದು ಪುಟ್ಟರಾಜರು ಪ್ರಸಿದ್ಧಿ ಪಡಿಸುತ್ತಾರೆ.

ನಾನು ಮಹಾಮಹಾ ಪಂಡಿತರಂತೆ ಪಂಡಿತನೂ ಅಲ್ಲ. ಅಲ್ಲದೆ ಹಿಂದೀ ಭಾಷೆಯು ನನ್ನ ಮಾತೃ ಭಾಷೆಯೂ ಅಲ್ಲ. ಈ ಭಾಷೆಯಲ್ಲಿ ಸಾಕಷ್ಟು ಪರಿಣತೆಯನ್ನೂ ಪಡೆದಿಲ್ಲ. ಅಂದಾಗ ಈ ಬಸವಮಹಾಪುರಾಣದ ಕಾರ್ಯಕ್ಕೆ ತೊಡಗಿರುವದನ್ನು ಸಾಹಸ ಕಂಡು ಶಾರದಾದೇವಿ ನಗಬಹುದು. ಎಂದು ತನ್ನ ಕಿಂಕರಭಾವ ಬೆರಿಕೆ ಮಾಡಿದ್ದಾನೆ ಈ ಬಸವ ಕಾವ್ಯದಲ್ಲಿ

ಛೋಟೋ ಮೆ ಛೋಟಾ ಹೂ-
ಕ್ಯಾ ಹೈ ? ಆಂಖ ಭೀ ಮುಝೆ ನಹಿ ।
" ಪುಟ್ಟರಾಜ " ನಾಮ ಸಾರ್ಥಕ ಮೇರಾ,
ಮೈ ಚಾಹ ತಾ ಹೂ ಗುರು ಬಲ ಹಿ ॥

ನಾನು ಸಂಣವರಲ್ಲಿ ಸಂಣವನು. ನನ್ನಲ್ಲಿ ಯಾವ ಶಕ್ತಿಯದೆ ? ಮೇಲಾಗಿ ನನಗೆ ಕಂಣಿಲ್ಲ- ಪುಟ್ಟರಾಜ ಈ ನನ್ನ ಹೆಸರಿಗೆ ವ್ಯಕ್ತಿತ್ವವಿದೆ. ಅಂದಾಗ ಈ ಮಹಾಕಾರ್ಯಕ್ಕೆ ಮನಸು ಮಾಡಿದ್ದು ಗುರುಬಲದಿಂದ. ಗುರು ಕೃಪೆಯಿಂದಲೇ ಈ ಕಾರ್ಯ ಮಾಡಲ್ಯುದ್ಯುಕ್ತನಾಗುತ್ತೇನೆ. ಎಂದು ಕೀಳಿನ ಕೀಳಾಗಿ ನುಡಿದ ಕವಿಯಲ್ಲಿ ಅದೆಂಥ ಮಹತೆ ತುಂಬಿದೆ ? " ಎನಗಿಂತ ಕಿರಿಯರಿಲ್ಲ " ವೆಂದು ಸಾರಿದ ಬಸವ ತಂದೆಯ ಕಿರಿಭಾವ ಈ ಪುಟ್ಟರಾಜರಲ್ಲಿ ಕೇಂದ್ರೀಕೃತವಾಗಿದೆ.

ಬಸವಂಣನವರ ಬಗ್ಗೆ ಅನೇಕ ಕವಿಗಳು ಅನೇಕ ಕಾವ್ಯ ಪುರಾಣಗಳನ್ನು ಬರೆದಿದ್ದಾರೆ. ಅಂದಾಗ ನೀನು ಇದನ್ನೆ ಅರೆಯುವದು ನಗೆಗೇಡಿತನವಲ್ಲವೆ ? ಎಂದು ಕೇಳಬಹುದೆಂದು ಕಲ್ಪಿಸಿ ಕೆಳಗಿನ ಪದ್ಯ ಆಧಾರವಾಗಿಟ್ಟಿದ್ದಾರೆ.

ಪಕ್ವಾನ್ ಭೋಜನಾನಂತರ ಮೆ,
ತಕ್ರ ಕಿ ಕಾಮನಾ ಜೈಸೀ।
ಸುಕವಿ ಕಾವ್ಯ ಕೋ ಸುನನನೇಕೆ ಬಾದ,
ಮೇರಿ ಕೃತಿ ಸುನ್ ಲೇ ವೈಸಿ॥

"ಊಟಕ್ಕೆ ಮೊದಲು ಉಪ್ಪಿನಕಾಯಿ" ಎಂಬ ಗಾದೆಯಂತೆ ಪಕ್ವಾನ್ನ ಊಟಮಾಡಿದ ಮೇಲೆ ಕಾರದ ತನಿಸು ಅವಶ್ಯಬೇಕು. ಅದರಂತೆ – ಮಹಾ ಮಹಾ ಕವಿವರ್ಯರು ಈ ಬಸವಣ್ಣನವರ ಬಗ್ಗೆ ಶ್ರೇಷ್ಠತರವಾದ ಕಾವ್ಯಗಳ ರಚಿಸಿ ಪಕ್ವಾನ್ ಊಟ ವುಣಿಸಿದ್ದಾರೆ. ಇದರಲ್ಲಿ ನಾನು ಕಾರದ ತಿನಿಸಿನಂತೆ; ಸಾರಿನಂತೆ; ಉಪ್ಪಿನಕಾಯಿಯಂತೆ ಈ ಬಸವ ಪುರಾಣವನ್ನು ಅನುವಾದ ಮಾಡಿದ್ದೇನೆ ಗ್ರಹಿಸಿರಿ.

ಎಂದು ಹೇಳುವ ಕವಿಯ ಬುದ್ಧಿ ಚಾತುರ್ಯ? ಕಂಡು ನಮಗಾಗುವವ್ವ ಆಶ್ಚರ್ಯ. ಇದು ಎಂಥ ಆರ್ಯೋಕ್ತಿ? ಇದು ಎಂಥ ಕಾರ್ಯೋಪ್ಯುಕ್ತಿ?

ಬಸವಣನವರ ಸಂಪೂರ್ಣ ಜೀವನ ಈ ಕಾವ್ಯದಲ್ಲಿ ಚಿತ್ರಿತವಾಗಿದೆ. ಹಿಂದಿನ ಕವಿಗಳು ಬರೆಯದೇ ಇದ್ದ ವಿಷಯುಗಳನ್ನುತಮ್ಮ ಈ ಪುರಾಣದಲ್ಲಿ ಬೆರೆ ಸಿದ್ದಾರೆ. ಪುಟ್ಟರಾಜರು.

ಬಸವಂಣನವರು – ಬಸವಂಣನವರು ಉದ್ಧರಿಸಿದ ಧರ್ಮ– ಧರ್ಮದ ಅವನತಿ, ಪ್ರಗತಿ– ದ್ವೈತ, ಅದ್ವೈತ, ವಿಸಿಷ್ಟಾದ್ವೈತ, ಶಿವಾದ್ವೈತಮತಗಳ ವಿಮರ್ಶನ— ಶಿವಧರ್ಮ ಅದ್ಹೇಗೆ ಸ್ಥಿರತೆ ಹೊಂದಿತು?— ಗುರು–ಜಂಗಮ –ಲಿಂಗಗಳ ವಿಚಾರ ಪ್ರತಿಪಾದನ – ಲಿಂಗ ಅಂದರೇನು? ಲಿಂಗ ಮತ ವೆಂದರೇನು? ಲಿಂಗಾಯತನಾರು?—ಪಂಚಾಚಾರ ಷಡಸ್ಥಲಗಳ ವಿಮ ರ್ಶ- ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಾಶ್ರಮಗಳ ತುಲನಾತ್ಮಕ ವಿಚಾರ ಸರಣಿ— ಮೊದಲಾದ ವೀರಶೈವ ಧರ್ಮದನುಭವಗಳು– ಈ ಎಲ್ಲ ವಿಷ ಗಳ ಪ್ರೌಢ ಪ್ರದರ್ಶನವಾಗಿದೆ. ಈ ಗ್ರಂಥದಲ್ಲಿ,

ಪುರಾತನ ಹಾಗೂ ಶಿವಶರಣರ ಜೀವನ ಚರಿತ್ರೆಗಳನ್ನೊಳಗೊಂಡ ಈ ಗ್ರಂಥ ರಸಿಕರಿಗೆ ರಸಾಯನಂಬುಧಿಯಾಗಿ ಪರಿಣಮಿಸಿದೆ; ಪರಿಣಮಿಸುತ್ತಿದೆ-

ಇನ್ನೊಂದು ಮುಖ್ಯ ವಿಷಯವನ್ನು ತಿಳಿಯಬೇಕು.

ಬಸವ ಪುರಾಣವನ್ನು ಬರೆಯಬೇಕೆಂದು ಸಂಕಲ್ಪಿಸಿದಾಗ್ಗೆ ಬರೆಯಲು ಅಧೈರ್ಯ ಹೊಂದುತ್ತಾನೆ. ಹೇಗೆ ಬರೆಯಲಿ? ಬರೆಯುವ ಯೋಗ್ಯತೆ ನನ್ನಲ್ಲಿ ರುವದೆ? ಎಂದು ಯೋಚಿಸಿ ಚಿಂತೆಗೊಳಗಾದ ಭೀಮಕವಿಯು. ಒಂದುದಿನ ಇದೇ ಸ್ಮರಣ ಮಾಡುತ್ತಾ ಮಲಗಿದಾಗ ಇವನ ಗುರು ಪಾಲ್ಕುರಿಕೆ ಸೋಮ ನಾಥದೇವನು ಕನಸಿನಲ್ಲಿ ಬಂದು ಭೀಮಾ! ಧೈರ್ಯಗುಂದಬೇಡ! ನಿನ್ನಾತ್ಮ ದಲ್ಲಿ ನಾನಿದ್ದು ಬಸವಮಹಾತ್ಮನ ಚರಿತ್ರೆ ಬರೆಸುತ್ತೇನೆಂದು ಹೇಳಿದನು. ಆವಾಗ್ಗೆ ಧೈರ್ಯದಿಂದ! ಗುರುಕೃಪೆಯಿಂದ ಭೀಮ ಕವಿಯು ಬಸವ ಪುರಾಣ ವನ್ನು ಕನ್ನಡದಲ್ಲಿ ಬರೆದನು

ಇದರಂತೆ ನಮ್ಮ ಪುಟ್ಟರಾಜರಿಗೂ ಒಂದು ಘಟನೆ ಸಾಮ್ಯವಾಗಿ ನಡೆ ದಿದೆ. ಬಸವ ಪುರಾಣವನ್ನು ಹಿಂದೀಭಾಷೆಯಲ್ಲಿ ಅನುವಾದಿಸಬೇಕೆಂದು ನಿರ್ಧ ರಿಸಿ ಬಹಳ ದಿನಗಳಾಗಿದ್ದವು. ಆದರೆ ಮನದಲ್ಲಿದ್ದ ಪ್ರತಿಯಾಶೆಯನ್ನು ಕೃತಿ ಯ ರೂಪವನೀಡುವದು ಹೇಗೆ? ಈ ಮಹತ್ಕಾರ್ಯ ಕುರುಡನಾದ ನನಗೆ ಸಾಧ್ಯವೆ? ಎಂದು ಚಿಂತಿಸುತ್ತಾ ಮಲಗಿದಾಗ ಒಂದು ಕನಸು ಕಂಡರು. ಪುಟ್ಟರಾಜರು, ಕನಸಿನಲ್ಲಿ ಗುರುವಾದ ಪಂಚಾಕ್ಷರಿಯು ಕಾಣಿಸಿಕೊಂಡು ಪುಟ್ಟರಾಜಾ! ವಿನಾ ವಿಚಾರಿಸಬೇಡ! ಸದ್‌ಗುರು ಯಡೆಯೂರ ತೋಂಟದ ಸಿದ್ಧಲಿಂಗೇಶ್ವರನನ್ನು ಯಜಿಸಿ, ಪರಮಗುರು ಕುಮಾರ ಶಿವಯೋಗಿಯ ಧ್ಯಾನಿಸಿ ಕೃತಿರಚನೆಗೆ ತೊಡಗು! ಅಂದರೆ ನಿನ್ನ ಮನದಿಚ್ಛೆಯನ್ನು ಆ ಬಸವ ತಂದೆಯೇ ಸಂಪೂರ್ಣ ನೆರವೇರಿಸಿಕೊಳ್ಳುತ್ತಾನೆ. ಎಂದು ನುಡಿದು ಅದೃಸ್ಯ ರಾದರು. ಗುರುವರ್ಯರು.

ಪುರಾಣಲಖಕರ ಗುರುಬಲಸೆ।
ಹಿಂದಿಮೆ ಬಸವೇಶ ಕಾವ್ಯ ಲಿಖನೆ-
ಮಮ ಹೃದಯ ಬಹೇ ಚಿರಸೆ ॥

ಅಂತೇ ಹೀಗೆ ಒಡನುಡಿದಿದ್ದಾರೆ ಪುಟ್ಟರಾಜರು. ಶ್ರೀಗುರು ಬಲದಿಂದ ಈ ಬಸವ ಕಾವ್ಯ ಬರೆದಿದ್ದೇನೆಯೇ ಹೊರತು ನನ್ನದೇನೂ ಇಲ್ಲವೆಂದು ಹೇಳುವ ಭಾವದ ಗಾಯನಕ್ಕೆ ಶೃತಿ ಹಿಡಿದಿದೆ ಈ ಪದ್ಯ,

ಇವರು ಈ ಬಸವ ಪುರಾಣ ಬರೆಯ ಹತ್ತಿದಾಗ ಆಗದ ಎಷ್ಟೋ ಜನ ಕುರುಡ! ಇವನೇನು ಬಸವ ಪುರಾಣ ಬರೀತಾನೆ? ಬರೆದರೂ ಅದರಲ್ಲಿ ಅದೆಷ್ಟು ಯಶ ಸಿಗಬಹುದು? ಎಂದು ಹೀಯಾಳಿಸಿದರು, ಜರಿದು ಮಾತ ನಾಡಿರು.

ಇಂಥಾ ಜನ ಜಗದಿ ಬಹಳ, ನಮ್ಮ ಸಮಾಜದ ಒಂದು ವ್ಯಕ್ತಿ ಸಮಾಜ ಬದುಕುವ ಕಾರ್ಯ ಮಾಡುತ್ತಾನೆ; ಎಂದು ಆನಂದ ಪಡದ ಹುಳಗಳು ಬಹಳ ಈ ನಮ್ಮ ವೀರಶೈವ ಸಮಾಜದಲ್ಲಿ.

ಅಂಬೆಗಾಲಿಕ್ಕಿ ಅಲೆದಾಡುವ ಕೂಸಿಗೆ ಮುಂಗೈ ಹಿಡಿದೆತ್ತಿ ನಡೆಗಲಿಸುವ ನಾಗರಿಕತೆಯ ಸಾಂಪ್ರದಾಯ ಬಿಟ್ಟು ಆ ಕೂಸಿನ ಕೈ! ಕತ್ತರಿಸುವ ಚಾಂಡಾಲರು ಬಹಳವಾಗಿದ್ದಾರೆ ಅಂಥವರಿಂದ ಸಮಾಜಕ್ಕೆ; ಸಮಾಜದ ಘನತೆಗೆ ಕುಂದು.

ಸುಂದರವಾದ ಕಟ್ಟಡಕ್ಕೆ; ಶಿಲ್ಪ ಮಂದಿರಕ್ಕೆ ಕುದೃಷ್ಟಿ ತಾಕಬಾರದೆಂದು ಅಸಹ್ಯ (ನಗ್ನ) ಚಿತ್ರಗೊಂಬೆಗಳನ್ನು ಕೆತ್ತಿ ಚಿತ್ರಿಸಿ ನಿಲ್ಲಿಸಿರುತ್ತಾರೆ. ಅದರಂತೆ ಪವಿತ್ರವಾದ ಈ ವೀರಶೈವ ಧರ್ಮಕ್ಕೆ ಪರಧರ್ಮದ ದೃಷ್ಟಿತಾಕಬಾರದೆಂದೇ ಇಂಥಾ ಅಸಹ್ಯ (ಜನರನ್ನು) ಗೊಂಬೆಗಳನ್ನು ಹುಟ್ಟಿಸಿರಬಹುದೇ? ಆದೇವ?

ಆನೆ ಹೋಗುವಾಗ್ಗೆ ಸ್ವಾನ ಬೊಗಳಿದರೇನು? ಎಂಬುಕ್ತಿಗನುಗುಣವಾಗಿ —.

ಕೃತಿಕೃತ ಕೃತಿಯುಂ ಕ್ಷಿತಿಯೊ–
–ಳ್ಕೃತಿರ ಹಿತರ್ಖಿಳಿಯರೆಂದು ಪಳಿಯೆಂಪುಳಿಯುಂ॥
ಧತಿ ಲಾಲಸ ರಮಣೀ ಸಮು
ರತಿಯುಂ ಕ್ಲೀಬರ್ಕ್ಗಳೆಂತು ಮೋಣರಿದಪರೆ ॥

ಈ ರೀತಿ ಹೇಳಿದ ಕವಿ ಷಡಕ್ಷರ ದೇವನ ಮಾತಿನತ್ತ ಲಕ್ಷವಿತ್ತು ಕಾವ್ಯ ರಚಿಸಿದರು ಪುಟ್ಟರಾಜರು.

ಬಹು ಪ್ರಯಾಸದಿಂದ ಕಾವ್ಯ ಪೂರ್ತಿ ಮಾಡಿದರು ಪುಟ್ಟರಾಜರು.

ಚಿನ್ನ ಕಲ್ಲಲ್ಲಿ ಮಣ್ಣಲ್ಲಿ ಎಲ್ಲೆಲ್ಲಿ
ತನ್ನ ಪ್ರಭಾವ ಬೀರೆ ಬೀರುತ್ತದೆ
"ಸೆಕ್ಸಫಿಯರ"

ವಿಥ್‌ವತ್ ಪೂರ್ಣಮಾದ; ತತ್ವಪೂರ್ಣವಾದ; ಮಾನವತ್ವ ಬದುಕಿನ ಜೀವಾಳವಾದ ಈ ಹಿಂದೀ ಬಸವ ಕಾವ್ಯವು, ಬಹುಬೇಗ ಜನಪ್ರೀಯತೆ ಪಡಿಯಿತು. ಇಲ್ಲಿಂದ ದಿಲ್ಲಿಯ ವರೆಗೆ ಈ ಕಾವ್ಯಗಂಗೆ ಹರಿಯಿತು. ದಿನಾಂಕ: ೨೯-೪-೧೯೬೧ ರಂದು ದಿವಂಗತ ಬಾಬು ರಾಜೇಂದ್ರ ಪ್ರಸಾದರು (ಮಾಜಿ ರಾಷ್ಟ್ರಪತಿಗಳು) ಈ ಹಿಂದೀ ಬಸವಕಾವ್ಯವನ್ನು ಹಾಗೂ ಕವಿ ಪುಟ್ಟರಾಜರನ್ನು ದಿಲ್ಲಿಗೆ ಕರೆಯಿಸಿ ಸತ್ಕರಿಸಿದರು *ರಾಷ್ಟ್ರಪತಿ ಭವನದಲ್ಲಿ. ಪುಟ್ಟರಾಜರ ಕಾವ್ಯ ಪ್ರೌಢಿಮೆಯನ್ನು ಬಸವ ಮಹತಿಯನ್ನು ಅರಿತುಕೊಂಡ ಪ್ರಸಾದರು ಈ *ಬಸವಕಾವ್ಯವನ್ನು ತಲೆಯಮೇಲೇರಿಸಿಕೊಂಡರು. ಅಂದಾಗ ಈ ಕಾವ್ಯ ಎಷ್ಟೊಂದು ಪ್ರಭಾವ ಪೂರ್ಣ ವಾಗಿರಬೇಕೆಂದು ಓದುಗರೇ ಊಹಿಸಬೇಕು.

ಬಸವಂಣನವರ ಜೀವನಪರಿಯದವರು ಯಾರೂ ಇಲ್ಲವೆಂದರೆ ತಪ್ಪಾ ಗಲಾರದು;ಬಸವನೆಂದರೆ ಯಾರು?ಅಂತ ಹುಡುಗರಿಗೆ ಕೇಳಿದರೆ ದೇವರು ಎಂದು ತತ್‌ಕ್ಷಣ ಉತ್ತರಕೊಡುತ್ತಾರೆ.ಪಠ್ಯಪುಸ್ತಕಗಳಲ್ಲಿ ಬಸವಂಣನವರ ಜೀವನ ಪ್ರಕಟಿಸಿ ದೇಶದ ಎಲ್ಲಾ ಮಕ್ಕಳಿಗೆ ತಿಳಿಯ ಪಡಿಸಿದ ಸರಕಾರಕ್ಕೆ ನಾವಿಲ್ಲಿ ಋಣಿಯಾಗುತ್ತೇವೆ. ಕುಟ್ಟುವ, ಬೀಸುವ, ಸೋಬಾನ, ಹಂತಿ, ಸುಗ್ಗಿ, ಮಂತಾದ ಹಾಡುಗಳಲ್ಲಿ ಬಸವನ ಜೀವನ ಹಾಸುಹೊಕ್ಕಾಗಿ ಪ್ರಚಾರಾಗಿದೆ. ಅಂದಾಗ ಬಸವಂಣನ ಚರಿತ್ರೆ ಹೇಳಲು ನಾನು ಆಶೆ ಪಡುವದಿಲ್ಲ. ಈ ವರ ಕವಿ ಪುಟ್ಟರಾಜರ ಈ ಶ್ರೆಷ್ಠ ಬಸವಕಾವ್ಯವವನ್ನು ರಾಷ್ಟ್ರವೇ ಹೊಗಳಿದೆ ಅಂದಾಗ ನಾನು ಹೊಗಳುವದೇನಿದೆ ?

ಆದರೂ ಈ ಭವದಾಟಿಸುವ 'ಬೃಹದ್‌ಗ್ರಂಥ ಬಸವ ಪುರಾಣವನ್ನು ನನ್ನ ಉದ್ಧಾರಕ್ಕಾಗಿ ವರ್ಣಿಸ ಹತ್ತಿದ್ದೇನೆಯೇ ಹೊರತು ಪಂಡಿತನೆಂದು ಗರ್ವದ ನುಡಿಗಳಿಂದ ಗ್ರಂಥವಿಮರ್ಶನವ ಮಾಡ ಹೊರಟಿಲ್ಲ,

"ಜನ್ಮಾಂತರಶತಾಭ್ಯಸ್ತಾ ಮಿಥ್ಯಾ ಸಂಸಾರ ವಾಸನಾ
ಸಾ ಚಿರಾಭ್ಯಾಸಯೋಗೇನ ವಿನಾನಕ್ಷೀಯೇಶ್‌ಕ್ವಚಿತ್ "
" ಮುಕ್ತಿಕೋಪನಿಷತ್ "

---

೩ ಈ ಬಸವ ಪುರಾಣ (ಕಾವ್ಯ) ಮೈಸೂರ ಪ್ರಾಂತದ ಶಾಲೆ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳ ಪಠ್ಯಪುಸ್ತತವಾಗಿ ಪರಿಗ್ರಹಿಸಲು ಸಮ್ಮತಿ ಪಡೆದಿದೆ.

ಜನ್ಮ ಜನ್ಮಗಳ ತಿರುಗುವಭ್ಯಾಸ ಬಲದಿಂದ ಮಿಥ್ಯವಾದ ಮಾಯಾ ದಾಶೆ, ಅನಿತ್ಯವಾದ ಸಂಸಾರವಾಸನೆ; ಅನಿಮಿತ್ತವಾದ ಕರ್ಮ ಪಿಪಾಸನೆ ಯನ್ನು ಕಳೆದುಕೊಳ್ಳುವದಕ್ಕೆ ಶಿವಧರ್ಮಾಭ್ಯಾಸ ಅಗತ್ಯ. ಎಂಬುಕ್ತಿಯ ಮಾಲೆ ಹಿಡಿದ ಶಿವಧರ್ಮ ಶಿಖಾಮಣಿ ಪುಟ್ಟರಾಜರ ಪಾದತಳದಲ್ಲರ್ಪಿಸಲು ಹೊರಟಿ ದ್ದೇನೆ.

ಓದುಗರು ಬೇಜಾರ ಮಾಡಿಕೊಳ್ಳಬಾರದು. ಕವಿಗಳು ತಮ್ಮ ತಮ್ಮ ದೇಹದ ರಕ್ತದ ಕಣಗಳನ್ನು ಶ್ರಮದಿಂದ ಕ್ಷೀಣವಾಗಿಸಿಕೊಂಡು ಕಾವ್ಯ ಬರೆ ಯುತ್ತಾರೆ. ಅವುಗಳನ್ನು ಗಮನಾರ್ಹನೆಗೆ ತಾರದಿದ್ದಲ್ಲಿ ನಾವು ನಿಜವಾ ಗಲೂ ಕೃತಘ್ನರಾಗುತ್ತೇವೆ. ಶಾರದೆಯ ದೃಷ್ಟಿಯಲ್ಲಿ

" ಕವಿಯೇ ಸರ್ವರೊಳುತ್ತಮಂ "

ಶ್ರೇಷ್ಠರಾದ ಕವಿಗಳನ್ನು; ಕವಿಯ ಕಾವ್ಯಗಳನ್ನು ಹೊಗಳಿದರೆ ನಿಜ ವಾಗಲೂ ಸಾಹಿತ್ಯ ಸೇವೆ ಮಾಡಿದಂತಾಗುತ್ತದೆ.

ಕಲಿಸಿದೊಡೇಂ ಬರ್ಕುಮೆಸ–ಲ್ಲಲಿತ ಕವಿತ್ವಂ ನಿಸರ್ಗ ಸುಭಗಂ ರಮಣೀ ।
ವಿಲಸಿತ ರತಿರಸ ಕಸಿಕತೆ–ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೆ ॥

ಎಲ್ಲರಿಗೂ ಕಾವ್ಯಕಲೆ ಸಾಹಿತ್ಯದ ನೆಲೆ ಸಾಧಿಸುವದು ಕಷ್ಟವೆಂದು ಅಭಿ ಪ್ರಾಯ ಪಡುತ್ತಾನೆ. ಆದ್ದರಿಂದ ನಾವು ಕವಿಯಾಗದಿದ್ದರೂ ಕವಿಯನ್ನೂ, ಕಾವ್ಯವನ್ನೂ ಪ್ರೀತಿಸುವದನ್ನಾದರೂ ಕಲಿಯಬೇಕು. ಅಂದರೆ ನಮ್ಮ ಬಾಳು ಸಾರ್ಥಕ.

---

* ಗುರುಗಳ ಜೊತೆಗೆ ದಿಲ್ಲಿಗೆ ನಾನು ಹೋಗಿದ್ದೆ. ಕಂಡಾರೆಕಂಡದ್ದನ್ನೇ ಇಲ್ಲಿ ಬರೆದಿದ್ದೇನೆ. ಆ ಸಮಯದಲ್ಲಿ ( ನ್ಯೂಜ್ ಫಿಲ್ಮ ) ಸಮಾಚಾರ ಚಲನಚಿತ್ರವಾಗಿ ಭಾರತದ ಎಲ್ಲ ಚಿತ್ರಮಂದಿರದಲ್ಲಿ ಪ್ರದರ್ಶಿತನಾದದ್ದು ಸರ್ವರಿಗೂ ತಿಳಿದ ವಿಷಯು. ಶ್ರೀ ಮ. ನಿ. ಪ್ರ. ಸವದಿ ( ನವಿಲುಗುಂದ ) ಮಹಾಂತಸ್ವಾಮಿಗಳವರು ಪುಟ್ಟರಾಜರ ಕ್ರಿಯಾಮೂರ್ತಿಗಳಾಗಿದ್ದರು. ಅವರ ನೇತೃತ್ವದಲ್ಲಿಯ ಕಾರ್ಯಕ್ರಮ ಕುಂದುಕೊರತೆ ಗಳಿಲ್ಲದೆ ಮುಗಿಯಿತು. ಪುಟ್ಟರಾಜರನ್ನು ಕಂಡಾಗ ಭಯ ಭಕ್ತಿಯಿಂದೆ ಕೈಮುಗಿ ದರು. ಪ್ರಸಾದಬಾಬುಗಳು " ಎಂದು– ಪ್ರತ್ಯಕ್ಷ ಕಂಡ ಸವದಿ ಶ್ರೀಗಳವರು ತಮ್ಮ ಪ್ರವಚನಗಳಲ್ಲಿ ಆಗಾಗ್ಗೆ ಹೇಳುವದು ಕೇಳಿರಬೇಕು ನೀವು. ಕೇಳದಿದ್ದರೆ ಅವರನ್ನು ಕಂಡು ತಿಳಿದರೆ ಇದಕ್ಕೂ ಮೇಲು,

## ಶಿವಬಸವೇಶ್ವರ ಪುರಾಣ (ಕನ್ನಡ)

ಕಕ್ಕಸ ನುಡಿಗಳ ತೊಡರ್ಚಿನಿವಾತಂ
ದಿಕ್ಕರಿಸುತ ಬಹು ಬಿಕ್ಕಲವಾತಂ
ಚಕ್ಕನೆ ಲೇಖನಿಯುಳಕವ ಕೆಡಿಸುವುದಂತಲ್ಲೀಕಬ್ಬಂ ||
ಸಕ್ಕದ ಗನ್ನಡದಿಂಪಿಂ ನವರಸ
ಮುಕ್ಕವ ತದ್ಭವ ತತ್ಸಮ ದೇಸಿಯ
ಚೊಕ್ಕಳ ಮೊಪ್ಪಂತುಸಿರ್ದಂ ಜಿಗಿಲಿಂ ಲಾಲಿಸಿ ಸದ್ಬುಧರು ||

" ಎಳಂದೂರ ಹರೀಶ್ವ ೭ಕವಿ "

ಪ್ರಾಸರತ್ನಾಕರದಲ್ಲಿ ಹೇಳಿದ ಎಳಂದೂರ ಹರೀಶ್ವರ ಕವಿಯ ಬಿಮ್ಮನ್ನು ತನ್ನ ಬುದ್ಧಿ ಬಿಮ್ಮಾನದಲಿರಿಸಿ ಈ ಶಿವಬಸವೇಶ್ವರ ಪುರಾಣ ರಚಿಸಿದ್ದಾರೆ ಪಂಡಿತ ಕವಿ ಪುಟ್ಟರಾಜರು.

ಪುರಾಣ ಕಾಲ ಪೂರೈಸಿದ್ದರೂ ಪರಂಪರೆ ಪೂರೈಸಿಲ್ಲ !
ಪುರಾಣ ಬರೆಯುವ ರೀತಿ ಪುರಾತನದ್ದಾದರೂ-
ಬರೆವವರ ದೃಷ್ಟಿ ಶೈಲಿಗಳು ಪುರಾತನದಾಗಬಾರದು !
ಸನಾತನ ಪಥದಲ್ಲಿ ನೂತನ ಪುಣ್ಯಪುರುಷರ ಬಾ,
ಳನ್ನು ಸಾಹಿತ್ಯ ಸಂಗೀತಗಳ ನವ್ಯ ರೂಪ-
ವನ್ನು ಕೊಟ್ಟು ಹೊಸ ಹೆಜ್ಜೆ ಹಾಕಿಸುವದೇ-ನ-
ವೀನ ಪುರಾಣಗಳನ್ನು ನವ್ಯದೃಷ್ಟಿ ! ನವ್ಯ ತುಷ್ಟಿ !!

|| ಜ. ಚ. ನಿ. ||

ಶ್ರೀ ಜ. ಚ. ನಿ. ಯವರ ಮೇಲಿನ ನುಡಿಮುತ್ತುಗಳಿಗೆ ತಕ್ಕಂತೆ ಈ ಕಾವ್ಯ ಸತ್ರವನ್ನು ವಿಸ್ತರಿಸಿದ್ದಾರೆ ಪುಟ್ಟರಾಜರು. ಹಾವೇರಿ ಹುಕ್ಕೇರಿ ಮಠಾಧೀಶರೂ, ಶಿವಯೋಗ ಮಂದಿರದ ಮಾತೆಯರೂ, ಗುರುಕುಮಾರನ ಪ್ರಾಣ ಪ್ರಿಯರು ವಿರಕ್ತಾಂಗಮಂಗಲರೂ, ಶಿವಯೋಗಿ ಪುಂಗವರೂ, ಪರಶಿವನವತಾರಿಗಳೂ ಆದ ಶಿವಬಸವ ಶಿವಯೋಗಿಗಳ ದಿವ್ಯ ಚಾರಿತ್ರ್ಯವೇ ಕಾವ್ಯ-ಶ್ರೀಯ ಚಿತ್ರ್ಯಯಾಗಿ ಮೈದಾಳಿದೆ.

" ಮಹಾಮಹಿಮರ ಜೀವನದಗತ್ತು. ನಾಡಿನ ಸಂಪತ್ತು, ಆದಿಗೆ ಮೂಲ, ಅನಾದಿಗೆ ಮೂಲ, ದಿಟ್ಟಿಗೆ ಮೂಲ, ಶೃಷ್ಟಿಗೆ ಮೂಲ, ಸಕಲಕ್ಕೆ ಮೂಲ ಗುರುಮೂಲ.

ಅಂತೇ ಅನಂತ ಕವಿಗಳೂ "ನಗುರೋರಧಿಕಂ" ಗುರುವಿಗಿಂತ ಅಧಿಕ ವಾವುದೂ ಇಲ್ಲವೆಂದು ತಿಳಿದು, ಗುರುಪಾದ ನೆನೆದು ಕಾವ್ಯ ಬರೆದಿದ್ದಾರೆ. ಆದರಂತೆ ನಮ್ಮ ಪುಟ್ಟರಾಜರು ಗುರುವಿನ ನೆನಕೆಯಿಂದ ಕಾವ್ಯ ಕಣಕೆ ಇಳಿಯುತ್ತಾರೆ.

ಸ್ತೋತ್ರದ ಸೂತ್ರಾದ ಶಿವಯೋಗ ಮಂದಿರದಲ್ಲಿ ಸ್ತೋತ್ರದ ನಾಂದಿ ಹಾಡಿ, ಸ್ತೋತ್ರ ಮಾಡುವ ಕಲೆಯನ್ನು ತನ್ನ ಹತ್ ಪಾತ್ರೆಯಲ್ಲಿ ಹೊತ್ತು ತಂದರಾ ಪುಟ್ಟರಾಜರು.

"ರಗಳೆಯ ಕವಿ ಹರಿಹರನಾದರೆ, ಸ್ತೋತ್ರದ ಕವಿ ನಮ್ಮ ಈ ಪುಟ್ಟ-ರಾಜರು".

ಸ್ತೋತ್ರ ಶಿವನಿಗೆ ಮುಟ್ಟುವ ಸಜೀವ ಪತ್ರವೆಂದು ಅರಿತಿದ್ದರೇನೋ ಸ್ತೋತ್ರಕ್ಕೆ ಬಲು ಬೆಲೆಯಿದೆ; ಇವರಲ್ಲಿದಕೆ ವಿಶಿಷ್ಟ ಬಲವಿದೆ.

ಭಾವರಸ; ಭಕ್ತಿರಸಗಳನ್ನು ಬೆರಿಕೆಮಾಡಿ ಸ್ತೋತ್ರ ಮಾಡಿದ್ದಾರೆ; ಅಂದಿನವರು; ಇಂದಿನವರು. ಆದರೆ ಈ ಪುಟ್ಟರಾಜರು ತಮ್ಮೀ ಕಾವ್ಯದಲ್ಲಿ ನವರಸಗಳ ಸಮರಸದಿ ನವೀನವಾಗಿ ಸ್ತೋತ್ರ ಮಾಡಿದ್ದಾರೆ.

ಶ್ರೀಗುರೂತ್ತಮ ಚಿನ್ಮಯ ನಖಿಲ
ಯೋಗಿ ಹೃತ್ಕಮಲಾರ್ಕ ಪರಶಿವ
ಯೋಗ ಮಂದಿರ ಸಚ್ಚಿದಾನಂತಾತ್ಮ ಚಿರಧಾಮ ॥
ಭೋಗ ಮೋಕ್ಷಾಧಾರ ದುರ್ಭವ
ರೋಗ ರಹಿತ ನಿರಂಜನ ಪ್ರಭು
ರಾಗದಿಂ ಪೊರೆಯನ್ನನಾಶಾ ಪಾಶದಿಂ ಬಿಡಿಸಿ ॥

ಹೀಗೆ- ಭಕ್ತಿರಸ ಬೆರಿಸಿ ಗುರುಸ್ತೋತ್ರ ಮಾಡಿದ್ದಾರೆ.

ಸತಿಗೆ ಮೋಹಿಸಿದವಗೆ ಮೆಚ್ಚಿದೆ
ಸುತಗಣಕವಾಡಿದನ ತಲೆಯೋಳ್
ಹಿತದಿ ಧರಿಸಿದೆ ನಿನ್ನೊಡನೆ ಹೊಡದಾಡಲೆಳಸಿದವ ॥
ನುತಿಸಿ ಬಾಗಿಲ ಕಾಯ್ದ ಕಲ್ಲಿಂ
ದತಿಶಯದೆ ಹೊಡೆದವಗೆ ಸಾಯು
ಜ್ಯತೆಯ ನಿತ್ತ್ಯ ಶಿವನೆ ನಿನ್ನಂ ಭಜಿಸುವದೆಂ ತೊರೆ ॥

ಈರೀತಿ ಶಿವನೊಡನೆ ಹಾಸ್ಯದ ನುಡಿಬಾಣಗಳನ್ನು ಬಿಟ್ಟು ಹಾಸ್ಯರಸ ಬೆರಿಕೆ ಮಾಡಿ ಸ್ತೋತ್ರ ಮಾಡಿದ್ದಾರೆ.

ಕುರಿದಲೆಯ ಕೊಡಿಸಿದೆ ಮಾವಂಗೆ
ಕರಿಮುಖವನಿತ್ತೆ ತನಯುಂಗೆ
ಗಿರಿಜಾತೆಯೆನಿಸಿದೆ ಪತ್ನಿಯಂ ದೇವ ಚಂದ್ರಧರ ||
ಇರಿಸಿದೈ ಜಲತ್ವವನೋರ್ವಸತಿ
ಗುರಿಯೊಳೊಗೆಸಿದೆ ಮಗನನೋರ್ವನ
ಕರುಣೆಯಾದೈ ನೀನದೆಂತು ಮಹೇಶ ಪೇಳಭವಾ ||

ಲೇ ! ಶಿವನೆ ! ನಿನ್ನಲ್ಲಿ ಯಾವ ಮಹತ್ವವಿದೆ? ಹೆಂಡತಿ ಮಕ್ಕಳನ್ನು ಸುರಕ್ಷಿತವಾಗಿ ಸಲಹದ ಹೇಡಿ. ಯಾವ ವರಗಳನ್ನು ಕೊಡಲಾಗದ ಕೋಡಿ. ಎಂದು ಕೀಳಾಗಿ ಕಂಡು ಸ್ತೋತ್ರ ಮಾಡಿದ್ದಾರೆ.

ಮೃಗಿಯಾಗಿ ಮಗಳೋಡೆ ಬಿದಿಯುರು
ಮೃಗವಾಗಿ ಬೆಂಬತ್ತೆ ನೀನಾ
ಮಿಗವ ಕೊಲ್ಲುತೆ ಧರಿಸಿಮೃಗಧರ ನೆನಿಸಿತಣಿಯದಲೆ |
ಮೃಗ ವಾಹನನಕಲೆಯೆ ತಲೆಯೋಳ್
ಮಿಗವ ತತ್ತೇಜ ವನಯುನ ದೋಳ್
ಮಿಗೆ ಸೂಡಿ ಮಹೇಶ್ವರನೆನಿಪೆ ಲೀಲೆಯಚ್ಚರಿಯು ||

"ಕೊಲ್ಲುವನೆ ಮಾದಿಗ" ಎಂದು ನುಡಿದಿದ್ದಾರೆ ನಮ್ಮ ಶರಣರು. ಇದಕ್ಕೆ ನೀನು ಹೊರತಾಗಿ ಕೊಲೆಗಡುಕನಾಗಿ ಚಾಂಡಾಲತ್ವ ಸ್ವೀಕರಿಸಿದ ಶಿವನೆ ! ಎಂದು ಭಯರಸ ಬೆರಿಕೆ ಮಾಡಿ ಸ್ತೋತ್ರ ಮಾಡಿದ್ದಾರೆ.

ಹರಿಯೋಳ್ ಪೋಗಿ ಭೂಮಿಯಂ ಬೇಡಿ
ತಿರಿದಂದು ರಾಮನ ನೇಗಿಲವ
ಕರೆತಂದು ಕಾಲನ ವಹಿಷಮಂ ಪಗ್ಗಮಂ ಪುಡಿಕೆ |
ದೊರೆಯದಿರೆ ಶೇಷನನುಗೊಳಿಸು
ತುರೆ ಜತೆಗೊಳಿಸಿ ನಿಜ ವೃಷಭನಂ
ಹರಿಗೊಳಿಸೆ ಕೃಷಿಯೋಳ್‌ದಣಿದ ಹರನೆಮ್ಮಂ ಸಲಹಲಿ |

ಒಂದಾನೊಂದು ಕಾಲದಲ್ಲಿ ಶಿವನಿಗೆ ದಾರಿದ್ರ್ಯತೆ ಬಂತಂತೆ. ಆವಾಗ್ಗೆ ಬಡತನದ ಕುಲುಮೆಯಲ್ಲಿ ಬಿದ್ದು ಕುಂದಿಕಂದಿ ದುಃಖಿಸುತ್ತಾನಂತೆ ಶಿವ.

ಜೀವನಕ್ಕಾಧಾರವಿಲ್ಲದಲೆ ಅಳಲುತ್ತಾನೆ ಬಳಲುತ್ತಾನೆ ಕಡುದುಃಖದಿಂದ. ಕಡೆಗೆ ದುಃಖಮರೆತು ಭಿಕ್ಷೆಗೆ ನಿಲ್ಲುತ್ತಾನೆ. ಶ್ರೀ ಹರಿಯಲ್ಲಿ ಬೇಡಿ ಭೂವಿಯ ಪಡೆದು, ರಾಮನ ನೇಗಿಲನ, ಯಮನ ಕೋಣ, ಭಿಕ್ಷೆ ಬೇಡಿತಂದು ಆದಿ ಶೇಷ ನನು ಹಗ್ಗವಾಗಿರಿಸಿಕೊಂಡು ನೇಗಿಲ ಹೊಡಿಯಹೋದ. ''ಕೋಣ ಕೆರೆಗೆಳೆ ದರೆ ಎತ್ತು ಎರೆಗೆಳೆಯಿತು'' ಎಂದೆನ್ನುವ ಗಾದೆಯಂತೆ ಕೃತ್ರಿಮುಒ ಕ್ಕಲಿಕಗ ಶಿವನ ಊಳು ಹಾಳಾಗಿಹೋಯಿತಂತೆ. ಇವನ್ನು ನೆನಿಸಿ ಶಿವನ ದುಃಖ ಪ್ರಸಂಗ ಹಾಗೂ ಅವನ ಲಜ್ಜೆಯಿಲ್ಲದೆ ಬೇಡಿದ ಭಿಕ್ಷಾವೃತ್ತಿಯನ್ನು, ಅವನ ಹುಚ್ಚುತನ ಒಕ್ಕಲುತನವನ್ನು ಮನಗಂಡು ಕವಿ– ಶೋಕರಸ, ಲಜ್ಜೆ, ಹಾಸ್ಯರಸಗಳ ಬೆರಿಕೆಮಾಡಿ ಶಿವನ ಸ್ತೋತ್ರಮಾಡಿದ್ದಾನೆ. ಕವಿಗ ಳಾದ ಪುಟ್ಟರಾಜರ ಸ್ತೋತ್ರದ ಗತಿ ವಿಚಿತ್ರವಾಗಿದೆ ನೋಡಿ.

ಏನಿಹುದು ನಿನ್ನೊಳಗಧಿಕತೆಯು
ಮಾನಗೆಟ್ಟಾಳಿದೆ ಮೋಹಿನಿಯ
ನೀನುಡುತೆಗಜಾಜಿನವ ಧರಿಸಿದೆ ರುಂಡಮಾಲೆಗಳ ॥
ಹೀನನಂತೆ ಸ್ಮಶಾನದೊಳಿರ್ದೆ
ಲೀನನಾದೆ ಪಿಶಾಚ ಸಂಗದೆ
ಮಾನತೆಯನದು ಹೇಗೆ ತಾಳಿದೆ ಹೇಳಭವ ಎನಗೆ ॥

ಎಲ್ಲರಿಗೂ ಬೇಡಾದ ಅನಾಗರಿಕ ಬೇಡನಂತೆ ಆನೆಯ ಚರ್ಮವ ಹೊದ್ದು ಕೊಂಡಿರುವಿ. ಕಟುಕನಂತೆ ಅನಂತರ ರುಂಡಗಳನ್ನೂ ಚಂಡಾಡಿ ಮಾಲೆ ಮಾಡಿ ಹಾಕಿಕೊಂಡಿ. ಹೀನನಂತೆ ಸುಡಗಾಡ ಸೇರಿ ದೆವ್ವ ಪಿಶಾಚಿಗಳ ಒಡೆಯ ಹಿರಿಪಿಶಾಚಿಯಾಗಿ ಅಲೆದಾಡಿರುವಿ. ಮಾನಮರ್ಯಾದೆಗಳು ನಿನ್ನಲ್ಲಿಲ್ಲವೆಂದ ಮೇಲೆ ನಿನ್ನಲ್ಲಿ ಏನು ಘನತೆ ಇದೆ? ಎಂದು ಸಿಟ್ಟಾಗಿ ಬೈದು. ರೌದ್ರರಸ ಜಿಗುಪ್ಸೆಗಳನ್ನು ಬೆರಿಸಿ ಸ್ತೋತ್ರ ಮಾಡಿದ್ದಾರೆ.

ಶಿವನೆ ಮಾಯಾತೀತನೆಂದುರು
ಕವಿಗಳೆಲ್ಲರ್ ನುತಿಪರು ನಿನ್ನ
ಭವನೆ ಗಿರಿಜೆಯು ತೊಡೆಯೊಳಿರೆ ಗಂಗೆಯು ಶಿರದೊಳಿರಲು ॥
ತವೆ ಮೋಹಿನಿಗೆ ತನುವನಿತ್ತಿರಿ
ಭುವನದೊಳಗೀ ಕಥೆಗಳೆಸೆದಿರೆ
ಜವದೆ ಮಾಯಾತೀತನೆಂತಹೆ ತಿಳಿಸು ನೀನಭವ ॥

ಶಿವನೆ ! ನಿನಗೆ ಮಾಯಾತೀತನೆಂಬುವರು ಈ ಜಗವ ಕವಿಗಳೆಲ್ಲರು. ಜಡಿಯಲ್ಲಿ ಗಂಗೆಯನ್ನು, ತೊಡಿಯಲ್ಲಿ ಗೌರಿಯನ್ನು ಹೊತ್ತಿರುವಿ. ಇಷ್ಟಾದರೂ ವಿಷಯಲಂಪಟನಾಗಿ ಮತ್ತೆ ಮೋಹಿನಿಯ ಮೋಹಿಸಿದೆ. ಅಂದಾಗ ನೀನ್ಹೇಗೆ ಮಾಯಾತೀತನಾಗುವಿ ? ಎಂದು ಕಾವುರಸಗಳ ಬೆರಿಸಿ ಸ್ತೋತ್ರ ಮಾಡಿದ್ದಾರೆ.

* ಒಂದೇ ಪಾತ್ರವ ಧರಿಸುವ ನಟನಿ
ಗಂದ ಮೆನಿಸಲ್ ತನ್ನಾಮಕನು
ಕುಂದದೀ ಪಸೋಗೌರವ ಧನವನೆಂತದೆನಗಂತು ॥
ಸಂದಿದಧಿಪತಿ ಶಿವನೆ ನೀನಿಹೆ
ಯಂದಿನಿಂದಲೊ ನಟನಾಗಿರುವೆ
ನಿಂದುಕೊಡು ಮೋಕ್ಷವನೆನಗದುವೆ ಪಾರಿತೋಷಕವು ॥

ನವರಸ ಭರಿತವಾದ ಒಂದೇ ಪಾತ್ರ ಕಟ್ಟುತ್ತ ತ್ರಿಭುವನಕೆ ತೋರುತ್ತ ಅವರಲ್ಲಿಯೇ ಕ್ಷಣಿಕತನ ತೋರುವ ಶಿವನೆ ! ನೀನು ಪಾತ್ರವನ್ನು ಕಲಾಪೂರ್ಣವಾಗಿ, ಪಾತ್ರವೆ ನೀನಾಗಿ ಪ್ರದರ್ಶಿಸದ ಕಲಾಶೂನ್ಯ ನೀನು ಆದರೆ ನಾನು ನಿನ್ನಂತ ಕ್ಷಣಿಕ(ಒಂದೇ)ಪಾತ್ರವನಭಿನಯಿಸದೆ ಆದಿಯಿಂದ ಇಲ್ಲಿಯ ವರೆಗೂ ಅನಂತ ಪಾತ್ರಗಳನ್ನು ಚಾರಿತ್ರ್ಯಕವಾಗಿ ಅಭಿನಯಿಸುತ್ತಿರುವ ಕಲಾಕಿನ್ನರ ಈ ನಟಸಾರ್ವಭೌಮನು ನಾನು. ಎಂದು ಮತ್ಸರ ಭಾವ ಬೆರಿಸಿ ಸ್ತೋತ್ರ ಮಾಡಿದ್ದಾರೆ ಪುಟ್ಟರಾಜರು,

ಮೆರೆವಂ ಜನಾದ್ರಿಯೆ ಮಸಿಯಾಗೆ
ಉರುಸಮುದ್ರವೆ ಬಟ್ಟಲಾಗಿರೆ
ಸುರವೃಕ್ಷ ಶಾಖೆಯೇ ಲೇಖನಿಯುವಾಗೆ ಶಾರವೆಯು ॥
ಧರೆಯು ಕಾಗದ ಮಾಗಿರಲ್ ಸಲೆ
ಬರೆಯುತಿಹಳೈ ನಿನ್ನ ಗುಣಗಳ
ಹರನೆ ನಾನೇಂ ಬಲ್ಲೆನೈ ವರ್ಣಿಸುವ ಬಲವೀಯ್ಯೆ ॥

ಅಂಜನಾದ್ರಿಯೇ ಮಸಿಯನ್ನಾಗಿ ಮಾಡಿ; ಸಮುದ್ರವನ್ನೇ ಮಸಿ ಬಟ್ಟಲನ್ನಾಗಿ ಮಾಡಿ , ಕಲ್ಪತರುವಿನ ಟೊಂಗೆಗಳನ್ನು ಲೆಕ್ಕಣಿಕೆಯನ್ನಾಗಿ ಮಾಡಿ

---

* ಸೃಷ್ಟಿಯುತ್ಪತ್ತಿಯಾದಾಗಿನಿಂದಲೂ ಅನಂತ ಜೀವದಲ್ಲಿ ಬಂದಿದ್ದೇನೆ ಆ ಆ ಜೀವಳೇ ಕಾಲಾಮಯ ಪಾತ್ರಗಳು ಆ ಆ ಪಾತ್ರಗಳನ್ನು ದಕ್ಷತೆಯಿಂದ ಅಭಿನಯಿಸಿಲ್ಲವೆ ನಾನು ? ಎಂದು ಪ್ರಶ್ನೆಮಾಡುವ ಕವಿಶಕ್ತಿ ಎಷ್ಟು ವಿಶಾಲವಾಗಿದೆಯಲ್ಲ ?

ಭೂಮಿಯನ್ನೇ ಕಾಗದ ಮಾಡಿ ಶಾರದಾ ಮಾತೆಯು ನಿನ್ನ ಗುಣವರ್ಣ ನೆಯ ಕಾವ್ಯ ಬರೆಯಹತ್ತಿದ್ದಾಳೆ. ಇನ್ನೂ ಬರೆಯುವದು ಮುಗಿದಿಲ್ಲ. ಅಂದಾಗ ನಾನೆಂತು ಬಣ್ಣಿಸಲಿ ಶಿವನೆ? ಎಂದು ಶ್ರಿಂಗಾರ ಪ್ರಿಯರಾಗಿ ವರ್ಣನಾ ಪ್ರಿಯರಾಗಿ ಸ್ತೋತ್ರ ಮಾಡಿದ್ದಾರೆ.

ಪುಟ್ಟರಾಜರ ಈ ಸ್ತೋತ್ರಲಹರಿ ನವರಸಭರಿತವಾಗಿ; ನುರಿತ ಶಬ್ದ ಗಳ ಸರತಿಯಿಂದ ಆರತಿಯಂತೆ ಶಿವನಿಗೆ ಬೆಳಗುತ್ತಿದೆ.

ಇದಕ್ಕೂ ವಿಚಿತ್ರವಾಗಿ ಹಲವೆಡೆಗಳಲ್ಲಿ ಸ್ತೋತ್ರ ಮಾಡಿದ್ದಾರೆ. ಈ ಸ್ತೋತ್ರದಗತಿ ಓದುಗರಿಗೆ ವೈಚಿತ್ರವನ್ನುಂಟು ಮಾಡುತ್ತದೆ; ಒಡಪಿನ ಪ್ರಶ್ನೆ ಹಾಕುವಂತಿದೆ.

* ಅರಿಯೆ ಗಾಂಗೇಯನ ಮಲಣ್ಣನ
ಪರಸುತನ ತಮ್ಮನ ಮಡದಿಯೋಳ್
ನೆರೆ ಜನಿಸಿದಣುಗರ ಸೋದರನ ಮಧ್ಯಮನತಪವ ॥
ಪರಕಿಸಲು ಸ್ವಾಪ್ಸರೆಯ ಕಳುಹಿದ
ಸುರೆಯನುಜಗೀ ವಿಶ್ವರಕ್ಷಣಿ
ವರವನಿತ್ತಾ ಶಿವನಡಿಗೆ ಪದಪಿಂದೆ ವಂದಿಪೆನು ॥

ಇದೆಂಥ ಪದ್ಯ ಪಂಕ್ತಿ. ಇದೆಂಥ ಬುದ್ಧಿ ಪಂಕ್ತಿ? ಇದೊಂದು ಚುರುಕು. ತನದ ಒಡಬು; ಸುರುಕುತನದ ಒಡಬು; ಸುಕುಕುತನದ ಕಾವ್ಯ ಕಡಬು.

ಭೀಷ್ಮನ ಮಲಣ್ಣನಾದ ವ್ಯಾಸ. ವ್ಯಾಸನ ಮಗನಾದ ಧೃತರಾಷ್ಟ್ರ ಇವನ ತಮ್ಮ ಪಾಂಡುರಾಜನ ಮಡದಿಯಲ್ಲಿ ಹುಟ್ಟಿದ ಧರ್ಮ, ಅರ್ಜುನ, ಭೀಮಾ ದಿಸುತರು ನಡುವಿನವನಾದ ಅರ್ಜುನನ ತಪಸ್ಸನ್ನು ಪರೀಕ್ಷಿಸಲು ಅಪ್ಸರೆ ಯನ್ನು ಕಳುಹಿದಂಥ ದೇವೇಂದ್ರನ ಅಂಣಾದ ವಿಷ್ಣುವಿಗೆ ಶೃಷ್ಟಿರಕ್ಷಣೆಯ ವರ ವಿತ್ತಂಥ ಶಿವನ ಅಡಿಗೆ ನಮಸ್ಕರಿಸುವೆನು.

---

* ಗಾಂಗೇಯಭಿ= ಭೀಷ್ಮ, ಭೀಷ್ಮಣ ಮಲಣ್ಣ= ವ್ಯಾಸ= ವ್ಯಾಸನ ಮಗ= ಧೃತರಾಷ್ಟ್ರ, ಧೃತರಾಷ್ಟ್ರ ತಮ್ಮ= ಪಂಡುರಾಜ, ಪಂಡುರಾಜನ ಮಡದಿ= ಕುಂತಿ, ಜನಿಸಿದ=ಹುಟ್ಟಿದ, ಅಣುಗರ=ಮಕ್ಕಳ, ಸೋದರ ಮಧ್ಯಮನು= ಅರ್ಜುನ ತಪವ ಪರಕಿಸಲು= ತಪವನ್ನು ಪರೀಕ್ಷಿಸಲು, ಸಾಪ್ಸರೆಯ=ಅಪ್ಸರೆಯು, ಕಳುಹಿದಪ=ಇಂದ್ರು ಇಂದ್ರನ ತಮ್ಮ= ವಿಷ್ಣು

ಈ ಪದಪಿನ ಸ್ತೋತ್ರದಲ್ಲಿ ಅದೆಷ್ಟು ರಹಸ್ಯ ಚಿತ್ರಗಳು ಅಡಕವಾಗಿವೆ ನೋಡಿ.

ಪುಟ್ಟರಾಜರ ಸ್ತೋತ್ರಪ್ರಗತಿ, ಔಚಿತ್ರ್ಯ ಗತಿ, ವೈಚಿತ್ರ್ಯಮತಿ ಕಂಡು ಆಶ್ಚರಿಪಡದವರಾರು ?

ಸ್ತೋತ್ರ ಮಾಡುವಲ್ಲಿ ಪಳಗಿದವರು ಪುಟ್ಟರಾಜರು. ಅಂತೆಯೇ ನಾನು ಪ್ರಪ್ರಥಮವಾಗಿ ಹೃದಯದಿಂದ ಪುಟ್ಟರಾಜಕವಿಗಳಿಗೆ— "ಸ್ತೋತ್ರ ಕವಿ" ಎಂದು ಭಕ್ತಿ ಪುರಸ್ಸರವಾಗಿ ಹೆಸರಿಟ್ಟದ್ದೇನೆ.

ನವರಸದ ನೇತ್ರ, ವಿವಿಧ ಭಂಗಿಗಳ ವಿಚಿತ್ರ, ಬೇಜಾರಕಳೆಯುವ ಕುತೂಹಲ ಸತ್ರ, ಬುದ್ಧಿ ಬೆಳೆಸುವ ಕಾವ್ಯದ ಕ್ಷೇತ್ರ ಈ ಸ್ತೋತ್ರಕವಿ ಪುಟ್ಟರಾಜರ ಸ್ತೋತ್ರ.

ನವನಿಧಿಬಾರ ಪುಣ್ಯನಿಧಿಬಾರ ಮಹಾನಿಧಿಬಾರ ಭಕ್ತರು
ತ್ಸವನಿಧಿಬಾರ ಭಾಗ್ಯನಿಧಿಬಾರ ಕೃಪಾನಿಧಿಬಾರ ಕಾಂತಿಯು
ದ್ಭವನಿಧಿಬಾರ ನಿತ್ಯನಿಧಿಬಾರ ಕೃಪಾನಿಧಿಬಾರ ಸತ್ಯಸಂ
ಭವನಿಧಿಬಾರ ತತ್ವನಿಧಿ ಬಾರೆಲೆ ಬಾರೆಲೆ ಹಂಪೆಯೊಳ್ವನಂ

ಈ ರೀತಿ ಶಂಭುವಿನನುತಿಸಿದ ಹರಿಹರನ ಯತಿಪ್ರಾಸಗಳ ತತಿಯಾಗ ರದ ಪ್ರಾಸಗಳನ್ನು ನಮ್ಮೀ ಪುಟ್ಟರಾಜರ ಸ್ತೋತ್ರಗಳಲ್ಲಿ ಕಾಣಬಹುದು.

ಜಯ ಮಹನೀಯ ಜಯ ಮಹೋದಯ
ಜಯ ಮಹಾಶಯ ಜಯ ಮನನೀಯ
ಜಯ ಮಹಾದಯ ಜಯ ಮಹಾಧ್ಯೇಯಾಪ್ರಮೇಯಮಯ ॥
ಜಯ ನಿರಾಮಯ ಜಯ ನಿರಾಶ್ರಯ
ಜಯ ನಿರಾಲಯ ಜಯ ನಿರಾನ್ವಯ
ಜಯವೆಂದು ಪಾಡುವರು ಹಾವೇರಿಯ ಮಠದ ಜನರು.

ಸಂಗರಹಿತನೆ ಸಂಗಸಹಿತನೆ
ಲಿಂಗರಹಿತನೆ ಲಿಂಗಸಹಿತನೆ
ಭಂಗರಹಿತನೆ ಭಂಗಸಹಿತನೆ ಶಿವಶಿವಾನ್ವಿತನೆ ॥
ಅಂಗರಹಿತನೆ ಅಂಗಸಹಿತನೆ
ರಂಗರಹಿತನೆ ರಂಗಸಹಿತನೆ
ಥಂಗರಹಿತನೆ ಥಂಗಸಹಿತನೆ ಪೊಳೆಯುರಿದೆಮ್ಮನು ॥

ನಿತ್ಯನುತ್ಯಸುಕೃತ್ಯ ಜೀವಿತ
ನತ್ಯಗತ್ಯಸುಭೃತ್ಯ ಸಂಯುತ
ನತ್ಯ ಮರ್ತ್ಯವಿಭೂತ್ಯತರ್ಕ್ಯಂ ಸುಗಣಮಣಿಭೂಷಂ॥
ಸ್ತುತ್ಯ ತೃಪ್ತ್ಯಭಿರತ್ಯ ತೀತಂ
ಸತ್ಯ ಮೂರ್ತ್ಯ ವಿಕೃತ್ಯ ಚಿತ್ತಂ
ಕೀರ್ತ್ಯ ರುತ್ಯವಿರಕ್ತ್ಯಭಿರತಂ ಶಿವಬಸವ ಯತಿಯು ॥

ಅನಘ ಲೀಲಂ ಭಕ್ತಪಾಲಂ
ವಿನುತ ಶೀಲಂ ಗುಣವಿಶಾಲಂ
ಘನ ಕರುಣಾಲವಾಲಸು ಮೃದುಹೃದಯನಮಲಂ ॥
ವಿನುತಿ ಲೋಲಂ ಭೂತಿ ಫಾಲಂ
ಮುನಿಪ ಮೂಲಂ ಸದನುಕೂಲಂ
ಧನ ತೃಣಾಲಂ ಕಾಲಕಾಲ ಸಮಾನ ಚರಿತಬಲಂ ॥

ಗೋತ್ರಯುವ ಸೂಡಿದನೆ ಶರ್ವನೆ
ಗೋತ್ರ ಸೂತ್ರಾಧಿಪನೆ ಸಾಂಬನೆ
ಗೋತ್ರ ಬಿದ್ವರದನೆ ಪರಾತ್ಮನೆ ಮುಕುಟ ಚಂದ್ರಮನೆ ॥
ಗೋತ್ರ ರೂಪರಹಿತನೆ ದೇವನೆ
ಗೋತ್ರಧರ ಪೂಜ್ಯನೆ ಮಹಾಜನೆ
ಗೋತ್ರ ಶಯನೆ ಜೀತಾಶಯನೆ ನೀಡೆಮಗೆಶಾಂತಿಯನೆ

ಜಯ ಚಾನ್ದಮೀಧರ ಮಹೇಶ್ವರ
ಜಯ ಜಗದ್ಧಿತ ಕರಚಂದ್ರಧರ
ಜಯ ಜಿತ ಮಾರಗರಲಧರವರದಾನಿ ಪರಾತ್ಪರಾ
ಜಯ ಜನನ ಮರಣ ಹರಸುಶಂಕರ
ಜಯ ಜರಾಮಯ ದೂರ ಪರತರ
ಜಯ ಜಡತ್ರಿಮಲಾಪಹಾರ ಚರಿತ್ರೆ ಶುಭಗಾತ್ರ ॥

ಭೋ ಮಹಖಂಡಾತ್ಮ ಗುರುವೆ
ಭೋ ಮಹಿತ ವಿಶ್ವಾತ್ಮ ಗುರುವೆ
ಭೋ ಮಹದ್‌ಬ್ರಹ್ಮಾತ್ಮ ಗುರುವೆ ಘನಗುರುವೆ ಗುರುವೆ ॥
ಭೋ ಮುದಿತ ಭಕ್ತಾತ್ಮ ಗುರುವೆ

ಭೋ ಮಹಾಂತ ಪರಾತ್ಮ ಗುರುವೆ ॥
ಭೋ ಮುಮುದಿವ್ಯ ದಾತ್ಮ ಗುರುವೇ ಬಿದರಿಪುರ ಗುರುವೆ ॥

ನಿರಘ ನಿರುಪಮ ನಿರ್ಲೇಪಕಂ
ನಿರಪಾಯ ನಿರ್ದ್ವಂದ್ವ ನಿರಹಂ
ನಿರುಪಾಧಿಕ ನಿರಾಲಂಬ ನಿಷ್ಕಲ ನಿಷ್ಕಲಂಕ ಶಿವಃ
ನಿರುಪಾಯ ನಿರ್ಗುಣ ನಿರೀಹಂ
ನಿರವಯವ ನಿರಂಜನ ನಿಃಸಂಗ
ನಿರುತಾನಂದ ನಿತ್ಯಪೂರ್ಣ ನಿರತಂ ಪೊರೆಯಲಿ ॥

ಈರೀತಿ ಪಾಂಡಿತ್ಯ ಪೂರ್ಣ, ಭಾವಪೂರ್ಣ, ಭಕ್ತಿಪೂರ್ಣಗಳನ್ನು ಬೆರಿಸಿ ಸೋತ್ರಮಾಡಿದ ಪುಟ್ಟರಾಜರ ವೈಶಿಷ್ಟ್ಯತೆ ಭವ ಜೀವಿಗಳಿಗೆ ತುಷ್ಟತೆಯೊದಗಿ ಸುವದು. ಇಂಥ ಹಲವಾರು ಸ್ತೋತ್ರಗಳನ್ನು ಹೆಣೆದಿದ್ದಾರೆ ಈ ಶಿವಬಸವ ಪುರಾಣದಲ್ಲಿ. ಶಿವಬಸವ ಶಿವಯೋಗಿಯ ಹುಟ್ಟು, ನಿಟ್ಟು, ಲೀಲೆ, ಕಾಯಕ, ಶಿವಪೂಜೆ, ಲಿಂಗನಿಷ್ಠೆಗಳನ್ನು ವಿಸ್ತಾರವಾಗಿ ವಿವರಿಸಿದ್ದಾರೆ ಈ ಕಾವ್ಯದಲ್ಲಿ, ಅಲ್ಲದೆ, ಶಿವಯೋಗಮಂದಿರಕ್ಕಾಗಿ ಕುಮಾರ ಶ್ರೀಗಳವರಿಗೆ ಆತ್ಮೀಯರಾಗಿ ಮಡಿದ ಮಾತೃಹೃದಯರ ಜಾಡನ್ನು ಬಿಡಿಸಿದ್ದಾರೆ ಪುಟ್ಟರಾಜರು ಇದರಲ್ಲಿ. ಈಗ ಸಧ್ಯದ ಹಾವೇರಿ ಹುಕ್ಕೇರಿ ಮಠಾಧಿಪತಿಗಳಾದ ಶ್ರೀ ನಿ. ಪ್ರ; ಶಿವಲಿಂಗ ಮಹಾಸ್ವಾಮಿಗಳು, ಸಿಂದಗಿ ಪಟ್ಟಾಧ್ಯಕ್ಷರಾದ ಶ್ರೀ ಮ; ಘ, ಚ. ಶಾಂತವೀರ ಮಹಾಸ್ವಾಮಿಗಳು, ಹಾಗೂ ಶಿವಯೋಗಿಗಳ ಶಿಷ್ಯರೂ ಹಾಗೂ ಸಹದ್ಯೋಗಿ ಗಳು, ಈ ಎಲ್ಲರ ಮಾಹಿತಿಯಿಂದೊಡಗೂಡಿದ ಹಿರಿಕಾವ್ಯ ಈ ಶಿವಬಸವೇಶ್ವರ ಪುರಾಣ.

ಜೋಡುನುಡಿ; ಪಡೆನುಡಿ; ಪ್ರಾಸಗಡಿಗಳು ಪುಟ್ಟರಾಜರ ಹೃದಯ ಗರಡಿ ಯಲ್ಲಿ ಹೆಡೆ ಎತ್ತಿನಿಡಿರಿವೆ.

ಎಲ್ಲರೆತ್ತುವರೆಲ್ಲರಪ್ಪುವ । ರೆಲ್ಲರಾಡಿಪರೆಲ್ಲರೀಕ್ಷಿಪ-
-ರೆಲ್ಲ ರಾಶಿಪರೆಲ್ಲರೋಲೈಸುವರು ಲಿಂಗಿಗಳು ॥
ಎಲ್ಲರೊಲಿಸುವರೆಲ್ಲರುಲಿಸುವ । ರೆಲ್ಲರೊಸೆಯಿಪರೆಲ್ಲರೆಸೆಯಿಪ-
-ರೆಲ್ಲರಿನಿದಿಪರೆಲ್ಲರುರ ಬಿನದಿಪರು ಬಂಧುಗಳು ॥

ಈ ರೀತಿ ಸಾಲ್ವಿಡಿದು ಸಾಗಿದ ಶಬ್ದ ಪ್ರವಾಹವನ್ನು ಹರಿಸಿದ ಕವಿವಾಣಿ – ಕಾವ್ಯವಾಣಿ ! ನವ್ಯವಾಣಿ !! ಭವ್ಯವಾಣಿ !!! ಲಲಿತಕಲೆಗಳ ಸಂಗಮದ

ವೇಣಿ. ಶಿವಸಲೀಲಗಳ ಮಂಗಲದ ವೈಣಿ. ಇಂಥ ವಾಣಿಗೆ "ರಸವಾಣಿ" ಎಂದು ಕರೆದರು ನಮ್ಮ ಹಿರಿಯರು.

ಇಡೀ ಕಾವ್ಯವನ್ನೇ ತಿರುವಿಹಾಕಲಿಕ್ಕೆ ಹೋಗದೆ ಇಲ್ಲಿಗೆ ಈ ಕಾವ್ಯದ ವಿಷಯ ಬಿಟ್ಟುಬಿಡುತ್ತೇನೆ. ಏಕೆಂದರೆ ಈ ಕಾವ್ಯದ ತುಂಬೆಲ್ಲ ವಿದ್ಯುತ್ ವಾರಿಧಿ ಹರಿದಿದೆ. ಹಾಗಾಗ ಅದನ್ನೆಲ್ಲ ಬರಿಯಲು ಇಂಥ ಹಲವು ಪುಟಗಳು ಬೇಕು- ಅದಕ್ಕಾಗಿ "ಪದದ ಅರ್ಥ ಪಲ್ಲವಿಯಲ್ಲಿ" ಎನ್ನುವ ಗಾದೆಯಂತೆ ಈ ಕಾವ್ಯದ ನಾಂದಿ ಹಾಡಿದ್ದೇನೆ. ಪೂರ್ತಿ ಅಲ್ಲ ? ಪಲ್ಲವಿ, ಅಷ್ಟೇ.

ತ್ರಿಭಾಷಾ ಕವಿಗಳಾಗಿರತಕ್ಕಂಥ ಪುಟ್ಟರಾಜರು ಬರೆದ ಗ್ರಂಥಗಳು ಎಲ್ಲವನ್ನೂ ವಿಮರ್ಶಿಸುವದಕ್ಕೆ ಹೋಗದೆ "ಮಜ್ಜಿಗೆ ಪೂರ್ತಿ ರಾಮಾಯಣ" ಅಂದಾಗ್ಗೆ ಸಂಕ್ಷಿಪ್ತವಾಗಿ ತಿಳಿಯೋಣ.

**ಮಹಾಂತೇಶ ನಾಮಾವಳಿ:**—ಇಲಕಲ್ (ಚಿತ್ರರಗಿ ವಿಜಯ) ಮಹಾಂತೇಶ ಶಿವಯೋಗಿಗಳ ಪುರಾಣದ ಸಾರವನ್ನೇ ಸೇಕರಿಸಿ ನಮಾವಳಿ ರೂಪದಲ್ಲಿ ಚಿತ್ರಿಸಿದ್ದಾರೆ; ಈ ಪೊತ್ತಿಗೆ ಚಿಕ್ಕದಾದರೂ ಇದರಲ್ಲಿದ್ದ ಕಾವ್ಯಕಕ್ಷೆ ಚಿಕ್ಕದಿಲ್ಲ. ನೋಡಿ ಹೇಗಿದೆ ?

ಯುಕ್ತಿಯು ಪತಿಯು ಗತಿಯು ಮತಿಯು
ನೀನೆ ವಿಜಯ ಗುರುಮಹಾಂತ ।

ಜ್ಞಾನಿ ದಾನಿ ಮೌನಿಮಾನಿ
ನೀನೆ ವಿಜಯ ಗುರುಮಹಾಂತ ॥

ಈ ಬುಕ್ಕಿನ ನಾಮ ಸಣ್ಣದಿದ್ದರೂ "ವಳಿ" ಬಣ್ಣ ಸಣ್ಣದೆ ? ಇದೇ ರೀತಿ ಸಾಹಿತ್ಯದ ಸೌಗಂಧ ಸೂಸಿದೆ ಈ ವಿಜಯ ಮಹಂತೇಶ್ವರ ನಾಮಾವಳಿ ಯಲ್ಲಿ; ಪುಟ್ಟರಾಜರ ಈ ಚಿಕ್ಕ ಕೃತಿಯಲ್ಲಿ.

**ಸಂಗೀತಶಾಸ್ತ್ರ ಜ್ಞಾನ:**— ಹಿಂದುಸ್ಥಾನಿ ಸಂಗೀತಶಾಸ್ತ್ರ ಮಾಹಿತಿ ಹಿಂದಿ, ಸಂಸ್ಕೃತ, ಇಂಗ್ಲೀಷ, ಮರಾಠಿ ಭಾಷೆಗಳಲ್ಲಿ ಮುದ್ರಿತವಾದ ಬುಕ್ಕಗಳು ರಾಕಷ್ಟಿವೆ. ಇದ್ದರೇನು ಪ್ರಯೋಜನ ? ಈ ಎಲ್ಲ ಭಾಷೆ ಬಾರದೆ ಇದ್ದ ಕನ್ನಡಿಗರಿಗೂ ಸಂಗಿತಶಾಸ್ತ್ರ ಮಾಹಿತಿ ಯಾಗಬೇಕೆಂಬ ಸದುದ್ದೇಶದಿಂದ — ಕನ್ನಡದಲ್ಲಿ ಅಪಾರವಾದ ಸಂಗೀತಶಾಸ್ತ್ರ, ರಾಗ, ತಾಳ, ಸ್ವರಗಳಾದಿ ಎಲ್ಲ ವಿಷಯಗಳ ಸರ್ವ ಪರಿಚಯ ಮಾಡಿದ್ದಾರೆ ಪುಟ್ಟರಾಜರು.

*ಗಾನಸುಧಾ:– ಹಿಂದೀ ಭಾಷೆಯಲ್ಲಿ ಅನಂತ ಗೀತೆ (ಪೀಜ್) ಗಳನ್ನು ರಚಿಸಿ ಹಾಡಿದ್ದಾರೆ ಪುಟ್ಟರಾಜರು. ಅವುಗಳಸಂಗ್ರಹವೇ ಈ ಗಾನಸುಧಾ – ನಾಟ್ಯ ಕೃತಿಗಳಂತೂ ರಂಗಭೂಮಿಯಲ್ಲಿ ನೋಡಿದ್ದೀರಿ; ನೋಡತಾಇದ್ದೀರಿ. ಅವುಗಳ ವಿಮರ್ಶನ ನಿಮ್ಮ ಪಾಲಿಗೆ.

# ಪುಟ್ಟರಾಜರ ವಿರತಿದೃಷ್ಟಿ, ಶ್ರೇಷ್ಠತೇಜದ ಪ್ರಗತಿ ವೃಷ್ಟಿ

ಪುಟ್ಟರಾಜರ ಪಾಂಡಿತ್ಯದ ಪ್ರಭಾವ ಪ್ರಭಾಕರನಂತೆ ಪ್ರಕಾಸಿಶಿತು. ಶಾರದೆಯ ಸುತರಾದ ಇವರಿಗೆ ಬಾರದ ಭಾಷೆಯಿಲ್ಲ, ತಿರುಗಾಡದ ನಾಡಿಲ್ಲ, ನುಡಿಸದ ವಾದ್ಯವಿಲ್ಲ, ನೋಡದ ವಿದ್ಯೆಯಿಲ್ಲ, ಎಂದರೆ ಅತಿಯೋಕ್ತಿಯಾಗಲಾರದು. ಉಭಯ ಸಂಗೀತ ಪಾರಂಗತ, ಸರ್ವಭಯ ಸಾಹಿತ್ಯ ಪರಿಣಿತರಾಗಿ, "ಪುಟ್ಟರಾಜರು" ನಾಡಿನ ಅಕ್ಷಿಯಾಗಿ, ದೇಶದ ಪಕ್ಷಿಯಾಗಿ, ಸಮಾಜದ ಕುಕ್ಷಿಯಾಗಿ, ಬೆಳಗಿದ್ದಾರೆ. ಸೇಗೀತ, ಕೀರ್ತನ, ಪುರಾಣ ಪ್ರವಚನಾದಿಗಳನ್ನು ದೇಶದ ತುಂಬೆಲ್ಲ, ಸಂಚರಿಸಿ, ಕಾರ್ಯಕ್ರಮ ನಡೆಸಿಬಂದ ಆದಾಯದಿಂದ ತಮ್ಮ ಸಂಸ್ಥೆ ಸಂಗೀತ ಸಾಹಿತ್ಯ ಮಹಾವಿದ್ಯಾಲಯವನ್ನು ನಡೆಸುತ್ತಿದ್ದಾರೆ. ಜಾತಿ ವಿಜಾತಿಗಳ ಜಾರತನದ ಭಾವತಾರದೆ ಸರ್ವರಿಗೂ ಸಮಾನದೃಷ್ಟಿಯಿಂದ ಪ್ರೀ

---

*ಇವರ ಶಿಷ್ಯಪ್ರಶಿಷ್ಯರು ಹಾಗೂ ಹಲವಾರು ಗಾಯಕರಿಂದ ಹಾಡಲ್ ಪಡುತ್ತವೆ. ಇವರು ಬರೆದ ಚೀಜುಗಳ ಅಂಕಿತ "ಕಿಶೋರ ಹಾಗೂ "ಪಂಚಾಕ್ಷರ" ಎಂಬುದು ಚೀಜಿನ ಕೊನೆಯಲ್ಲಿ ಬರುತ್ತದೆ. ಈ ಎಲ್ಲ ಚೀಜುಗಳು ಆಕಾಶವಾಣಿಗಳಿಂದ ಹಾಗೂ ಸಂಗೀತ ಕಚೇರಿಗಳಿಂದ ನೀವು ಕೇಳಬಹುದು.

ಇವರು ಬರೆದ ನಾಟಕ ಕೃತಿಗಳು ಇವರ ಸಂಚಾಲತ್ವದಲ್ಲಿ ನಡೆದಿರುವ "ಪಂಚಾಕ್ಷರ ಗವಾಯಿಗಳ ನಾಟಕ ಕಂಪನಿ ಗದಗ" ಇದು ಕರ್ನಾಟಕದ ಪ್ರಶಿದ್ಧ ಪಟ್ಟಣಗಳಲ್ಲಿ ಪ್ರಯೋಗಿಸಿ ವಿಜಯ ಡುಂಧುಭಿ ಮೊಳಗಿಸಿದೆ, ಮೊಳಗಿಸುತ್ತಿವೆ. ಈ ಕಂಪನಿ ಗದುಗಿನಲ್ಲಿ ೧೯೬೦ ರಲ್ಲಿ "ಮಲ್ಲಮ್ಮ" ನಾಟಕವನ್ನು ಸತತವಾಗಿ ೩೭೬ ಪ್ರಯೋಗಗಳನ್ನು ಆಡಿದ್ದೇ ಇದಕ್ಕೆ ಸಾಕ್ಷಿ.

ಯರಾಗಿ. ಅನ್ನ, ಬಟ್ಟೆ,ಪಸತಿಗಳನ್ನು ಕೊಟ್ಟು; ವಿದ್ಯೆಗಲಿಸುತ್ತಾರೆ. ಇಲ್ಲಿಯವರೆಗೂ ಪುಟ್ಟರಾಜರ ಶಿಷ್ಯ ಬಳಗವು ವಿದ್ಯೆಗಲಿತು ಹೋದವರ ಸಂಖ್ಯೆ ೫೦೦೦ಕ್ಕೂ ಮಿಕ್ಕಿದೆ. ಇನ್ನೂ ಮಿಕ್ಕುತ್ತಿದೆ. ಇವರ ಹೆಸರಿನಿಂದ ಇವರ ಉದಾರ ಹೃದಯದಿಂದ ಇವರು ಕಲಿಸಿದ ವಿದ್ಯೆಯಿಂದ, ಅನಂತ ಅನಾಥ ಅಂಧರ ಜೀವನಗಳು ಬದುಕಿವೆ, ಬಾಳುತ್ತಿವೆ. ಇಂಥ ಆದರ್ಶ ಸಂಸ್ಥೆ ಜಗತ್ತಿನಲ್ಲಿ ಮತ್ತೊಂದಿಲ್ಲವೆಂದು ನಾವು ನಿರ್ಧಾರವಾಗಿ ಹೇಳುತ್ತೇವೆ. ಸಂಗೀತಗಾರರು ಕೀರ್ತನಕಾರರು, ಕವಿವರ್ಯರು, ನಾಟ್ಯಕವಿಗಳು, ನಾಟ್ಯಕಲಾವಿದರು, ಶಾಲಾಶಿಕ್ಷಕರು, ವೈದ್ಯರು, ಪಂಡಿತರು, ಶಾಸ್ತ್ರಿಗಳು ಮುಂತಾದ ನಾನಾ ರಂಗದ ಕಲಾಕಾರರು ಈ ಮಹಾ ಸಂಸ್ಥೆಯಿಂದ ತಯಾರಾಗಿದ್ದಾರೆ. ಇದಲ್ಲದೆ ಸಂಗೀತ ಶಾಲೆಗಳು, ಸಾಹಿತ್ಯ ಕೇಂದ್ರಗಳು ನಾಟ್ಯ ಸಂಘಗಳ ಈ ಸಂಸ್ಥೆಯಿಂದ ತಯಾರಾದವರಿಂದ ಮೈದಾಳಿ ನಾಡಿನಲ್ಲಿ ಮರೆಯುತ್ತಿವೆ. ಶ್ರೀ ವೇ.ಪಂಡಿತ* ಗಂಗಾಧರಶಾಸ್ತ್ರಿಗಳು ಚಿತ್ತರಗಿ, ಶ್ರೀ ವೇ. ಪಂ.ವೀರೇಶ ಶಾಸ್ತ್ರಿಗಳು ಸುಕೋಡ.

*ಶ್ರೀಚನ್ನವೀರ ಶಾಸ್ತ್ರಿಗಳು ಗದಗ†ಶ್ರೀ ಅನ್ನದಾನಯ್ಯನವರು ಮಲ್ಲಾಪೂರ, ನಾಗಯ್ಯಜ್ಜನವರು ಲೋಕೀಕೇರಿ, ಶ್ರೀ ಶಿವಯೋಗಿ ಶಾಸ್ತ್ರಿಗಳು ದೇವಗಿರಿ, ಶ್ರೀಸಬವಲಿಂಗಶಾಸ್ತ್ರಿಗಳು ಹುಲಗೂರ,ಶ್ರೀ ಮಹದೇವ ಶಾಸ್ತ್ರಿಗಳು ಕೃಷ್ಣಾಪೂರ ಶ್ರೀ ಚನ್ನಬಸವಾರ್ಯ ಶಾಸ್ತ್ರಿಗಳು ಧೋತರಗಾಂವ್;ಶ್ರೀ ವಿರುಪಾಕ್ಷ ಶಾಸ್ತ್ರಿಗಳು ಇಂಗಳಗಿ,ಶ್ರೀ ರೇವಣಶಿದ್ಧ ಶಾಸ್ತ್ರಿಗಳು ಶಿರಿಗಿರೆ,ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಡಾವಣಗೆರೆ, ಶ್ರೀ ವೀರಭದ್ರ ಶಾಸಿಗಳು, ಕುರಬಗೊಂಡ, ಶ್ರೀ ಗುರುಲಿಂಗ ಶಾಸ್ತ್ರಿಗಳು ಬೀಳಗಿ ಶ್ರೀ ಬಾಲಚಂದ್ರ ಶಾಸ್ತ್ರಿಗಳು ಚಿಕ್ಕಮಂಣೂರ, ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಇಜಾರಿ ಲಖಮಾಪೂರ, ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಹಿರೇಮಠ, ಹಿರೇಮಲ್ಲೂರ, ಶ್ರೀ ಅನ್ನದಾನ ಶಾಸ್ತ್ರಿಗಳು ಮತ್ತಿಗಟ್ಟಿ, ಬ್ರಹ್ಮಾನಂದ ಶಾಸ್ತ್ರಿಗಳು ಶಿರಿಮಾಪೂರ ಶ್ರೀ ಬಸವಂಣೆಯ್ಯ ಶಾಸ್ತ್ರಿಗಳು ಬಸವನಕಟ್ಟಿ ಮುಂತಾದ ಶಾಸ್ತ್ರಿಗಳು; ಶ್ರೀ ಬಸವರಾಜ ರಾಜಗುರು, ಶ್ರೀ ಗುರುಬಸವಾರ್ಯ ಬ್ಯಾಡಗಿ, ಶ್ರೀ ದೊಡ್ಡ ಬಸವಾರ್ಯ ಜಾಲಿಬೆಂಚಿ, ಶ್ರೀ ಅರ್ಜುನಸಾ ನಾಕೋಡ, ಶ್ರೀ ಸಿದ್ಧರಾಮ ಜಂಬಲದಿನ್ನಿ, ಶ್ರೀ ಸಿದ್ಧರಾಮಸ್ವಾಮಿ ಕೋರವಾರ, ಶ್ರೀ ಗುರುಸ್ವಾಮಿ ಕಲಕೇರಿ, ಶ್ರೀ ಚಂದ್ರಶೇಖರ

* ಗಂಗಾಧರ ಶಾಸ್ತ್ರಿಗಳು ಈಸಂಸ್ಥೆಯಿಂದ ತಯಾರಾದ ಪಂಡಿತರತ್ನರು. ಇವರು—

ಸ್ವಾಮಿ ಘೂಲಚಿಂತಿ, ಶ್ರೀ ದೊಡ್ಡಬಸವಾರ್‍ಯ ಮಲ್ಲಾಪೂರೂ ಶ್ರೀ ಪ್ರಭುದೇವ ಸಾಲಿಮಠ, ಶ್ರೀ ಮೃತ್ಯುಂಜಯಸ್ವಾಮಿ ಪುರಾಣಿಕಮಠ, ಶ್ರೀ ಕೊಟ್ರಯ್ಯ ಚಿಗಟೇರಿ, ಶ್ರೀ ಸದಾಶಿವಯ್ಯ ಮರೋಳ, ಶ್ರೀ ಶಿವಲಿಂಗಯ್ಯಸ್ವಾಮಿ ಕಬ-ನೂರ, ಶ್ರೀ ಮೃಡದೇವ ಹೊಸಳ್ಳಿ, ಚಂದ್ರಶೇಖರಸ್ವಾಮಿ ಪುರಾಣಿಕಮಠ, ಶ್ರೀ ಗದಿಗೆಯ್ಯಸ್ವಾಮಿ ಅರಿಳೇಶ್ವರ, ಶ್ರೀ ಸೋಮಶೇಖರ ಹಾಗರಗಿ, ಶ್ರೀ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ, ಶ್ರೀ ಗದಿಗೆಪ್ಪನವರು ಕಮತಗಿ, ಶ್ರೀ ಪಂಪಾ-ಪತಿಸ್ವಾಮಿ ಗೋವಿಂದವಾಡ, ಶ್ರೀ ಸೋಮನಾಥ ಮರಡೂರ, ಶ್ರೀಚನ್ನವೀರ, ಬನ್ನೂರ ಶ್ರೀಬಸವರಾಜ ಅಮರಗೊಳ, ಶ್ರೀ ಶಿವಯ್ಯಸ್ವಾಮಿ ಮಂಡಲಗೇರಿ, ಶ್ರೀ ರುದ್ರಸ್ವಾಮಿ ಸಾಲಿಮಠ, ಶ್ರೀ ಮಹಾಲಿಂಗರಾಜ ಹಿರೆಗುಂಜಳ, ಶ್ರೀ ಚಂದ್ರಶೇಖರ ಕಬನೂರ ಶ್ರೀ ನಾಭಿರಜ ದೇವಗಿರಿ, ಶ್ರೀ ಹನಮಂತಸಿಂಗ ಹಾನಗಲ್ಲ, ಶ್ರೀ ಸಿದ್ಧವೀರಯ್ಯ ಜೇಗರಕಲ್, ಶ್ರೀ ಶಿವಲಿಂಗಪ್ಪ ಕಮತಗಿ, ಶ್ರೀ ಫಾಲಾಕ್ಷಯ್ಯ ಅಬ್ಬಿಗೇರಿ, ಶ್ರೀ ಷಡಕ್ಷರಿ ಬೂದಿಹಾಳ, ಶ್ರೀ ಶೇಷಾದ್ರಿ ಗಬ್ಬೂರ, ಶ್ರೀ ಈಶ್ವರ ಬ್ಯಾಹಟ್ಟಿ, ಶ್ರೀ ಜಯದೇವಯ್ಯ ಸ್ವಾಮಿ ಶಿರಾಳ ಕೊಪ್ಪ ಮುಂತಾದ ನಾಯಕರು. — ಶ್ರೀ ಚನ್ನ ಬಸವಾರ್‍ಯ ಜೇಕಿನಕಟ್ಟಿ

---

ಶಾಸ್ತ್ರಿಗಳಾಗಿದ್ದಂತೆ ನಾಟ್ಯ ಕಲಾವಿದರೂ ಕವಿಗಳು ಆಗಿದ್ದಾರೆ. ತಮ್ಮದೆ ಆದ ಶ್ರೀ ಕುಮಾರ ವಿಜಯ ನಾಟ್ಯ ಸಂಘ ಚಿತ್ತರಗಿ ಈ ಹೆಸರಿನ ನಾಟ್ಯ ಸಂಸ್ಥೆಯನು ಸ್ಥಾಪಿಸಿ ನಾಡಿನಲ್ಲಿ ಕಲೆಯ ಹೊಳೆಯನ್ನೇ ಹರಿಸಿ ವೀರ ವಿಕ್ರಮವನ್ನು ಸ್ಥಾಪಿಸಿದ್ದಾರೆ. ಇದೊಂದು ಅತ್ಯಂತ ಅಭಿಮಾನದ ವಿಷಯ, ಇದು ಶ್ರೀ ಗುರು ಕಷಾಯ

* ಚನ್ನವೀರ ಶಾಸ್ತ್ರಿಗಳು ಗುರವರ್‍ಯರ ಪರಮ ಶಿಷ್ಯರಾಗಿ ಅವರಪ್ಪಣೆಯಂತೆ ನಡೆಯುವ ಸ್ವಾಮಿನಿಷ್ಠೆ ಸೇವಕರಾಗಿದ್ದಾರೆ ಗುರುಗಳ ಆಶ್ರಮ ಕಟ್ಟಡಕ್ಕೆ ಬೇಕಾಗುವ ಧನ ಕನಕಳನ್ನೂ ಭಿಕ್ಷೆಯಿಂದ ಸಂಗ್ರಹಿಸಿ ಲಕ್ಷರೂಪಾಯಿಗಳ ಬಿಲ್ಡಿಂಗ್ ಶಿವಪೂಜಾ ಖೋಲಿ ಹಾಗೂ ಶಿವಾನುಭವ ಮಂಟಪ ಕಟ್ಟಸಿದ್ದಾರೆ. ಈಗಲೂ ಆಶ್ರಮದ ಕಾರಭಾರಿಗಳಾಗಿ ಕಳಕಳಿಯಿಂದ ದುಡಿಯುತ್ತಿರುವರು.

---

+ ಅನ್ನದಾನಯ್ಯನವರು ಮಲ್ಲಾಪೂರ ಇವರು ಚನ್ನವೀರಶಾಸ್ತ್ರಿಗಳಿಗಿಂತ ಮೊದಲು ಆಶ್ರಮದ ಕಾರಭಾರಿ (ಕಾರಕೂನ) ಗಳಾಗಿ ಕೆಲಸ ಮಾಡಿದ್ದಾರೆ.

---

ಶ್ರೀ ರುದ್ರಾರಾಧ್ಯ ಶಾಸ್ತ್ರೀಗಳು ಕೋಡಿಕೊಪ್ಪ, ಶ್ರೀ ರುದ್ರಾರಾಧ್ಯ ಶಾಸ್ತ್ರಿಗಳು ಗುಡೂರ, ಶ್ರೀ ಶಿಡಿಗಿನಮಳೆ ಚಂದ್ರಯ್ಯ ಸ್ವಾಮಿ (ಸಿಸಿಮಾಸ್ತರ್)

○ ಶೇಷಾದ್ರಿಗವಾಯ್ ಬೆಂಗಳೂರ್, ಶ್ರೀ ಹನುಮಂತಾಚಾರ್ಯಕಂಪ್ಲಿ ಶ್ರೀ ಮರಿಯಪ್ಪ ರೋಣ, ಶ್ರೀ ಬಿ. ಡಿ. ಭಜಂತ್ರಿ, ಶ್ರೀ ಎಲ್ಲಪ್ಪ ಅಮರಗೋಳ ಶ್ರೀ ಬಸವಂತೆಪ್ಪ ಹೊಸಪೇಟೆ, ಶ್ರೀ ಜಂಪಣ್ಣ ಮಾಸ್ತರ, ಶ್ರೀ ವಿರೇಶ್ವರ ಮಸರಿ, ಶ್ರೀ ಸಂಗಮೇಶ್ವರ ಹೊಸ್ನಿಗನೂರ, ಶ್ರೀ ರಂಗಪ್ಪ ಗುಡೂರ, ಶ್ರೀ ಬಸವಲಿಂಗಸ್ವಾಮಿ ಚಿತ್ತರಗಿ, ಶ್ರೀ ಈಶ್ವರ ಮೋರಿಗೇರಿ, ಶ್ರೀ ರಾಮಚಂದ್ರ-ರಾವ್ ಜೇಗರಕಲ್, ಶ್ರೀ ಮರಿಸ್ವಾಮಿ ಮಸರಿ, ಶ್ರೀ ಚನ್ನಬಸವಾರ್ಯ ಸುರಕೋಡ, ಶ್ರೀ ಶಿವಂಣನವರು ಗಾಣಿಗೇರ ಕೋಡಬಾಳ, ಶ್ರೀ ಸಂಗಮೇಶ್ವರ ಗುಡೂರ (ಹೈದರಾಬಾದ), ಶ್ರೀ ಕರವೀರ ಮಲ್ಲಾಪೂರ, ಶ್ರೀ ವೀರಭದ್ರಸ್ವಾಮಿ ಶಂದಿಗವಾಡ, ಶ್ರೀ ವಿಠ್ಠಲಸಾ ಕಬಾಡಿ, ಶ್ರೀ ನಾಗಬಸಯ್ಯ ಶಿರೋಳ, ಶ್ರೀ ಚಿದಾನಂದಪ್ಪ ಇಲಕಲ್, ಶ್ರೀ ಶಿವಕುಮಾರ ಕುಕನೂರ, ಶ್ರೀ ನಾಗಮುನಿ ಅನಂತಪೂರ, ಶ್ರೀ ರಾಚಪ್ಪ ಆಲಗೂರ, ಶ್ರೀ ಶರಣಪ್ಪ ಮಸಾರಿ ಹಂಚಿನಾಳ, ಶ್ರೀ ಶಿವಮೂರ್ತೆಪ್ಪ ಅಳವಂಡಿ, ಶ್ರೀ ತುಕಾರಾಮಸಾ ಕಬಾಡಿ, ಶ್ರೀ ರುದ್ರಸ್ವಾಮಿ ಕರ್ಜಗಿಮಠ, ಶ್ರೀ ಉಮಾಕಾಂತಯ್ಯ ಕಲ್‌ಕಂಬ, ಶ್ರೀ ಪಂಚಾಕ್ಷರಿ ಮಂಣೂರ, ಶ್ರೀ ಶಿದ್ದಪ್ಪ ಗುಳೇದ್ ಶ್ರೀ ಶಂಕ್ರಪ್ಪ ವುಲತಿ, ಶ್ರೀ ಶರಣಪ್ಪ ಹೊಂಬಳ, ಶ್ರೀ ನರಶಿಂಹರಾವ್ ತಿಳಗೂಳ, ಶ್ರೀ ಗುರುಲಿಂಗಸ್ವಾಮಿ ಬೆಳವಣಿಕೆ ಶ್ರೀ ಚಂದ್ರಯ್ಯಸ್ವಾಮಿ ಶಿರಿಗೆರೆ, ಶ್ರೀ ನಾಗರಾಜ ಶಿರಿಗೆರೆ, ಶ್ರೀ ಶಿವಪ್ಪ ಶಿರಿಗೆರೆ, ಶ್ರೀ ಸೋಮಶೇಖರ ಕುನ್ನುಟಗಿ, ಶ್ರೀ ಸೋಮಶೇಖರ ಬೇನೂರ, ಶ್ರೀ ಸಿದ್ಧಯ್ಯಸ್ವಾಮಿ ತೆಲಗಿ, ಶ್ರೀ ಮಹಾಂತಸ್ವಾಮಿ ಎಲಿವಾಳ, ಶ್ರೀ ಮಹದೇವಪ್ಪ ಬೆಟಗೇರಿ, ಶ್ರೀ ವಿರುಪಾ-ಕ್ಷಪ್ಪ ಮಂಗಳೂರ, ಶ್ರೀ ಬಸವರಾಜ ಹಿರೇಕೆರೂರ್, ಶ್ರೀ ವೀರೇಶಪ್ಪ ಕಟ್ಟಿ, ಶ್ರೀ ಮೈಲಾರಲಿಂಗ ಹಿರೇಹಾಳ, ಶ್ರೀ ಷಣ್ಮುಖಯ್ಯ ಪಾದನಗಟ್ಟಿ, ಶ್ರೀ ಶಿವ. ನಗೌಡ ದಂಡಿಗಿಹಳ್ಳಿ, ಶ್ರೀ ಬಸವರಾಜ ಸೂಗೂರು, ಶ್ರೀ ಬಸವರಾಜ ಬೇ-ಪೂರ, ಶ್ರೀ ಎಸ್. ಎಸ್. ಮಿಂಚಿನಾಳ ಹಿಪ್ಪರಗಿ, ಶ್ರೀ ಸಂಗಪ್ಪ ರಾಮಪೂರು ಶ್ರೀ ಮರಿಯಪ್ಪ ರಾಮಪೂರ, ಶ್ರೀ ಮರಿಯಪ್ಪ ಮೇಣೆದಾಳ, ಶ್ರೀ ಜಯಚಂದ

---

○ ಶ್ರೀಶೇಷಾದ್ರಿಗವಾಯ್ ಅವರು ಬೆಂಗಳೂರಲ್ಲಿ "ಶ್ರೀಅರವಿಂದ ಸಂಗೀತ ವಿದ್ಯಾಲಯ" ವನ್ನು ಸ್ಥಾಪಿಸಿ "ಗಾಯನಗಂಗಾ" ದ್ವೈಮಾಸಿಕ ಪ್ರಕಟಿಸಿ ಶ್ರೇಷ್ಠತಮಸಂಗೀತ ಕಲೆಯ ಪ್ರಸಾರಕ್ಕೆ ಟೊಂಕಕಟ್ಟಿ ನಿಂತಿದ್ದಾರೆ.

ದಿಲ್ಲಿವಾಲಾ, ಶ್ರೀ ಮಲ್ಲಿಕಾರ್ಜುನ ಭೀಮನಗಡ, ಶ್ರೀ ಶಿವಪ್ಪ ಲಾಯರ ಗುಂದಿ, ಶ್ರೀ ಮರಿಬಸಪ್ಪ ರೋಣ, ಶ್ರೀ ಶಂಕ್ರಪ್ಪ ನಿಪ್ಪಾಣಿ, ಶ್ರೀ ಗುರುಲಿಂಗ ಸ್ವಾಮಿ ಬಸವಂತವಾಡ, ಶ್ರೀ ಸಂಗನಬಸವಾರ್ಯ ಹಿಪ್ಪರಿಗಿ, ಶ್ರೀ ರೇವಣಸಿದ್ಧೇಶ್ವರ ಶಿರಾಳಕೊಪ್ಪ, ಶ್ರೀ ಮೌನೇಶಕುಮಾರ ವಡಗೇರಿ, ಶ್ರೀ ರಾಚಯ್ಯ-ಸ್ವಾಮಿ, ಉಪ್ಪುಣ್ಸಿ ಶ್ರೀ ಶಿವಯ್ಯಸ್ವಾಮಿ ದೇವಿ ಹೊಸೂರ,ಶ್ರೀ ಸೋಮಶೇಖರ ಲೋಣಾರ್‌ಮಠ ಮುಂತಾದ ವಾದಕರು— * ಶ್ರೀ ವೇ- ಶಿವಮೂರ್ತಿಸ್ವಾಮಿ ದೇವಗಿರಿ, ಶ್ರೀ ವೆಂಕಪ್ಪ ರೋಣ, ಶ್ರೀ ಶಿವಯ್ಯಸ್ವಾಮಿ ಮುದೇನಗುಡಿ ಶ್ರೀ ಕರಬಸಯ್ಯ ಮುನವಳ್ಳಿ, ಶ್ರೀ ಲಿಂಗರಾಜ ಅಂಬಳಿ, ○ ಶ್ರೀ ಮುಪ್ಪಯ್ಯ ಸ್ವಾಮಿ ಚಿತ್ತರಗಿ, ಶ್ರೀ ಹನುಮಂತಾಚಾರ್ಯ ಮದ್ರಾಸ್ ( ಸಿನಿಮಾಸ್ಟಾರ್) ಶ್ರೀ ರುದ್ರಪ್ಪ ಮತ್ತಿಗಟ್ಟ, ● ಶ್ರೀ ಚನ್ನಬಸವಾರ್ಯ ನರೆಗಲ್ಲ, ಶ್ರೀ ಸಿದ್ಧರಾಜ್ ಉಜ್ಜೈನಿಮಠ, ಶ್ರೀ ನೀಲಕಂಠಪ್ಪನವರು ಹಮ್ಮಿಗ್ಗಿ, ಶ್ರೀ ಬಸವರಾಜ ಗೋಕಾಕ, ಶ್ರೀ ವೀರಭದ್ರಪ್ಪ ಲಕಮಾಪೂರ, ಶ್ರೀ ಬಸವರಾಜ ತಾಳಕೇರಿ, ಶ್ರೀ ತೀರ್ಥಪ್ಪ ಕೂಡಲ, ಶ್ರೀ ಸಿದ್ಧಲಿಂಗಪ್ಪ ಕವಲೂರ (ಸಿನಿಮಾನಟ) ಶ್ರೀ ದೇವ-ರಾಜ ಅಂಬಲಿ, ಶ್ರೀ ಮರಿಯಪ್ಪ ರೋಣ, ಶ್ರೀ ಶಿವಪ್ಪ ಯರೆ ಇಂಗಳಿಗಿ, ಶ್ರೀ ಕಾಶಯ್ಯಸ್ವಾಮಿ ಬಿಳೇಕಲ್, ಶ್ರೀ ರೇವಣಯ್ಯ ಸೀದರಗಡ್ಡಿ, ಶ್ರೀ ವಿರುಪಾ-ಕ್ಷಯ್ಯ ಬೇನಾಳ, ಶ್ರೀ ಸಂಜೀವ ಗಬ್ಬೂರ್, ಶ್ರೀ ಗುರುಬಸಯ್ಯ ಕುರ್ಲ-ಕೊಂದಿ, ಶ್ರೀ ಗುರಲಿಂಗ ಶೆಟ್ಟಿ ಸಂಗಮ: ಶ್ರೀ ಅಲ್ಲಮ ಪ್ರಭು ಸಂಗಮ ಮುಂತಾದ ನಾಟ್ಯಕಲಾವಿದರು ಹಾಗೂ

---

* ಶಿವಮೂರ್ತಿಸ್ವಾಮಿ ದೇವಗಿರಿಯಿವರು- ಗುರುವರ್ಯರ ಸೋದರ ಮಾವನಾದ ಚಂದ್ರಶೇಖರಯ್ಯನವರ ಜೇಷ್ಠಪುತ್ರರು. ಇವರು ಗುರುಗಳ ಸಂಸ್ಥೆಯಲ್ಲಿದ್ದು ಕಷ್ಟದಿಂದಭ್ಯಾಸ ಮಾಡಿ ಸಂಗೀತ ಹಾಗೂ ನಾಟ್ಯಕಲೆಗಳನ್ನು ಅಭ್ಯಾಸ ಮಾಡಿದ್ದಾರೆ. ಒಳ್ಳೆ ರಂಗಭೂಮಿ ಶ್ರೇಷ್ಠ ಕಲಾಕಾರರು. ಇವರೀಗ ಗುರುಗಳ ನಾಟಕ ಕಂಪನಿಯ ಡಾಯ್‌ರೆಕ್ಟರ್ ಆಗಿ ಕೆಲಸ ಮಾಡುತ್ತಿದ್ದಾರೆ. " ನಟಶೇಖರ " ಎಂಬ ಬಿರುದಾಂಕಿತರಾಗಿದ್ದಾರೆ.

---

○ ಮುಪ್ಪಯ್ಯಸ್ವಾಮಿಗಳು ಪಂ. ಗಂಗಾಧರ ಶಾಸ್ತ್ರಿಗಳ ಸಹೋದರರು ಒಳ್ಳೇ ದಕ್ಷತೆಯ ಅಭಿನಯ ಕಲೆಯ ಸಾಗರರು.

---

● ಇವರು ಶ್ರೀ ವಿಜಕುಮಾರ ನಾಟ್ಯ ಸಂಘವನ್ನು ಸ್ಥಾಪಿಸಿನಾಟ್ಯ ಕಲೆಯನ್ನು ಪ್ರಸಾರ ಮಾಡುವ ಒಳ್ಳೆ ನಿಷ್ಠಾವಂತ ಕಲಾವಿದರು, ಚನ್ನಬಸವಾರ್ಯ ನರೇಗಲ್ ಅವರು

ಶ್ರೀ. ಶಿವರಾಯ ನಿಪ್ಪಾಣಿ, ಶ್ರೀ. ಚಿದಾನಂದಪ್ಪ ಬಳ್ಳಾರಿ, ಶ್ರೀ. ಬಸಪ್ಪ ಬ-
ಳ್ಳಾರಿ, ಶ್ರೀ, ಶಿವಶರಣಪ್ಪ ಮೂಡಿ, ಶ್ರೀ, ಚನವೀರಸ್ವಾಮಿ ಎರೆಬೂದ್ಯಾಳ, ಶ್ರೀ.
ಪಂಚಾಕ್ಷರಿಸ್ವಾಮಿ ಮಲ್ಲಾಪೂರ, ಶ್ರೀ. ನಾಗಯ್ಯಸ್ವಾಮಿ ಚಳ್ಳಗಿ, ಶ್ರೀ. ಮರಿಸ್ವಾಮಿ
ಸಿರಿಗೆರೆ, ಶ್ರೀ. ಬಸವರಾಜ ದೇವಗಿರಿ, ವಿಶ್ವನಾಥ ಉಡಚಾಣ. ಶ್ರೀ. ನೀಲಕಂಠಯ್ಯ
ಸ್ವಾಮಿ ಸಾಲೋಟಗಿ, ಶ್ರೀ. ಮುರಿಗೆಪ್ಪ ಬೆಲ್ಲದಬಾಗೇವಾಡಿ, ಶ್ರೀ. ಶಾಂತವೀರಯ್ಯ
ಮದರಿ- ಶ್ರೀ. ಭೋಜರಾಜ ವಣೀನೂರ, ಶ್ರೀ. ಬಾಳಪ್ಪ ಯಲಬುರ್ಗಿ, ಶ್ರೀ ಅಖಂ-
ಡಪ್ಪ ಚಿತ್ತರಗಿ, ಶ್ರೀ. ಮಲ್ಲೇಶಪ್ಪ ಕಡಿವಾಲ, ಶ್ರೀ. ಶಂಕ್ರಪ್ಪ ಜಂಬಲದಿನ್ನಿ, ಶ್ರೀ.
ಪಂಚಯ್ಯಸ್ವಾಮಿ ಸೂಗೂರಮಠ.

ಮೊದಲಾದ ಗಾಯನಕಾರರು ಈ ಗುರುಪುಟ್ಟರಾಜರ ಗರಡಿಯಲ್ಲಿ ತಯಾರಾದ ವರೇ. ಇನ್ನೂ ಅನೇಕರಿದ್ದಾರೆ. ಅವರೆಲ್ಲರ ಹೆಸರುಗಳು ನನಗೆ ಸಧ್ಯದ ಸಮಯದಲ್ಲಿ ಜ್ಞಾಪಕವಾಗದ ಕಾರಣ ಪ್ರಸ್ತುತ ಪಡಿಸಿಲ್ಲ. ವ್ಯಾಪಾರಸ್ಥ ತನ್ನಂಗಡಿಯಲ್ಲಿಯ ಸಾಮಾನುಗಳೆಲ್ಲವನ್ನೂ ತೆಗೆದು ತೋರಿಸೋದಿಲ್ಲ. ಶಾಂಪಲ್‌ಗಾಗಿ ಕೆಲವೊಂದು ಸಾಮಾನುಗಳನ್ನು ತೋರಿಸುತ್ತಾನೆ. ಅದರಂತಾಗಿದೆ ಗುರುವಿನ ಶಿಷ್ಯರ ಹೆಸರಿನ ಪಟ. ಅನಂತರನ್ನು ಈ ಬುಕ್ಕಿನಲ್ಲಿ ಸೇರಿಸಲು ಸಾಧ್ಯವಿದೆಯೆ ? ನನಗೆ ಪರಿಚಯವಿಲ್ಲದ ಕಲಾವಿದರ ಹೆಸರುಗಳ್ನು ಎಲೆಯ ಮರೆಯ ಕಾಯಿಯಂತೆ ವಿರಾಜಮಾನವಾಗಿವೆ; ಜಗಕ್ಕುಪಕಾರವಾಗಿವೆ; ಗುರುಕೃಪೆಗೆ ಪಾತ್ರವಾಗಿವೆ.

ಇಂಥಾ ಅಪಾರವಾದ ಸುತಬಳಗವನ್ನು ಕಂಡುಕೊಂಡ ಗುರುವರ್ಯರು ಪಿಶ್ವ ಕುಟುಂಬಿಗಳು. ಇವರ ಅವತಾರದಿಂದ ವಿಶ್ವವೇ ಸಮಾಧಾನದುಶಿರು ಹಾಕಿದೆ, ಲಲಿತ ಕಲೆಗಳ ಪಾರ್ಟಿ ಮಾಡಿದೆ. ಸರಳ, ಶಾಂತಿ ಸಹನೆಗಳಾಗರ ವಾಗಿದ್ದಾರೆ ಗುರುವರ್ಯರು ಪುಟ್ಟರಾಜರು. ಇಂಥಾ ಪುಣ್ಯಪುರುಷರನ್ನು ಪಡೆದ ನಾವು ಧನ್ಯರು, ಧನ್ಯಯುತ ನಮ್ಮನಾಡು, ಪರಮಪಂಡಿತ ಪುಟ್ಟರಾಜರನ್ನು ಇಡೀ ನಾಡೇ ಹೃತ್‌ಪೂರ್ವಕ ಸ್ವಾಗತಿಸಿತು; ಪ್ರಶಸ್ತಿಗಳ ಮಳೆಗೆರೆಯಿತು

೧೯೪೦ ರಲ್ಲಿ ಬಳ್ಳಾರಿಯ ಪುರಜನರು ಸ್ವಾಗತಿಸಿ "**ಉಭಯ ಗಾಯನ ವಿಶಾರದ**" ಎಂಬ ಬಿರುದು ಕೊಟ್ಟರು. –೧೯೪೭ ರಂದು ಬೆಳಗಾವ್ ನಗರದಲ್ಲಿನಡೆದ ಅಖಿಲ ಭಾರತ ಸಂಗೀತ ಸಮ್ಮೇಲನದಲ್ಲಿ ಪುಟ್ಟರಾಜರಿಗೆ ಅಗ್ರಸ್ಥಾನ ದೊರಕಿತಲ್ಲದೆ, ಸಂಗೀತಪೇರ್ಪಟ್ಟಿತ್ತು.—೧೯೪೮ರಲ್ಲಿ ಮೈಸೂರ ಮಹಾರಾಜರಾಗಿದ್ದ ಜಯಚಾಮ ರಾಜೇಂದ್ರ ಒಡೆಯರ್ ಅವರು ಗದುಗಿನಲ್ಲಿರುವ ಗುರು

ವಿನ ವೀರೇಶ್ವರ ಪುಣ್ಯಾಶ್ರಮಕ್ಕೆ ಭೇಟಿಇತ್ತು ಆಶೀರ್ವಾದ ಪಡೆದರು೧೯೫೪ರಲ್ಲಿ
ಮೈಸೂರ ಸಂಗೀತ ಪ್ರೇಮಿಗಳು ಪಂಡಿತರು ಸೇರಿ ಗುರು ಪುಟ್ಟರಾಜರ ಸಂಗೀತ
ವೇರ್ಪಡಿಸಿ "ಉಭಯ "ಗಾಯನ ವಾದನ ಕಂಠೀರವ" ಎಂಬ ಬಿರುದಿ
ನೊಂದಿಗೆ ಸನ್ಮಾನಿಸಿದರು. —೧೯೫೪ ರಲ್ಲಿ ಜ|| ಶಿವರಾತ್ರೀಶ್ವರ ಮಠದಿ ಜರು
ಗಿದ ವೀರಶೈವ ವಿದ್ಯಾಪೀಠದ ಅಧ್ಯಕ್ಷತೆವಹಿಸಿ 'ಉಭಯ ಸಂಗೀತಸಾಗರ"
ಎಂಬ ಪದವಿ ಪಡೆದರು. — ೧೯೬೦ರಂದು ಶ್ರೀಶೈಲದಲ್ಲಿ ನಡೆದ ಶ್ರೀ ಶ್ರೀ ಶೈಲ
ವೀರಶೈವ ಮಹಾಸಭೆಯ ಅಂಗವಾಗಿ ನಡೆದ ಸಂಗೀತ ಸಭೆಯ ಅಧ್ಯಕ್ಷತೆ
ವಹಿಸಿ "ಉಭಯ ಗಾಯನಾಚಾರ್ಯ"ನೆಂಬ ಬಿರುದು ಗಳಿಸಿದರು. ಸುಕ್ಷೇತ್ರ
ಶ್ರೀಶೈಲ ಜಗದ್ಗುರು ವಾಗೀಶ ಶಿವಾಚಾರ್ಯ ಮಹಾಸ್ವಾಮಿಗಳು ಬಂಗಾರದ
"ಮಿಡ್ಲ" ಆಶಿರ್ವದಿಸಿದರು. — ೧೯೬೦ ರಲ್ಲಿ ಮೈಸೂರಿನ ಪುರಜನರು
"ಉಭಯ ಸಂಗೀತಕಲಾಪ್ರವೀಣ, ಅಖಿಲವಾದ್ಯ ಕಂಠೀರವ"ಎಂದೆಂಬ
ಬಿರುದುಗಳೊಂದಿಗೆ ಸತ್ಕರಿಸಿದರು. —೧೯೬೧ ರಲ್ಲಿ ಹಿಂದಿನ ರಾಷ್ಟ್ರಪತಿ
ರಾಜೇಂದ್ರಪ್ರಸಾದರು ಸತ್ಕರಿಸಿ 'ಆಪ್ ಬಡಾ ಆದಮಿ ಹೈ'ಎಂಬ ಉದ್ಗಾರ
ತೆಗೆದು ಅಭಿನಂದಿಸಿದರು. ಈ ಕಾರ್ಯಕ್ರಮವನ್ನು ಸಮಾಚಾರ ಚಿತ್ರ ಸಂಸ್ಥೆ
ಯವರು ಚಿತ್ರೀಕರಣ ಮಾಡಿಕೊಂಡು ಇಂಡಿಯಾದ ಎಲ್ಲ ಚಿತ್ರಮಂದಿರಗಳಲ್ಲಿ
ಪ್ರದರ್ಶಿಸಿದರು. — ೧೯೬೧ ರಲ್ಲಿ ಗದುಗಿನಲ್ಲಿ ನಡೆದ ೪೩ನೇ ಕನ್ನಡ ಸಾಹಿತ್ಯ
ಸಮ್ಮೇಳನವು ಇವರನ್ನು ಸ್ವಾಗತಿಸಿ "ಜ್ಞಾನಯೋಗಿ"ಎಂಬ ಪದವಿ ಅರ್ಪಿ-
ಸಿತು. ಇದೇ ಸಂದರ್ಭದಲ್ಲಿ ಆಸ್ಥಾನ ವಿದ್ವಾನ್, ಪಂಡಿತರತ್ನ ಶ್ರೀ ಬಿ.
ಶಿವಮೂರ್ತಿ ಶಾಸ್ತ್ರಿಗಳು, "ಪುಟ್ಟರಾಜ ಕವಿ ಗವಾಯಿಗಳವರು ವೀರಶೈವ
ಧರ್ಮ ಅಗ್ರರತ್ನ" ಎಂದು ಉದ್ಗಾರ ತೆಗೆದು ಅಭಿನಂದಿಸಿದರು. —೧೯೬೨
ರಂದು ಬೆಂಗಳೂರಲ್ಲಿ ನಡೆದ ವೀರಶೈವ ಬಸವಮಂಟಪದ ಅಧ್ಯಕ್ಷತೆ ವಹಿಸಿ
'ಸಂಗೀತ ಸಾಹಿತ್ಯ ಕಲಾಪ್ರಪೂರ್ಣ" ವೆಂಬ ಬಿರುದು ಗಳಿಸಿದರು.
'೧೯೬೨ರಲ್ಲಿ ಮದ್ರಾಸದ ಕಲಾಪ್ರೇಮಿಗಳು ಸ್ವಾಗತಿಸಿ "ಸಂಗೀತ ಸಾಹಿತ್ಯ
ಕಲಾನಿಧಿ" "ಗಾಯನ ಸಾರ್ವಭೌಮ" ರೆಂಬ ಬಿರುದಿತ್ತು ಸತ್ಕರಿಸಿದರು.
೧೯೬೨ ರಂದು ಬೆಂಗಳೂರ ನಾಗರಿಕರು 'ಗಾನಯೋಗಿ' 'ಕವಿ ಚಕ್ರವರ್ತಿ
ಎಂಬ ಬಿರುದುಗಳಿಂದ ಗೌರವಿಸಿದರು. ೧೯೬೨ ಮದ್ರಾಸ ವೀರಶೈವ

ಸಂಘದ ಅಧ್ಯಕ್ಷತೆ ವಹಿಸಿ "ಉಭಯ ಕಲಾಪೂರ್ಣ" ವೆಂಬ ಬಿರುದಾಲಂಕೃತರಾದರು ೧೯೭೨ರಂದು ದಾವಣಗೆರೆ ನಾಗರಿಕರು "ಗಾನರತ್ನ" "ತ್ರಿಭಾಷಾ ಕವಿ" "ಉಭಯ ಸಂಗೀತಸೂರಿ" ಮೊದಲಾದ ಬಿರುದುಗಳ ಮಳೆಗರಿಸಿ ಸತ್ಕರಿಸಿದರು. — ೧೯೭೩ರಂದು ಮೈಸೂರ ದಸರಾ ಉತ್ಸವದ ಅಂಗವಾಗಿ ನಡೆದ ಸಂಗೀತ ಕಾರ್ಯಕ್ರಮದಲ್ಲಿ ವರಿಗೆ ಅಗ್ರಸ್ಥಾನ ತಂದು ಕೊಟ್ಟಿತು. ೧೯೭೫ರಲ್ಲಿ "ಸಂಗೀತ ನಾಟಕ ಅಕ್ಯಾಡೆಮಿ ಬೆಂಗಳೂರ"ಲ್ಲಿ ಸನ್ಮಾನಿತರಾದರು. ೧೯೭೫ರಂದು ಬೆಂಗಳೂರದ ಅರವಿಂದ ಸಂಗೀತ ವಿದ್ಯಾಲಯದಲ್ಲಿ ಆ. ನ. ಕೃಷ್ಣರಾಯರು ಹಾಗೂ ಶೇಷಾದ್ರಿಗವಾಯಿಗಳು ಪುರದ ಸಂಗೀತ ಪ್ರೇಮಿಗಳು ಸೇರಿ ಸಂಗೀತ ಕಾರ್ಯಕ್ರಮವೇರ್ಪಡಿಸಿ"" ಗಾಯನಾಚಾರ್ಯ ರೆಂಬ ಬಿರುದು ಅರ್ಪಿಸಿದರು. —೧೯೭೫ ರಂದು ಧಾರವಾಡ ಮುರುಘಾಮಠದಲ್ಲಿ ನಡೆದ "ಅಖಿಲಭಾರತ ವಿದ್ವತ್ ಪರಿಷತ್" ನಲ್ಲಿ ವಿದ್ವತ್ ಪೂರಿತವಾಗಿ ಸಂಸ್ಕೃತದಲ್ಲಿ ಭಾಷಣ ಮಾಡಿದರು. "ಕವಿರತ್ನ" ವೆಂಬ ಬಿರುದು ಗಳಿಸಿದರು. — ೧೯೭೫ ರಂದು ಹುಬ್ಬಳ್ಳಿಯಲ್ಲಿ ಜರುಗಿದ ಅಂಗವಿಕಲರ ಪರಿಷತ್‌ದ ಅಧ್ಯಕ್ಷತೆ ವಹಿಸಿ "ಗಾನ ಯೋಗಿ" ಎಂಬ ಬಿರುದು ಗಳಿಸಿದರು.

೧೯೭೮ರಲ್ಲಿ ಗುಲಬುರ್ಗಾದ ಕಲಾಮಂಡಲದ ವಾರ್ಷಿಕೋತ್ಸವದ ಅಧ್ಯಕ್ಷತೆ ವಹಿಸಿ "ಗಾಯನ ವಾದನ ವಿಶಾರದ" ಎಂಬ ಪದವಿ ಸ್ವೀಕರಿಸಿದರು —೧೯೭೮ರಂದು ಅಥಣಿ ನಾಗರಿಕರು ಸತ್ಕರಿಸಿ"ಸಂಗೀತ ಸಮ್ರಾಟ" ವೆಂಬ ಬಿರುದ ಅರ್ಪಿಸಿದರು. ಈ ರೀತಿ ಒಂದೇ ಎರಡೇ ಅನಂತ ಕಡೆಗಳಿಂದ ಅನಂತಾನಂತವಾಗಿ ಬಿರುದುಗಳಿಸಿ ಸನ್ಮಾನ್ಯರಾದರು; ಆಗುತ್ತಿದ್ದಾರೆ.

ಈರೀತಿ ಜಗದೀಶನ ಹರಕೆಯಿಂದ; ಜಗದ, ಜಗದಜನರ ಪ್ರೋತ್ಸಾಹ ನದಿಂದ ಪ್ರಗತಿಯ ಸಿಂಹಾಸನವೇರಿದ ಪುಟ್ಟರಾಜ ಗುರುಗಳು ೫೦ ವರುಷದ ಪಟ್ಟದಲ್ಲಿ ದಿಟ್ಟದೇಹವಿರಿಸಿದರು.

ಗುರುವರ್ಯರ ೫೦ ನೇ ವರುಷದ ಹುಟ್ಟುಹಬ್ಬ ೧೯೭೪ ರಂದು ಪರಮ ಪೂಜ್ಯ ಯೋಗಿ ಗುರು ಪಂಚಾಕ್ಷರ ಗವಾಯಿಗಳವರ ಗದ್ದುಗೆಯ ಮುಂಭಾಗದ ಶಿವಾನುಭವ ಮಂಟಪದಲ್ಲಿ ವಿಜೃಂಭಣೆಯಿಂದ ಜರುಗಿತು. ನಾಡಿನ ಅನಂತ ಗುರು– ಚರ– ವಿರಕ್ತ ಸ್ವಾಮಿಗಳು ದಯಮಾಡಿಸಿ ಹರಿಸಿದರು ಗುರು

ವರ್ಯ ಪುಟ್ಟರಾಜರನ್ನು ಶ್ರೀ. ಮ. ನಿ. ಪ್ರ. ಹಾಲಕೆರೆ ಅನ್ನದಾನ ಮಹಾ ಸ್ವಾಮಿಗಳು ನವಿಲುಗುಂದ ಶ್ರೀ. ಮ. ಪ್ರ. *ಮಹಾಂತಸ್ವಾಮಿಗಳು ಸವದಿ, ಶ್ರೀ. ಮ. ನಿ. ಪ್ರ. ಜ. ಅನ್ನದಾನ ಮಹಾಸ್ವಾಮಿಗಳು ಮುಂಡರಗಿ, ಶ್ರೀ. ಮ. ನಿ. ಪ್ರ. ಸವದತ್ತಿ ಮಹಾಸ್ವಾಮಿಗಳು, ಶ್ರೀ. ಮ. ನಿ. ಪ್ರ. ನೀಲಕಂಠ ಸ್ವಾಮಿಗಳು ಕಡಕೋಳ ಶ್ರೀ. ಮ. ಘ. ಚ. ಶಾಂತವೀರ ಪಟ್ಟಾಧ್ಯಕ್ಷರುಸಿಂಧ್ಗಿ ಗೊಗ್ಗಿಹಳ್ಳಿ, ನಾಗಠಾಣ, ಚಡಚಣ, ಗುತ್ತಲ; ಮುದ್ದೆಬಿಹಾಳ ಆಲಮಟ್ಟಿ ಮೊದಲಾದ ಮಹಾಸ್ವಾಮಿಗಳು ದಯಮಾಡಿಸಿ ಗುರುವರ್ಯರಿಗೆ ಆಯುಷ್ಯಾಭಿವೃದ್ಧಿಯಾಗಲೆಂದು ಆಶೀರ್ವದಿಸಿದರು.

ನಾಡಿನ ಅನಂತ ಕವಿಗಳು; ಸಾಹಿತಿಗಳು; ಕಲಾವಿದರು; ಗಮಕಿಗಳು ಆಗಮಿಸಿದ್ದರು. ಈ ಎಲ್ಲ ಕಾರ್ಯಕ್ರಮಗಳನ್ನು ಸಾಂಗವಾಗಿ ನಡೆಯಲಿಕ್ಕೆ ಸಹಕರಿಸಿದವರು ಹಿರಿಯ ಸಹೋದರರಾದ ಶ್ರೀ ಗಂಗಾಧರ ಶಾಸ್ತ್ರಿಗಳು ಚಿತ್ತರಗಿಯವರು ಅನಂತರು ಅನಂತವಾಗಿ ಕಾಣಿಕೆ ಕೊಟ್ಟರು ಗುರುವರ್ಯರಿಗೆ. ಅದರಂತೆ ನಾನಾದರೂ "ಜೀವನ ಕವನ" ವೆಂಬ ಹೊತ್ತಿಗೆಯನ್ನು "೫೦ ವರುಷ ತುಂಬಿದ ಪುಟ್ಟರಾಜರು" ಎಂಬ ಕವನವನ್ನು ಬರೆದು ಪ್ರಕಟಪಡಿಸಿ ಕವಿಯಾದ ಗುರುವರ್ಯರಿಗೆ "ಕವಿಗಾಣಿಕೆಯನ್ನರ್ಪಿಸಿದೆನು. ಪುಟ್ಟರಾಜರ ಹುಟ್ಟುಹಬ್ಬ ನಾಟ್ಯಸಂಸ್ಥೆಯ ಸುವರ್ಣ ಮಹೋತ್ಸವದ ಕಾರ್ಯಕ್ರಮಗಳು ಮಹಾಜಾತ್ರೆಯಾಗಿ ಜರುಗಿದವು.

---

*ಮಹಾಂತಸ್ವಾಮಿಗಳು ಗುರುವರ್ಯರ ಸಂಸ್ಥೆಯಲ್ಲಿ ೫-೬ ವರುಷ ವ್ಯಾಸಂಗ ಮಾಡಿ ಸಂಗೀತ, ಪುರಾಣ, ಪ್ರವಚನಗಳ ಅಧ್ಯಯನ ಮಾಡಿದರು. ಗುರುಗಳ ಕ್ರಿಯಾಮೂರ್ತಿಗಳಾಗಿ ಸತ್ಕ್ರಿಯೆಯುಳ್ಳವರಾಗಿ, ಸಾಹಿತಿಗಳಾಗಿ, ಸಂಗೀತಗಾರರಾಗಿ, ಪುರಾಣ ಪ್ರವಚನ ಪಟುಗಳಾಗಿ ಆಶ್ರಮದಲ್ಲಿ ಒಡನಾಡಿ, ನಾಡಿನಲ್ಲಿ ಮೆರೆದಾಡಿ, "ಅಭಿನವ ಚನ್ನ ಬಸವಣ್ಣ" ರಾಗಿ ಪರಿಶೋಭಿಸುತ್ತಿದ್ದಾರೆ. ಸವದಿ, ನವಿಲುಗುಂದಗಳ ಜನತೆಗೆ ಅಷ್ಟೇ ಅಲ್ಲ ನಾಡಿಗೆ, ಕುಮಾರ ಶಿವಯೋಗಿಗೆ ಮೆಚ್ಚುಗೆಯಾಗಿದ್ದಾರೆ.



# ಪುಟ್ಟರಾಜರ ಸುಸ್ವಭಾವ, ಶ್ರೇಷ್ಠ ಪವಾಡದ ಪ್ರಭಾವ-

"ಸಮತಾಭಾವದ ಮಾನವ ಮಹಾದೇವ" "ವಿವೇಕಾನಂದ"

ಶ್ರೀಗುರು ಪುಟ್ಟರಾಜರು ಮಕ್ಕಳನ್ನು; ಭಕ್ತರನ್ನು; ಪಂಡಿತರನ್ನು ಸಮಾನದೃಷ್ಟಿಯಿಂದ ಕಾಣುತ್ತಿದ್ದರು; ಹೃದಯದಿಂದ ಹರಸುತ್ತಿದ್ದರು. ಪಂಡಿತ ನೆಹರೂಜಿಯವರಂತೆ ಮಕ್ಕಳೊಂದಿಗೆ ಮಕ್ಕಳಾಗಿ ಹಾ(ಆ)ಡುತ್ತಿದ್ದರು. ಕೋಡಬಾಳ ಕ್ಯಾಂಪಿನಲ್ಲಿದ್ದಾಗ ತೆಲಗಿನ ಚೆನ್ನಪ್ಪನವರ ಚಿಕ್ಕಮಕ್ಕಳಾದ ಶಿವು ಬಸಮ್ಮ ಹಾಗೂ ಶಿವಂಣನವರ ಚಿಕ್ಕಕೂಸು ಪಂಚಾಕ್ಷರಿ,ಮುಂತಾದ-ಚಿಕ್ಕ ಮಕ್ಕಳೊಡನೆ ದಿನಕ್ಕೆರಡು ತಾಸು ಹುಡುಗರಾಗಿ ಆಡುತ್ತಿದ್ದರು. ಇವರಂತೆ ಗುರುಗಳು ಎಲ್ಲೇ ಇರಲಿ ಸಂಣಮಕ್ಕಳೊಂದಿಗೆ ಕಾಲಕಳೆಯುತ್ತಾರೆ. ಮಕ್ಕಳ ಬಗ್ಗೆ ಎಷ್ಟೊಂದು ಪ್ರೇಮಾಂತಃಕರಣವಿದೆ ನೋಡಿ ಶ್ರೀಗುರುಗಳಲ್ಲಿ.

ಕೋಡಬಾಳ ಗ್ರಾಮದ ಸದ್‌ಭಕ್ತ ಶಿರೋಮಣಿಗಳಾದ ಶ್ರೀಯುತ ಶಿವಂಣನವರು ಗಾಣಿಗೇರ- ಇವರು ಗುರುಗಳಲ್ಲಿ ಸಂಗೀತ ಶಿಕ್ಷಣಕ್ಕಾಗಿ ವ್ಯಾಸಂಗಮಾಡಿದರು. ಬಾಲ್ಯದಿಂದಲೂ ಉಡಾಳರಾದ ಶಿವಂಣನವರು ಗುರು ಪುಟ್ಟರಾಜರ ಕೃಪಾದಿಂದ ಸದ್‌ವಿನಯಗಳಾಗರವಾಗಿ ಆಶೀರ್ವಾದ ಪಡೆದು ಸ್ವಗ್ರಾಮಕ್ಕೆ ಬಂದರು. ಪವಿತ್ರವಾದ ಈ ಸಂಗೀತಕಲೆಯಿಂದ ಜೀವನ ಸಾಗಿಸಿದರೆ ಕಲೆಗೆ ಒಂದು ಕುಂದು. ಎಂದು ತಿಳಿದು ಕಿರಾಣಿ ಅಂಗಡಿಯೊಂದು ತೆಗೆದು ವ್ಯವಹಾರ ಕೈಕೊಂಡರು; ಜೀವನಮಾರ್ಗ ಕಂಡುಕೊಂಡರು. ಈ ಬಾಳ ವ್ಯವಹಾರದ ಜೊತೆಗೆ ಕಲೆಯ ವ್ಯವಹಾರ ವಿಸ್ತಾರವಾಯಿತು. ಫ್ರೀಯಾಗಿ ನಾಟಕಗಳನ್ನು ಕಲಿಸುವ ಗುರು ಸಾಂಪ್ರದಾಯ ಹಿಡಿದು ಪ್ರಾಪ್ತಿಯ ಫಲ ಪಡೆಯದೆ ಫ್ರೀಯಾಗಿ ಕಲೆಯ ಪ್ರಸಾರಮಾಡುತ್ತ ಸಫಲತೆಯಲ್ಲಿ ಚಲಿಸಿದರು. ಧರ್ಮವನ್ನು ತಲೆಯುಲ್ಲಿ, ಅಧರ್ಮವನ್ನು ಕಾಲ

ತಲದಲ್ಲಿರಿಸಿ ಸಾಗಿದ ಇವರಿಗೆ ಲಕ್ಷ್ಮಿಯ ಕಟಾಕ್ಷವಾಯಿತು. ಕ್ಷಯವಾಯಿತು. —ರೊಕ್ಕದ ಜೊಕ್ಕಸವೇ ಇವರ ಕರಕಕ್ಷೆಯಲ್ಲಿ ಬಂದಾಗ– ಸ್ವಾಭಾವಿಕವಾಗಿ ಸೊಕ್ಕು ಬರಲಿಲ್ಲ ಶಿವಂಣನವರಿಗೆ, ಇದು ಅಕ್ಷಿಯಿರದ ನನ್ನ ಗುರು ಪುಟ್ಟರಾಜರ ಕೃಪಾ ಕಟಾಕ್ಷವೆಂದು ತಿಳಿದರು; ಗರ್ವವಳಿದರು ಜೀವನೋಪಾಯಕ್ಕೆ ಎಷ್ಟು ಬೇಕೋ ಅಷ್ಟುಸಂಪತ್ತಿಟ್ಟುಕೊಂಡು, ಮಿಕ್ಕಿದ್ದನ್ನು ಗುರುಗಳ ಸಂಸ್ಥೆಗೆ, ಬಡಬಗ್ಗರಿಗೆ ದಾನವಾಗಿ ಕೊಟ್ಟರು, ಈಗಲೂ ಕೊಡುತ್ತಿದ್ದಾರೆ. ಈ ರೀತಿ ಬಡವರ ಬಂಟನಾಗಿ, ಸಂಸ್ಥೆಯ ನೆಂಟನಾಗಿ ಶಿವಂಣನವರು ಶ್ರೀಮಾನ್ ಶಿವಂಣ ಸಾಹುಕಾರರಾದರು, ಎಲ್ಲರ ಪ್ರೀತಿಯ ಜ್ಯೋತಿಯಂತೆ ಬೆಳಗಿದರು. ಪ್ರತಿವರುಷ ಸಂಸ್ಥೆಗೆ ನೂರಾರು ಚೀಲ ಕಾಳನ್ನು ಸುತ್ತಮುತ್ತಲಿನ ಭಕ್ತರ ಸಹಾಯದಿಂದ ಸಲ್ಲಿಸುತ್ತಿದ್ದರು ಶಿವಂಣನವರು. ಈ ರೀತಿ ಗುರುಪ್ರೀತಿಗೆ ಪಾತ್ರರಾಗಿ, ಜನಾನುರಾಗಿಗಳಾಗಿ ಮೆರೆಯುವ ಇವರಿಗೆ ಸಕಲ ಸುಖಗಳು ಒಲಿತು ಬಂದವು. — ಇಷ್ಟಿದ್ದರೂ ಪಾಪ! ಶಿವಂಣನವರಿಗೆ ಗಂಡು ಸಂತಾನವಿಲ್ಲ. ಇದುವೇ ಅವರ ಒಂದು ಕೊರತೆ. ಇದೇ ವಿಷಯವನ್ನು ಒಮ್ಮೆ ಗುರು ಪುಟ್ಟರಾಜರಲ್ಲಿ ಪ್ರಸ್ತಾಪಿಸಿದರು ಶಿವಂಣನವರು. ಆಗ ಗುರುಗಳು ಒಂದು ಕ್ಷಣ ಮೌನರಾಗಿ ........ ಶಿವಂಣ ! ನೀನು "ಬಸವ ಪುರಾಣ" ಈ ವರುಷ ಹಚ್ಚು ಅಂದರೆ ೧ ವರ್ಷ ದೊಳಗಾಗಿ ಗಂಡು ಮಗು ಹುಟ್ಟುತ್ತಾನೆ ! ಎಂದು ತಕ್ಷಣ ನುಡಿದರು ಗುರು ಪುಟ್ಟರಾಜರು........... ಶಿವಂಣನವರೀಗ ಹೆಂಣು ಸಂತಾನಪಡೆದು ಮೊಮ್ಮಕ್ಕಳನ್ನೂ ಪಡೆದಿದ್ದಾರೆ. ಈಗ ಅರ್ಧ ಆಯುಷ್ಯದ ಗಡಿದಾಟಿದೆ. ಅಂದಾಗ ಇನ್ನೆಂತು ಗಂಡುಮಗು ಹುಟ್ಟೋದು ? ಎಂದು ನಾವೆಲ್ಲರೂ ಅಂದಾಗ — ಮೊದಲು ಪುರಾಣ ಹಚ್ಚಲಿ ! ಆಮೇಲೆ ನಾನು ಹೇಳುತ್ತೇನೆ. ಎಂದು ಗುರುಗಳು ಖಂಡಿತವಾಗಿ ಹೇಳುತ್ತಾರೆ. — ಆಗಲಿ ! ತಮ್ಮ ಅಪ್ಪಣೆಯಂತೆ ಬಸವ ಪುರಾಣವನ್ನು ಸ್ವಂತ ಖರ್ಚಿನಿಂದ ಹಚ್ಚುತ್ತೇನೆಂದು ಶಿವಂಣನವರು ಗುರುಗಳಿಗೆ ನಮಸ್ಕರಿಸಿದರು; ಶ್ರೀ ನಿರ್ಧಾರ ಮಾಡಿದರು.

ನುಡಿದಂತೆ ನಡೆಯುತ್ತ ಬಂದ ಶಿವಂಣನವರು ೧೯೬೫ ರಲ್ಲಿ ಸಮಗ್ರ ಮೂರು ತಿಂಗಳ ಪರ್ಯಂತರ ಅನ್ನದಾಸೋಹದೊಂದಿಗೆ ಸಕಲ ವೈಭವದಿಂದ

ಸುರುವಾಯಿತು. ಭೀಮಕವಿ ವಿರಚಿತ ಪುರಾಣ ಹಚ್ಚಲಾಗಿತ್ತು. ಗುರು ಪುಟ್ಟರಾಜರು ಪುರಾಣ ಹೇಳುತ್ತಿದ್ದರು. ನಾನು ಪುರಾಣ ಓದುತ್ತಿದ್ದೆ. ಕೋಡಬಾಳದ ಹಾಗೂ ಸುತ್ತಲಿನ ಸಹಸ್ರಾರು ಜನ ಪುರಾಣ ಶ್ರವಣಕ್ಕೆ ಬರುತ್ತಿದ್ದರು. ಆ ಎಲ್ಲ ಜನರಿಗೆ ಪುರಾಣನಂತರ ಪ್ರಸಾದ (ಅನ್ನ) ಒದಗಿಸುತ್ತಿದ್ದರು ಶಿವಂಣನವರು. ಶಿವಂಣನವರು ಬಸಂವಣನಂತೆ, ಕೋಡಬಾಳ ಗ್ರಾಮದ ಕಲ್ಯಾಣದಂತೆ, ಗುರು ಪುಟ್ಟರಾಜರು ಅಲ್ಲಮಪ್ರಭುದೇವನಂತೆ ನೋಡುವವರಿಗೆ ಕೇಳುವವರಿಗೆ ಸ್ವಾಭಾವಿಕವಾಗಿತ್ತು, ಭಾವ ಬರುತ್ತಿತ್ತು, ಈ ರೀತಿ ಮಹಾಪ್ರಸ್ತದೊಂದಿಗೆ ಮಹಾಪುರಾಣದ ಮಹಾ ಮಂಗಲ ಮುಕ್ತಾಯವಾಯಿತು. ಮಂಗಲದ ಸಮಯದಲ್ಲಿ ಲಕ್ಷಾನುಗಟ್ಟಲೆ ಜನಸಂದಣಿ ಕೂಡಿತ್ತು; ವರ್ಣಿಸಲು ಅಪಾರವಾಗಿತ್ತು.

ಈ ಮಹಾಪುರಾಣ ಮುಕ್ತಾಯವಾಗುವದರಲ್ಲಿ ೬೦-೭೦ ಸಾವಿರ ರೂ. ಶಿವಂಣನವರಿಂದ ಕೈ ಬಿಟ್ಟಿದ್ದವು. ಆದರೂ ಶಿವಂಣನವರ ಉತ್ಸಾಹ ಕಡಿಮೆಯಾಗಿರಲಿಲ್ಲ, ಅವರಂಣಂದಿರಾದ ಶಿದ್ದಂಣನವರ ಸಹಾಯ ಸಂಣಾಗಿರಲಿಲ್ಲ. ಆಳುವಮಕ್ಕಳ ಕೈಯಲ್ಲಿ ದುಡ್ಡು ಕೊಡುವದಾಗುವದಿಲ್ಲಆ ಂಥಾದ್ದು ಶಿವನಕಾರ್ಯಕ್ಕೆ ಸಮಾಜ ಕಲ್ಯಾಣಕ್ಕೆ ಇಷ್ಟೊಂದು ಹಣ ಉದಾರತೆಯಿಂದ ಒಂದೇವ್ಯಕ್ತಿ ಖರ್ಚುಮಾಡಿದಾ ಎಂದರೆ ಯಾರಿಗೆತಾನೆ ಆಶ್ಚರ್ಯವಾಗಲಿಕ್ಕಿಲ್ಲ. — ಗುರುಗಳು ಹೇಳಿದಂತೆ ಶಿವಂಣನವರು ಪುರಾಣ ಹಚ್ಚಿಸಿ ತಮ್ಮ ಕರ್ತವ್ಯ ಮುಗಿಸಿದರು. ಇನ್ನು "ಕಂದನ ಕೊಡುವದು" ಗುರುಗಳ ಬಾಕೀ ವುಳಿಯಿತು.

ತಪೋನಿಷ್ಠರೂ, ಪೂಜಾನಿಷ್ಠರೂ ಆದ ಗುರು ಪುಟ್ಟರಾಜರ ಮಾತು ಸಟೆಯಾಗಬಹುದೆ ? ವರ್ಷ ತುಂಬುವದರೊಳಗಾಗಿ ಒಂದು ಗಂಡು ಮಗು ಜನಿಸಿತು, ಶಿವಂಣನವರಿಗೆ. ಶಿವಂಣನವರ ಗಂಡುಸಂತಾನವಿಲ್ಲದ ವಂಶಕ್ಕೆ ವಂಶ ದೀಪವೊಂದು ಹುಟ್ಟಿತು; ಅತ್ಯಾನಂದವನ್ನುಂಟು ಮಾಡಿತು; ಪುಟ್ಟರಾಜರ ಭವಿಷ್ಯದ್‌ವಾಣಿ ಸತ್ಯವಾಯಿತು,

ಉತ್ತರಿಯು ಬಾರದಿರೆ । ಹೆತ್ತಪ್ಪಮುನಿದರೆ ।
ಸತ್ಯರುಹುಸಿನುಡಿದರೆ ಲೋಕ ವಿನ್ನೆತ್ತಬದುಕುವದೋ ಸರ್ವಜ್ಞಾ ॥

ಎಂದು ಗುರುಗಳ ಆಜ್ಞಾಪ್ರಕಾರ ಕೂಸಿಗೆ "ಪಂಚಾಕ್ಷರಿ" ಎಂದು

ನಾಮಕರಣ ಮಾಡಿದ್ದಾರೆ. ಈಗ ಈ ಪಂಚಾಕ್ಷರಿ ಪುಷ್ಟಿಯಿಂದ ಬೆಳೆದಿದ್ದಾನೆ; ಶಿವಣ್ಣನವರ ಹಾಗೂ ಅವರ ಬಳಗದವರ ಹೃದಯ ಬೆಳಗುತ್ತಿದ್ದಾನೆ.

ಹಾವೇರಿ ತಾಲೂಕಿನ ದೇವಗಿರಿ ಗ್ರಾಮದ ಶಿವಯೋಗಿಶಾಸ್ತ್ರಿ ಗಡ್ಡದ ಮಠ ಅನ್ನುವವರು ಅಜ್ಜಾ ಅವರ ಹತ್ತಿರ ಇದ್ದು ಕೀರ್ತನ ಪುರಾಣಗಳ ಅಭ್ಯಾಸಮಾಡಿದ ಪರಮಶಿಷ್ಯರು; ಅಜ್ಜಾ ಅವರ ಸಂಮಂಧಿಕರು. — ಸಂಸ್ಥೆಯನ್ನು ಬಿಟ್ಟುಬಂದು ಲಗ್ನ ಮಾಡಿಕೊಂಡಿದ್ದಾರೆ. – ಮತ್ತೆ – ಕೆಲವು ದಿನಗಳಾದ ಮೇಲೆ, ಗುರುಗಳ ನಾಟಕ ಸಂಘದಲ್ಲಿ ಪಾತ್ರಮಾಡಲಿಕ್ಕೆ ಸೇರಿಕೊಂಡರು. — ಹೀಗೆ ಕೆಲದಿನಗಳುರಿಳಿದವು. ಶಿವಯೋಗಿ ಶಾಸ್ತ್ರಿಗಳ ಹೆಣ್ಣು ಮಗು ಶಿವಾಧೀನವಾಯಿತೆಂದು ದೇವಗಿರಿಯಿಂದ ಪತ್ರಬಂದಾಗ ಶಾಸ್ತ್ರಿಯವರು ದುಃಖ ತತ್ಪರರಾಗುತ್ತಾರೆ. ಆಗ ಗುರು ಪುಟ್ಟರಾಜರು:— ಯಾಕ ಅಳತೀಯಪ ಶಾಸ್ತ್ರಿ ? ಅಳಬೇಡ ಈ ಹೆಣ್ಣುಕೂಸಿನ ಆಶೆಬಿಡು ಮುಂದೆ ವರ್ಷ ತುಂಬುವದರೊಳಗಾಗಿ ಗಂಡು ಕೂಸು ಹುಟ್ಟುತ್ತದೆಂದು ನುಡಿದರು. — ಸರಿ ವರ್ಷ ತುಂಬುವದರೊಳಗಾಗಿ ಶಾಸ್ತ್ರಿಗಳಿಗೆ ಗಂಡು ಸಂತಾನವಾಯಿತು; ಗುರುವಿನ ಮಹತ್ವ ಸಾಕ್ಷಿಚಿತ್ರವಾಯಿತು. ಆ ಕೂಸಿಗೆ "ಕುಮಾರಸ್ವಾಮಿ" ಎಂದು ನಾಮಕರಣ ಮಾಡಿದ್ದಾರೆ; ಶಾಸ್ತ್ರೀಗಳವರು.

ಬೆಳಗಾಲಪೇಟೆಯ ವ್ಹಿ.ಬಿ. ಹಿರೇಮಠಡಾಕ್ಟರರಿಗೆ ಮಕ್ಕಳಿದ್ದಿಲ್ಲ. ಅವರು ಗುರುವರ್ಯರನ್ನು ಕರೆಸಿ; ಮನೆಯಲ್ಲಿ ಪೂಜೆಮಾಡಿಸಿ; ಶ್ರೀಗುರುವೆ ! ಸಂತಾನ ಕರುಣಿಸಬೇಕೆಂದು ಬೇಡಿಕೊಂಡರು. ಆಗ ಅವರು ನಿರ್ಮಲಹೃದಯ ಕಂಡು– ಚಿಂತಿಸಬೇಡಿರಿ ವರ್ಷದೊಳಗಾಗಿ ಗಂಡುಮಗುವಾಗುತ್ತಿದೆ ಎಂದುಗುರುವರ್ಯರು ಹೇಳಿದರು. ಗುರುವರ್ಯರ ಮಾತಿನಂತೆ ಗಂಡುಮಗು ಹುಟ್ಟಿತು. "ಗಾನಯೋಗಿ" ಎಂದು ಹೆಸರಿಟ್ಟಿದ್ದಾರೆ. – ಹೀಗೆ ಅನಂತರಿಗೆ ಅನಂತ ಪವಾಡಗಳನ್ನು ತೋರಿಸಿ ಭಕ್ತಿ ಜಾಗ್ರತಿ ಮಾಡಿದ ಧೀರ ವೀರಪುಟ್ಟರಾಜ ಗುರುಗಳು.

ಕೋಡಬಾಳ ಕ್ಯಾಂಪಿನಲ್ಲಿ ಪುರಾಣ ಮುಗಿಸಿಕೊಂಡು ಬಂದು ಸ್ನಾನ ಮಾಡಿ ಪೂಜೆಮುಗಿಸಿ ಪ್ರಸಾದಕ್ಕೆ ಕುಳಿತಿದ್ದಾರೆ. ದಿನಾಲೂ ಹಣ್ಣುಗಳು ಸಾಕಷ್ಟು ಇರುತ್ತಿದ್ದವು. ಆದರೆ ಇಂದು ಇದ್ದಿಲ್ಲ. ರುದ್ರಸ್ವಾಮಿ ಕರ್ಜಗಿ ಎಂಬ ವಿದ್ಯಾರ್ಥಿ ಸೇವಾ ಮಾಡುತ್ತಿದ್ದ. ಪ್ರಸಾದ ಎಡೆ ಮಾಡಲನುವಾದ ಸಮಯ ರಾತ್ರಿ ೧ ಘಂಟೆ. ಈದಿನ ಹಣ್ಣಿಲ್ಲವೆಂದು ರುದ್ರಸ್ವಾಮಿ ತಿಳಿಸಿದ.

ಹಂಣಿಲ್ಲದೆ ಪ್ರಸಾದ ಸರಿಯಾಗುವದಿಲ್ಲವೆಂದು ಗುರುಗಳ ಕ್ರಿಯಾ ಮೂರ್ತಿಗಳಾಗಿದ್ದ ಕಡಕೋಳದ ನೀಲಕಂಠಸ್ವಾಮಿಗಳು ಅಂದಾಗ — ಹಂಣು ತಮ್ಮ ಪ್ರಸಾದ ತೃಪ್ತಿಗೆ ಬರತಾವ್ರೆಪಾ !ಎಂದು ಗುರುಗಳು ಅನ್ನುವದಕ್ಕೂ ಹಾವೇರಿಯ ಒಬ್ಬ ಭಕ್ತ ಹಂಣು ತರುವದಕ್ಕೂ ಸರಿಹೋಯಿತು. ಹಾವೇರಿಯಿಂದ ಬರುವ ಬಸ್ ತಡವಾಗಿ ಬಂದದ್ದರಿಂದ ರಾತ್ರಿಯಾಗಿ ಬರಬೇಕಾಯಿತು ಎಂದು ಅಪರಿಚಿತ ಭಕ್ತ ಹೇಳಿದ. ಹಂಣುಕೊಟ್ಟ. ಅಪ್ಪಗಳವರ ! ಪ್ರಸಾದಕ್ಕೆ ಹಂಣ ಬಂದ್ವ್ವನೋಡ್ರೆಪ. ಮಹಲಿಂಗ ತೃಪ್ತಿಯಾಗಲಿ ! ಅಂತ ಗುರುಗಳು ಆನಂದದಿಂದ ಶಿವಸ್ತೋತ್ರದಲ್ಲಿ ಪ್ರಸಾದ ಸುರುಮಾಡಿದರು. ಹಂಣುತಂದ ಭಕ್ತನಿಗೆ ಪ್ರಸಾದ ಕೊಡಬೇಕೆನ್ನುವದರೊಳಗಾಗಿ ಭಕ್ತ ಕಣ್ಮರೆಯಾಗಿದ್ದ.

ಒಮ್ಮೆಗದುಗಿನ ನಾಲ್ವಾಡ ವೀರಪ್ಪನವರ ಮನೆಯಲ್ಲಿ ಗುರುಗಳ ಪೂಜೆ ನಡೆದಿತ್ತುಗುರುಸೇವಾದಲ್ಲಿನಾನು ಇದ್ದೆ.ಅಭಿಷೇಕಕ್ಕೆಆಕಳಹಾಲು ತಂದಿಟ್ಟದ್ದಿತು ಅಭಿಷೇಕ ಸಮಯಕ್ಕೆ ೧೫ ನಿಮಿಷ ಮುಂಚೆ ಹಾಲು ನೋಡಿದೆ ಹಾಲು ಮಾಯವಾಗಿತ್ತು; ಕಾಮಿಯ ಒಡಲಾಗರ ಸೇರಿತ್ತು. ನನ್ನ ಝುಂಗಾಬಲವೇ! ವುಡುಗಿತು. ಇಷ್ಟರಲ್ಲಿ ಗುರುಗಳ ಪೂಜೆ ಮುಗಿಯುತ್ತದೆ. ಅಭಿಷೇಕಕ್ಕೆ ಹಾಲಿಲ್ಲ. ಗುರುಗಳು ಸಿಟ್ಟಾಗಿ ಏನಾದರೂ ಅಂದರೆ ನನ್ನಗತಿ ಏನು? ಎಂದು ದಿಕ್ಕುಗಾಣದವನಾಗಿ ಅಲ್ಲೆ ಪಕ್ಕದ ಮನೆಯಲ್ಲಿ ವಿಚಾರಿಸಿದೆ ಹಾಲು ಸಿಗಲಿಲ್ಲ. ಕೊನೆಗೆ ಆ ಮನೆಯ ಹೆಂಣು ಮಕ್ಕಳಿಗೆ ಈ ವಿಷಯ ತಿಳಿಸಿದೆ. ಅಯ್ಯ ತಮ್ಮ ! ನಮ್ಮ ಆಕಳು ಹಿಂಡತಿತ್ತಪ್ಪ ೪–೫ ದಿನ ಆಯಿತು. ಒದ ಕೊಂಡೈತಿ. ಏನು ಮಾಡೂದು ? ಎಂದು ನುಡಿದರು. ಗಡಿಯಾರ ಮುಳ್ಳಿಗೆ ಹೊಂದಿಕೆಯಾಗಿ ನನ್ನ ಹೃದಯ ಬಡಿತ ಹೆಚ್ಚಾಗಹತ್ತಿತು. — ಅವ್ವಾ ಅವರೆ ? ಸದ್ದೆ ಪೂಜೆ ಮುಗಿತಾ ಇದೆ. ಈಗ ಹಾಲು ಇಲ್ಲಾಂದ್ರೆ ಗುರುಗಳು ಸಿಟ್ಟಾಗತಾರೆ. — ಕಾರಣ ನೋಡಿ ಪ್ರಯತ್ನ ಮಾಡಿ ನಿಮ್ಮ ಆಕಳನ್ನೇ ಹಿಂಡಿರಿ ! ಸ್ವಲ್ಪ ಹಿಂಡಿದರೆ ಸಾಕು ಎಂದು ವತ್ತಾಯ ಹಚ್ಚಿದೆ ನನ್ನ ವತ್ತಾಯಕ್ಕೆ ಕಟ್ಟುಬಿದ್ದು ಎದ್ದುಹೋಗಿ ಆಕಳ ಡುಬ್ಬದ ಮೇಲೆ ಸೀರು ಹಾಕಿ ಬೆನ್ನ ಚಪ್ಪರಿಸಿ ಹಿಂಡಲಿಕ್ಕೆ ಹತ್ತಿದಾಗ ಅರ್ಧ ಚರಿಗೆಯಷ್ಟು ಹಾಲು ಹಿಂಡಿತು. ಮನೆಯವರಿಗೆಲ್ಲ ಅತ್ಯಾಶ್ಚರ್ಯ. ನನಗಂತೂ ಹೇಳತೀರದು ? ೩ ತಿಂಗಳಿಂದ ಮುಂಜಾನೆ ಒಂದೊಂದೆ ವಾಟೆ ಹಾಲ್ಹಿಂಡಿ, ೮ ದಿನದಿಂದ

ಹಿಂಡುವದು ಬಿಟ್ಟಿದ್ದ ಆಕಳು ಗುರುವಿನ ಪೂಜೆಗೆ ಅರ್ಘ ತಂಬಿಗೆ ಹಾಲು ಹಿಂಡಿತು. ಎಂಥ ಪವಾಡ ? ಅಗಮ್ಯ ಪವಾಡ ?

ಹಾವೇರಿ ತಾಲೂಕಿನ ಯಲಗಟ್ಟಿಗ್ರಾಮದ ಹಾಲಪ್ಪಕೋರಿ ಎನ್ನುವರು. ಹಾಗೂ ವಿರುಪಾಕ್ಷಪ್ಪ ದೇಶಹಳ್ಳಿ, ಇಬ್ಬರಿಗೂ ಮಕ್ಕಳಿದ್ದಿಲ್ಲ. ಇವರು ಗುರುಗಳನ್ನು ಕರಿಸಿ ತಮ್ಮ ತಮ್ಮ ಮನೆಯಲ್ಲಿ ಪೂಜೆಮಾಡಿ, ಇಬ್ಬರೂ ಗಂಡು ಸಂತಾನ ಅಪೇಕ್ಷಿಸಿದರು. ಶಿವನು ನಿಮಗೆ ಗಂಡುಸಂತಾನ ಕರುಣಿಸುತ್ತಾನೆ ಕಾಳಜಿ ಬಿಡಿರಿ. ಎಂದು ಗುರುಗಳು ಇಬ್ಬರಿಗೂ ಹೇಳಿದರು. ಹೇಳಿದಂತೆ ವರ್ಷದಲ್ಲಿ ಇಬ್ಬರಿಗೂ ಗಂಡು ಮಕ್ಕಳಾದವು. ಅವರಿಬ್ಬರೂ ಕೂಸುಗಳಿಗೆ "ಪಂಚಾಕ್ಷರಿ" ಅಂತ ಹೆಸರಿಟ್ಟಿದ್ದಾರೆ.

ಮಗಳಿಗೆ ಸೀರಿಯಸ್ ಸೀಕಾಗಿದೆ ಎಂದು ಊರಿನಿಂದ ತಾರ ಬಂದಿತು ಶಿವಮೂರ್ತಿ ಮಾಸ್ತರ ದೇವಗಿರಿಯವರಿಗೆ. ಆಗ ಗಾಬರಿಯಾಗಿ ಮಾಸ್ತರರು ಊರಿಗೆ ಹೊರಟು ನಿಂತಾಗ– ಈಗ ಊರಿಗೆ ಹೋಗಬೇಡವೆಂದು ಕಟ್ಟಾಜ್ಞೆ ಮಾಡಿದರು ಗುರು ಪುಟ್ಟರಾಜರು. ಮಗಳಿಗೆ ಸೀರೆಯಸ್ಸಿದೆ ಎಂದು ತಿಳಿದಾಗ ಯಾವ ತಂದೆಗೆ ಸಮಾಧಾನವಾಗುತ್ತಿದೆ ? — ಅಂತೇ ಮಾಸ್ತರರು ಊರಿಗೆ ಹೋಗುತ್ತೇನೆ ಎಂದು ಗುರುಗಳಲ್ಲಿ ಕೇಳಿಕೊಂಡರು. — ಯಾಕಿಷ್ಟು ಚಿಂತಿ ತಾಳಿರುವಿ ಶಿವಮೂರ್ತೆಯ್ಯ ! ನಿನ್ನ ಮಗಳಿಗೇನೂ ಆಗುವದಿಲ್ಲ. ಆಕೆಯನ್ನು ಜಡ್ಡಿನಿಂದ ಪಾರುಮಾಡುವ ಭಾರ ನನಗಿರಲಿ ! ಎಂದು ನಿರ್ಧಾರದ ಧ್ವನಿಯಲ್ಲಿ ಹೇಳಿದರು ಪುಟ್ಟರಾಜರು. — ಆದರೂ ಮಾಸ್ತರರಿಗೆ ಮಗಳ ಮುಖ ಕಾಣಬೇಕೆಂಬ ಬಯಕೆ ಕಡಿಮೆಯಾಗಲಿಲ್ಲ. ಗುರುವೆ ! ಊರಿಗೆ ಹೋಗಿ ಬರುತ್ತೇನೆ. ದಯಮಾಡಿ ಅಪ್ಪಣೆ ಕೊಡಬೇಕೆಂದರು ಶಿವಮೂರ್ತೆಯ್ಯನವರು. — ಈಗ ಹೋಗಬೇಡ ! ಇನ್ನೆರಡು ಮೂರುದಿನ ಬಿಟ್ಟು ಅಮವಾಸೆ ಇದೆ. ಕಾರಣ ಅಮವಾಸೆ ಮಾಡಿ ಹೋಗು ! ಎಂದು ಅಪ್ಪಣೆ ಕೊಟ್ಟರು ಗುರುಗಳು. — ಗುರುಗಳ ಈ ಕಟ್ಟಪ್ಪಣೆಗೆ ಮನಸ್ಸಿಲ್ಲದೆ ಒಪ್ಪಿಕೊಂಡು, – ಅಮವಾಸೆಯಾದನಂತರ ಊರಿಗೆ ಹೊರಟರು ಶಿವಮೂರ್ತೆಯ್ಯನವರು. — ದಾರಿಯಲ್ಲಿ ಭೀಕರ ಪರಿಸ್ಥಿತಿ ................ ೨-೩ ದಿನಗಳ ಹಿಂದೆ ಅತಿಮಳೆಯಾಗಿ ಹೊಳೆಹಳ್ಳಗಳಿಗೆ ಮಹಾಪೂರ ಬಂದು ೪-೫ ದಿನ

ಊರಿನ ದಾರಿ ಕಟ್ಟಾಗಿ ಸಾರಿಗೆಗಳು ಬಂದಾಗಿದ್ದವು. ಇವರು ಹೊರಟ ದಿನವೇ ಮಹಾಪೂರ ಇಳಿದು ವಾಹನಗಳು ಓಡಾಡಹತ್ತಿದ್ದವು.........ಆವಾಗ ಅರಿವಾಯಿತು ಈ ಭೀಕರಪ್ರಸ್ಯ ಜ್ಞಾನದೃಷ್ಟಿಯಿಂದ ಕಂಡೇ ನನಗೆ ಊರಿಗೆ ಹೋಗಲು ಅಪ್ಪಣೆ ಕೊಡಲಿಲ್ಲ ಗುರುಗಳು ಎಂದು. — ಗುರುಗಳ ಮಾತು ಮಿಕ್ಕಿ ಬಂದಿದ್ದರೆ ನನಗೇನು ಗಂಡಾಂತರ ಕಾದಿತ್ತಲ್ಲ? ಎಂದು ಸ್ಮರಿಸಿ ಕೊಡು ಮಾಸ್ತರರು ತಮ್ಮ ಊರು ಸೇರಿದರು. – ಮನೆಗೆ ಬಂದಾಗ ದುಗುಡ ದಿಂದ ತುಂಬಿದ ಮಾಸ್ತರರಿಗೆ ಅತೀವ ಆನಂದವಾಗಿದೆ.... ಏಕೆ? ........ ಸೀರಿ ಯುಸ್ಸಿದ್ದ ಮಗಳು ಸೀಕಿನಿಂದ ಬಂಧಮುಕ್ತಳಾಗಿ ಅಂಗಳದಲ್ಲಿ ಆಡುತ್ತಿದ್ದಳು. ಅಪ್ಪಾ! ಎಂದು ಓಡಿಬಂದು ಮಗಳು ಅಪ್ಪಿಕೊಂಡಿತು. ಸಂತೋಷದಿಂದ ಮಾಸ್ತರರು ಮಗಳನ್ನಪ್ಪಿ ಮುದ್ದಾಡಿದರು. — ನಿನ್ನ ಮಗಳಿಗೆ ಏನೂ ಆಗುವದಿಲ್ಲ! ಸೀಕಿನಿಂದ ಪಾರುಮಾಡುವ ಭಾರನನಗಿರಲಿ! ಎಂದು ಹಿಂದ್ಹೇಳಿದ ಗುರು ಪುಟ್ಟರಾಜರ ಮಾತು ಮಾಸ್ತರರ ಕಂಣಮುಂದೆಕಟ್ಟಿತು; ಸುಖಾಶ್ರು ತೊಟಕ್ಕಿಟ್ಟಿತು.

ಹೋದವರ್ಷ ಕೋಬಾಳದ ಬಸವ ಪುರಾಣ ಮುಗಿಸಿಕೊಂಡು ಶಿವಂ ಣನವರಾಡಿಯೂಗಿ ಕೋಡಬಾಳದ ಸದ್ ಭಕ್ತರೊಂದಿಗೆ ಗುರು ಪುಟ್ಟರಾಜರು ಸಂಗಮ ಸುಕ್ಷೇತ್ರಕ್ಕೆ ಹೊರಟು ನಿಂತಾಗ. ಶಿವಮೂರ್ತಿಯ್ಯಾ! ನೀನು ಸಂಗ ಮಕ್ಕೆ ಬರುತ್ತೀಯಾ? ಎಂದು ಗುರು ಕೇಳಿದಾಗ. ಶಿವಮೂರ್ತಿಯ್ಯನವರು ವಲ್ಲೆ ನಂದರು -ಅಂದರೆ ಇಲ್ಲೀಇದ್ದು ಲಗ್ನ ಸಿದ್ಧತೆ ಮಾಡಬೇಕೆನು? ಎಂದು ಗುರುಗಳು ತಟ್ಟನೇ ಅಂದು ಬಿಟ್ಟರು ಲಗ್ನದಸುದ್ದಿಲ್ಲ........ ಅಂದಾಗ ಈಗಲ್ನದ ವಿಷಯ ಕನಸು ಮನಸಿನಲ್ಲಿಯೂಕಾಣದ ಶಿವಮೂರ್ತಿಯ್ಯನವರು— ನಗುತ್ತ ಲಗ್ನ ದಸುದ್ದಿ ಈಗ್ಯಾಕ್ರಿ? ನಾನು ಇನ್ನೂ ೧–೨ ವರುಷಲಗ್ನವಾಗುವದಿಲ್ಲವೆಂ- ದರು. ನೀನು ವಲ್ಲೆನೆಂದರೆ ಅದುಕೇಳಬೇಕಲ್ಲ? ನಾವು ಸಂಗಮಕ್ಕೆ ಹೋಗಿ ಬರುವದರೊಳಗಾಗಿ ನಿನ್ನ ಸಂಗಮ (ಮಂಗಲಕಾರ್ಯ) ಓಡಿಬರುತ್ತಿದೆ. ಎಂದು ಗುರುಗಳು ಅಂದು ಸಂಗಮಕ್ಷೇತ್ರಕ್ಕೆ ದಯಮಾಡಿಸಿದರು. ಇದೇ ರೀತಿ ಚಂದ್ರಶೇಖರಯ್ಯನವರಿಗೂ ಹಿಂದೊಮ್ಮೆ ಅಂದರೆ ೨–೩ ದಿನದ ಹಿಂದೆ ಅಂದಿದ್ದರು ಗುರುಗಳು.... ಸರಿ. ಗುರುಗಳು ಸಂಗಮಕ್ಕೆ ಹೋದ ಮಾರನೆ

ದಿನವೇ ಊರಿನಿಂದ ಶಿವಮೂರ್ತೆಯ್ಯನವರಿಗೆ ಲಗ್ನ ಸಮಾಚಾರ ಪೊತ್ತು ಕೊಂಡು ಎಕ್ಸಪ್ರೆಸ್ ಪತ್ರ ಬಂದಿತು. ಆದ್ದರಿಂದ ಆಗರಿವಾಯಿತು ಗುರುಗಳ ಭವಿಷತ್‌ದೃಷ್ಟಿ........ ಅರಿತು *ಶಿವಮೂರ್ತೆಯ್ಯನವರು †ಚಂಪ್ರಶೇಖರಯ್ಯ ನವರು ಆಶ್ಚರ್ಯ ಚಕಿತರಾದರು; ಗುರುಗಳ ಅಪ್ಪಣೆಯಂತೇ ಊರಿಗೆ ಹೋದರು ಲಗ್ನ ನಿಶ್ಚಯವಾಯಿತು. ೪–೫ ದಿನಗಳಲ್ಲಿ ಇಬ್ಬರದೂ ಒಂದೇ ಹಂದರದಲ್ಲಿ ಮದುವೆ ಮುಗಿದು ಹೋಯಿತು. ಗುರುಗಳು ಭವಿಷದ್ ನುಡಿದ ೧ ವಾರ ದಲ್ಲಿ ಮದುವೆಯ ಕಾರ್ಯ ನಿರ್ವಿಘ್ನತೆಯಿಂದ ಜರುಗಿತು; ಗುರುವಾಣಿ ನಿಜವಾಯಿತು.

ಈ ರೀತಿ ಹಲವು ಪವಾಡಗಳನ್ನು ಮಾಡಿದ್ದಾರೆ ಗುರುವರ್ಯರು. ಅವುಗಳೆಲ್ಲವನ್ನು ಇಲ್ಲಿ ಹೇಳಲಿಕ್ಕೆ ಹೊಗಲಾರೆ. ಅನ್ನ ಬೆಂದಿದೆಯೋ ಇಲ್ಲೋ? ಎಂದು ತಿಳಿಯಲಿಕ್ಕೆ ಒಂದು ಅಗಳು ಹಿಚುಕಿದರಾಯಿತಲ್ಲ? — ಹಾಗೆ ಸಂಕ್ಷಿಪ್ತವಾಗಿ ಕೆಲವನ್ನು ಕಾಣಿಸಿದ್ದೇನೆ.

ಶ್ರೀಗುರು ಪುಟ್ಟರಾಜರ ಘನತೆಯನ್ನು ಅದೆಷ್ಟು ಬಣ್ಣಿಸಿದರೂ ಕಡಿ ಮೆಯೇ? ಪರೋಪಕಾರಕ್ಕೆ ಪ್ರಾಣ ಮುಡುಪಾಗಿಟ್ಟ ಮಹಾತ್ಮ. ನಾಡಿನ ಸಮಸ್ತ ಅಂಧ ಅನಾಥರನ್ನು ಹೊಟ್ಟೆಯ ಮಕ್ಕಳಂತೆ ಕಂಡು ಸಾಕಿ ಸಲಹಿ ವಿದ್ಯೆಗಲಿಸುವ ಗುರುದೇವ; ಭೂ ಮಹಾದೇವ.

ತಿರಿದು ತಂದು ಒಬ್ಬರನ್ನು ಕರೆದುಕೊಂಡುಂಣಬೇಕು ।
ಕರೆಯ ದೊಬ್ಬರನು ಉಣುತಿಪ್ಪ ನೂಟವು ।
ನರಕದ ಊಟ ಸರ್ವಜ್ಞ ।

ತಿರಿದು ತಂದು ಕರೆದುಕೊಂಡು ಎಲ್ಲಮಕ್ಕಳಿಗೆ ವುಣಿಸಿ ತಣಿಸಿ ನಲಿಯು ತ್ತಾರೆ ಅಸಮತೆಯರಿಯದ ಗುರುಸಮರ್ಥ. ಪಂತಿಭೇದವ ಸೇರುತ್ತಿದ್ದಿಲ್ಲ; ಸೇರಲಿಲ್ಲ; ಸೇರುವವರೂ ಅಲ್ಲ. "ಭಿಕ್ಷೆ ಬೇಡಿ ಲಕ್ಷಾಂತರ ಜನರ ಸಲಹುವ ಗಂಡೆದೆಯ ಗಂಡ; ಪುಟ್ಟರಾಜೇಂದ್ರ."

---

*ಶಿವಮೂರ್ತೆಯ್ಯನವರೇ ಈಗ ಶಿವಮೂರ್ತಿಶಾಸ್ತ್ರಿಗಳು ಹಿರೇಮಠ ಹಿರೇ– ಮಲ್ಲೂರ ಅವರಾಗಿ ಗುರುಪ್ರೀತಿಗೆ ಪಾತ್ರರಾಗಿದ್ದಾರೆ. ಇದರಂತೆ ಚಂಪ್ರಶೇಖರಯ್ಯ ನವರೂ ಕೂಡಾ (ಚಂದ್ರಶೇಖರ ಶಾಸ್ತ್ರಿಗಳು ಇಜಾರಿಲಖಮಾಪೂರ) ಗುರು ಪ್ರೀತಿ ಗಣಿಯಾಗಿದ್ದಾರೆ.

ಪ್ರತಿವರುಷ ಕಾಳಿನ ಭಿಕ್ಷೆಗೆ ಬೆಂಬಲಗರಾಗಿ ದುಡಿಯುತ್ತಾರೆ ಕೋಡಬಾಳದ ಶಿವಂಣನವರು. ಇವರು ಗುರುವಿಗಾಗಿ, ಗುರುವಿನ ಸಂಸ್ಥೆಗಾಗಿ ದುಡಿಯುವದನ್ನು ಕಂಡರೆ ಹೀಗಾಗತಾ ಇದೆ. — ಪೂಜ್ಯ ಗುರು ಪಂಚಾಕ್ಷರಿಯವರಿಗೆ ಬಸರಿ ಗಿಡದ ವೀರಂಣನವರು ಹೇಗೆ ನೆರವಾದರೋ ಹಾಗೆ ಈ ಗುರು ಪುಟ್ಟರಾಜರಿಗೆ ಕೋಡಬಾಳದ ಶಿವಂಣನವರು ನೆರವಾಗಿದ್ದಾರೆ. ಗುರುಗಳ ಒಡನಾಟದಿಂದ ಶಿವಂಣನವರ ಹೃದಯ ಭಕ್ತಿಯ ಪಾತವಾಯಿತು. ಅಂತೇ ಮತ್ತೆ ೨ನೇ ವರುಷ ಸಿಂಗರಾಜ ವಿರಚಿತ "ಬಸವ ಪುರಾಣ" ಹಚ್ಚಿಸಿದರು. ಸಹೋದರ ಚನ್ನವೀರ ಬನ್ನೂರ ಈತನು ಓದುತ್ತಿದ್ದನು- ಗುರುವರ್ಯರು ಪುರಾಣ ಹೇಳುತ್ತಿದ್ದರು. ಮೊದಲನೇ ವರುಷದಂತೆ ಸಕಲ ವೈಭವದೊಂದಿಗೆ ೨ ತಿಂಗಳ ಪರ್ಯಂತರ ನಡೆದು ಮಹಾ ಮುಕ್ತಾಯವಾಯಿತು. .... ೨ ವರುಷ ಗುರುಗಳ ಉಪದೇಶ ಕೇಳಿದ ಶಿವಂಣನವರು ಗ್ರಾಮದ ಜನರು ಪರಮ ಭಕ್ತರಾಗಿ; ವೀರಶೈವಾಚಾರ ಸಂಪನ್ನರಾಗಿ ಬಾಳುತ್ತಾರೆ. ಶಿವಂಣನವರ ಭಕ್ತಿ ವಿಶೇಷದಿಂದ ಗುರುಗಳು ಕೋಡಬಾಳದಲ್ಲಿ ನೆಲಿಸಿ ಪುರಾಣ ಪ್ರವಚನ ಮಾಡಿದಾಗ ಕಲ್ಲು ಮಲ್ಲಿಗೆಯಾದಂತೆ – ಶುಂಭರು ಸಾಂಬನ ಹಂಬಲಿಗಳಾದರು, ಬಸಪ್ಪ ಮಾಸ್ತರ್ ಮಾಡಳ್ಳಿಯವರು ವ್ಯಾಖ್ಯಾನಕಾರರಾದರು. ಪರಮ ಭಕ್ತರಾದರು ಗಾಣಿಗೇರ ಸಿದ್ದಂಣನವರು, ಪತಿತರು ಪಾವನರಾದರು, ಸಮಸ್ತ ನಾಸ್ತಿಕರು ಆಸ್ತಿಕರಾದರು. ಮಹಾತ್ಮರಾದ ಗುರುವರ್ಯರ ಅಸ್‌ಖಲಿತವಾದ ವಾಣಿ ಕೋಡಬಾಳದ ಸುತ್ತ ಮುತ್ತಲಿನ ಪ್ರದೇಶವನ್ನು ಪಾವನಮಾಡಿತು. ಹಿಂದಿನ ೨ ವರುಷದಂತೆ ಈ ವರುಷ ! ಕೊನೆಯ ವರುಷವೆಂದು ಮೊದಲೇ ಸಂಕಲ್ಪಿಸಿದಂತೆ ೧೯೬೭ ಫೆಬ್ರುವರಿ ೧೨ರಂದು ವಿಜೃಂಭಣೆಯಿಂದ ಸುರುವಾಯಿತು, ಗುರು ಪುಟ್ಟರಾಜರಿಂದ ರಚಿತವಾದ (ಹಿಂದಿ) ಬಸವ ಪುರಾಣವು. ಗುರುಗಳೇ ಹೇಳುತ್ತಿದ್ದರು, ನಾನು ಓದುತ್ತಿದ್ದೆನು. ಕವಿ ಬರೆಧ ಕಾವ್ಯ, ತನ್ನ ಕಾವ್ಯ ವಾಣಿಯಿಂದಲೇ – ಕಾವ್ಯದ ಪ್ರವಚನ ಮಾಡಶ್ತಾನೆ ಅಂದಾಗ ಅದೆಷ್ಟು ಸ್ವಾರಸ್ಯವಾಗಿ ಬರುತ್ತೆ ? ನೀವೇ ವಿಚಾರಿಸಿರಿ ? ಮೊದಲಿನ ೨ ವರುಷಗಳಕಿಂತಲೂ ಈ ವರುಷ ಒಳ್ಳೇ ಸ್ವಾರಸ್ಯವಾಗಿ ವೈಭವದೊಂದಿಗೆ, ಸಮಗ್ರ ಮೂರು ತಿಂಗಳುಗಳ ವರೆಗೆ, ಜ್ಞಾನದಾಸೋಹ; ಅನ್ನದಾಸೋಹ ಗಳೆರಡನ್ನೂ ಎಥೇಚ್ಛ ವುಣಿಸಿದವರು ಗುರುವರ್ಯರು ಹಾಗೂ ಶಿವಂಣನವರು.

ಪುರಾಣದ ಮಹಾಮಂಗಲದ ಸಮಯಕ್ಕೆ ಅನಂತ ಸಾಸಿರ ಜನ ಸೇರಿದ್ದರು. ಅನಂತ ಗುರು–ಚರ–ವಿರಕ್ತರು ದಯಮಾಡಿಸಿದ್ದರು. ನಾಡಿನ ಪಂಡಿತರು–ರಾಜಕಾರಣಿಗಳು ಶುಭಸಂದೇಶ ಕಳಿಸಿದ್ದರು. ಈ ಪುರಾಣ ಮಹಾಮಂಗಲ ಜಗದಂಗುಲಕ್ಕೆ ಮಂಗಲಯುತ ಶುಭ ಸೂಚನೆಯಂತೆ ಕಂಡು ಬಂದಿತು; ವರ್ಣಿಸಲಸದಳವಾಗಿತ್ತು. ಪುರಾಣ ಸಂದರ್ಭದಲ್ಲಿ ಶ್ರೀ ಮ. ಘ. ಚ. ಶಿವಾನಂದಶಿವಾಚಾರ್ಯ ಪಟ್ಟಾಧ್ಯಕ್ಷರು ನೆಗಳೂರ, ಹಾಗೂ ಶ್ರೀ ಮ. ನಿ. ಪ್ರ ನೀಲಕಂಠಸ್ವಾಮಿಗಳು ಚೌಕಿಮಠ ಕಡಕೋಳ, ಈರ್ವರು ಸ್ವಾಮಿಗಳವರು ಪುರಾಣದ ಆದಿ ಅಂತ್ಯದ ವರೆಗೂ ಗುರುಪುಟ್ಟರಾಜರ ಆಶೆಯ ಮೇರೆಗೆ ಇದ್ದು ಹರಸಿದರು. ಇದರಿಂದ ನಮಗನಸ್ತಾಯಿದೆ. ಗುರುವಿರಕ್ತರಲ್ಲಿ ಭೇದ ವೆಣಿಸದ ಸಮತಾಪ್ರವೃತ್ತಿ ಪುಟ್ಟರಾಜರಲ್ಲಿ ಅಪಾರವಾಗಿದೆ ಎಂದು. ಗುರು ವಿರಕ್ತ ಶಿವನ ಎರಡು ಕಂಣುಗಳು. ಕಂಣಿಲ್ಲದ ನನಗೆ ಇವರೆ ಎರಡು ಕಂಣುಗಳು ಎಂದು ನಂಬಿ, ಗುರುವಿರಕ್ತರ ತೋಳದೊಟ್ಟಿಲದಲ್ಲಿ ಬೆಳೆಯುವ ಕೂಸು ನಾನೆಂದು ಹೇಳಿಕೊಳ್ಳುವರು ಪುಟ್ಟರಾಜರು. ಜಾತ್ಯಾತೀತನಾಗಿ, ಜನಾತೀತನಾಗಿ; ಸ್ಥಳಾತೀತನಾಗಿ ಮೆರೆಯುತ್ತಿಹರು; ಗುರುವರ್ಯ ಪುಟ್ಟರಾಜರು.

ನನ್ನ ಸಮಾಜ ಬದುಕಬೇಕು ! ನನ್ನ ಸಮಾಜ ಬೆಳಗಬೇಕು ಎಂದು ಸಮಾಜಕ್ಕಾಗಿ ದುಡಿದುಡಿದು ಕೊನೆಗೆ ಸಮಾಜ, ಸಮಾಜ ! ಎಂದು ಲಿಂಗೈಕ್ಯರಾದ ಕಾರಣಿಕ ಕುಮಾರ ಶಿವಯೋಗಿಯ ಕಾರುಣ್ಯದ ಶಿಸುವಾಗಿ, — ಸಮಾಜಕ್ಕಾಗಿ ದುಡಿಯುತ್ತಿದ್ದಾರೆ ಗುರು ಪುಟ್ಟರಾಜರು. "ಸಮಾಜವೇ ಪುಟ್ಟರಾಜ ! ಪುಟ್ಟರಾಜರೇ ಸಮಾಜ !" ಎಂದು ಜಗತ್ತು ಅರಿಯಿತು; ಜಗತ್ತಿನ ಜನ ನುಡಿಯಿತು; ಮಿಡಿಯಿತು.

ಸಮಾಜಾನುರಾಗಿಗಳು ಹಲವಾರು ವರುಷ ಬಾಳಿ ಬೆಳಗಬೇಕು, ಅಂಥಾ ಆಯುರಾರೋಗ್ಯ ಭಾಗ್ಯಗಳನ್ನು ಭಗವಂತ ಕೊಡಬೇಕು ಎಂದು ತ್ರಿಕರಣ ಪೂರ್ವಕವಾಗಿ ಬೇಡಿಕೊಳ್ಳುವೆ. ಹೃದ್‌ಗತಿ ತೋಡಿಕೊಳ್ಳುವೆ.

ಐವತ್ತೊಂಬ್ರು ವರುಷ ದುಂಬಿದ ಪುಟ್ಟರಾಜ ಗುರುಗಳು ಇನ್ನೂ ಹಲವು ವರ್ಷ ನಮ್ಮ ಗುರುಸ್ಥಾನದಲ್ಲಿದ್ದುಕೊಂಡು, ಶ್ರೀ ಗುರು ಪಂಚಾಕ್ಷರಿಯ ಸೇವೆ ಕೈಕೊಂಡು, ಮಂಗಲಗೊಂಡು ಮಂಗಲಮೂರ್ತಿಯಾಗಿ ಚಿರಕಾಲ ಬಾಳಲಿ !

ಬಾಳಿ ಬೆಳಗಲಿ ! ಎಂದು — ಮಂಗಲಾಂಗನನ್ನು ಭಂಗರಹಿತ ಮನಸ್ಸಿನಿಂದ ಮಂಗಲದ ನುತಿಗೈದು, ಮಂಗಳವಾರದಂದು ಈ ಕಥಾಂಗುಲಕ್ಕೆ ಮಂಗಲದ ಸೊನ್ನೆಯನಿಕ್ಕುವೆನು.



## — ನಮ್ಮಲ್ಲಿ ದೊರೆಯುವ ಗ್ರಂಥಗಳು —

ಪಂ. ಪುಟ್ಟರಾಜ ಕವಿಕೃತ


| | |
|---|---|
| ಶ್ರೀ ಬಸವೇಶ್ವರ ಪುರಾಣ (ಹಿಂದಿ), .... | ೧೦—೦ |
| ,, ಹಾವೇರಿ ಶಿವಬಸವೇಶ್ವರ ಪುರಾಣ (ಕನ್ನಡ) .... | ೩—೦ |
| ,, ಅಕ್ಕಮಹಾದೇವಿ ಪುರಾಣ ... ,, .... | ೨—೫ |
| ,, ಪುತ್ ಕುಮಾರ ಗೀತಾ (ಸಂಸ್ಕೃತ) .... | ೨—೦ |
| ,, ಪುತ್ ಕುಮಾರಗೀತಾ (ಕನ್ನಡ ಟೀಕೆ ಸಹಿತ) .... | ೧—೦ |
| ,, ಶಿವಶರಣ ಚನ್ನಯ್ಯನ ನಾಟಕ .... | ೧—೦ |
| ,, ಭಗವಾನ್ ಬಸವೇಶ್ವರ ನಾಟಕ .... | ೧—೦ |
| ,, ಶಿವಯೋಗಮಂದಿರ ಭಜನಾವಳಿ .... | ೧—೦ |
| ,, ಪಂಚಾಕ್ಷರ ಪ್ರಕಾಶ .... .... | ೨—೦ |
| ,, ಸಂಗೀತ ಶಾಸ್ತ್ರಜ್ಞಾನ .... .... | ೨—೦ |
| ,, ಶ್ರೀ ಪಂಚಾಕ್ಷರೇಶ್ವರ ಪುರಾಣ ಸದಾಶಿವ ಶಾಸ್ತ್ರಿಕೃತ .... | ೨—೦ |
| ,, ಶ್ರೀ ಜೀವನ ಕವನ ಗುರುಸ್ವಾಮಿ ಕಲಕೇರಿಕೃತ .... | ೦—೨ |
| ,, ಪಂಚಾಕ್ಷರೇಶ್ವರ ನಾಮಾವಳಿ ಸಿದ್ಧವೀರಶರ್ಮಾ ಸೊರಟ್ಟಿ ಕೃತ | ೦—೨ |
| ,, ಬಾಲಿಕಾ ಗೀತಾವಳಿ ,, | ೦—೫ |


## — ಅಚ್ಚಿನಲ್ಲಿರುವ ಗ್ರಂಥಗಳು —

— ಪಂ. ಪುಟ್ಟರಾಜ ಕವಿಕೃತ —

ಶ್ರೀ ವೀರಶೈವ ಸಿದ್ಧಾಂತ ಶಿಖಾಮಣಿ (ಹಿಂದಿ)

ಗಾನಸುಧಾ (ಕನ್ನಡ)

ಕರ್ಮಜ್ಞಾನ ಕಗ್ಗ. ಗುರುಸ್ವಾಮಿ ಕಲಿಕೇರಿಕೃತ.

ಶ್ರೀ ಸಿದ್ಧೇಶ್ವರ ಪ್ರೆಸ್, ಗದಗ.